ಶ್ರೀ:

ವ್ಯಾಸಮಹರ್ಷಿಪ್ರಣೀತ

# ಶ್ರೀ ಮಹಾಭಾರತವು.

## ವಿರಾಟಪರ್ವವು.

ಕರ್ಣಾಟಕ ವಚನವು.



ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯರ ವಿರಚಿತವು.





ಪ್ರಕಾಶಕರು:

ಕರ್ನಾಟಕ ಡಿಪೊ,

ನಂಬ್ರ 7, ತೇರಡಿಬೀದಿ, ತಿರುವಲ್ಲಿಕ್ಕೇಣಿ, ಮದ್ರಾಸು.

1931

# ವಿಜ್ಞಾಪನೆ.



ಸಂಸ್ಕೃತ ಮೂಲಗ್ರಂಥವನ್ನು ಸರಿಯಾಗಿ ಅನುಸರಿಸಿ, ಶ್ರೀಮದ್ರಾಮಾಯಣ, ಭಾಗವತ, ಭಾರತಗಳೆಂಬೀ ಮೂರು ಗ್ರಂಥಗಳನ್ನೂ ಕನ್ನಡಕ್ಕೆ ಪರಿವರ್ತಿಸಬೇಕೆಂಬುದೇ ನನ್ನ ಪ್ರಥಮ ಸಂಕಲ್ಪವು. ಅದರಂತೆ, ಭಗವದನುಗ್ರಹದಿಂದಲೂ, ಜನರಿಂದ ಸರ್ವತೋಮುಖವಾಗಿ ಒದಗಿಬಂದ ಪ್ರೋತ್ಸಾಹದಿಂದಲೂ, ಮೊದಲಿನ ಗ್ರಂಥಗಳೆರಡೂ ಪೂರ್ಣವಾದುವು. ಅದೇ ಪ್ರಯತ್ನವು ಅನುಸ್ಯೂತವಾಗಿ ನಡೆದು ಬಂದಿದ್ದರೆ, ಇಷ್ಟರೊಳಗಾಗಿ ಭಾರತದಲ್ಲಿ ಅನೇಕ ಪರ್ವಗಳು ಹೊರಗೆ ಬರಬಹುದಾಗಿದ್ದಿತು. ರಾಮಾಯಣ ಭಾಗವತಗಳ ಪುನರ್ಮುದ್ರಣಗಳಿಂದಲೂ, ಇತರ ಕಾರ್ಯಗೌರವದಿಂದಲೂ, ಅದಕ್ಕೆ ಅವಕಾಶವಿಲ್ಲದೆ ಇದುವರೆಗೆ ಕಾಲವಿಳಂಬವಾಯಿತು.

ಈ ಮಹಾಭಾರತದ ಮೇಲ್ಮೆಯನ್ನು ಕುರಿತು ಇಲ್ಲಿ ನಾನು ಹೆಚ್ಚೇನೂ ಹೇಳಬೇಕಾಗಿಲ್ಲ. "ಭಾರತಃ ಪಂಚಮೋ ವೇದಃ" ಎಂಬಂತೆ ಇದು ಐದನೆಯ ವೇದವೆನಿಸಿದೆ. "ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನತತ್ ಕ್ವಚಿತ್" ಎಂಬಂತೆ, ಈ ಮಹಾಭಾರತದಲ್ಲಿ ಹೇಳದ ವಿಷಯಗಳು ಬೇರೆಲ್ಲಿಯೂ ಇರಲಾರವು. ಆಗಾಗ ಮಹಾಭಾರತಕಥೆಯನ್ನು ಕೇಳಿದುದರಿಂದುಂಟಾದ ಮನಃಪರಿಪಾಕವೇ ಶಿವಾಜಿಗೆ ದೊಡ್ಡದೆಂದು ಚಕ್ರಾಧಿಪತ್ಯವನ್ನು ಸ್ಥಾಪಿಸಬೇಕೆಂಬ ವೀರ್ಯೋತ್ಸಾಹವನ್ನು ಹುಟ್ಟಿಸಲು ಕಾರಣವಾಯಿತು.

# ವಿಷಯಾನುಕ್ರಮಣಿಕೆ.

---

## ಸಮಯಪಾಲನ ಪರ್ವವು.



## ಕೀಚಕವಧ ಪರ್ವವು.

## ಗೋಗ್ರಹಣಪರ್ವವು.

# ಪಟಗಳ ಪಟ್ಟಿ.







# ಶ್ರೀ ಮಹಾಭಾರತವು

## ವಿರಾಟಪರ್ವವು

### ಪಾಂಡವಪ್ರವೇಶಪರ್ವವು

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

{ ಯುಧಿಷ್ಠಿರನು ಮೃಗಾಪಹೃತವಾದ ಅರಣಿಪಾತ್ರವನ್ನು ತಂದು ಬ್ರಾಹ್ಮಣನಿಗೆ ಒಪ್ಪಿಸಿ, ಧೌಮ್ಯನೊಡನೆ ಅಜ್ಞಾತ ವಾಸಕ್ಕಾಗಿ ಮಂತ್ರಾಲೋಚನೆ ಮಾಡಿದುದು. }

ಜನಮೇಜಯಮಹಾರಾಜನು ವೈಶಂಪಾಯನಮಹರ್ಷಿಯನ್ನು ಕುರಿತು "ಓ ಬ್ರಹ್ಮರ್ಷೀ! ನನ್ನ ಮುತ್ತಾತಂದಿರು ದುರ್ಯೋಧನನ ಭಯದಿಂದ ಪೀಡಿತರಾಗಿ, ವಿರಾಟನಗರದಲ್ಲಿ ಯಾರಿಗೂ ತಿಳಿಯದಂತೆ ಅಜ್ಞಾತವಾಸದಲ್ಲಿದ್ದುದು ಹೇಗೆ? ಪತಿವ್ರತೆಯೂ, ಮಹಾಭಾಗ್ಯವತಿಯೂ, ಯಾವಾಗಲೂ ಸುಖಭಾಗಿನಿಯೂ ಆಗಿದ್ದ ಆ ದ್ರೌಪದಿಯು, ಅಜ್ಞಾತವಾಸಕಾಲವನ್ನು ದುಃಖದಿಂದ ಹೇಗೆ ಕಳೆದಳು? ಮತ್ತು ಆ ಬ್ರಾಹ್ಮಣೋತ್ತಮರೆಲ್ಲ, ಸೂತರೊಡನೆಯೂ, ಅಡಿಗೆಯವರೊಡನೆಯೂ ಪರಿಚಾರಕರಾಗಿ ಕಲೆತು ಅಜ್ಞಾತವಾಸವನ್ನು ಕಳೆದುದು ಹೇಗೆ?" ಎಂದು ಕೇಳಿದನು. ಅದಕ್ಕಾ ವೈಶಂಪಾಯನಮುನಿಯು "ಓ ರಾಜೇಂದ್ರಾ! ಕೇಳು! ಧರ್ಮಾತ್ಮನಾದ

ತಮ್ಮಲ್ಲಿ ಬಹಳ ವಿಶ್ವಾಸವನ್ನು ತೋರಿಸುತಿದ್ದವರಾದುದರಿಂದ, ಅಜ್ಞಾತ ವಾಸಕ್ಕಾಗಿ ಅವರ ಅನುಮತಿಯನ್ನು ಪಡೆಯಲು, ಮಹಾತ್ಮರಾದ ಆ ಬ್ರಾಹ್ಮಣರ ಮುಂದೆ ಐದುಮಂದಿ ಪಾಂಡವರೂ ಕೈಜೋಡಿಸಿ ನಿಂತು ಹೀಗೆಂದು ವಿಜ್ಞಾಪಿಸುವರು.

"ಓ ಬ್ರಾಹ್ಮಣೋತ್ತಮರೇ! ಧೃತರಾಷ್ಟ್ರಪುತ್ರರು ಕಪಟದಿಂದ ನಮ್ಮ ರಾಜ್ಯವನ್ನೆಲ್ಲ ಅಪಹರಿಸಿಕೊಂಡು, ನಮ್ಮನ್ನು ಸರ್ವವಿಧದಿಂದಲೂ ಹೀಗೆ ದರಿದ್ರರನ್ನಾಗಿ ಮಾಡಿರುವ ವಿಚಾರವೆಲ್ಲವೂ ನಿಮಗೆ ತಿಳಿದುದೇ! ಅದಕ್ಕಾಗಿ ನಾವು ಕಳೆದ ಹನ್ನೆರಡುವರ್ಷಗಳ ಕಾಲವನ್ನು ವನವಾಸದಲ್ಲಿ ಕಳೆದೆವು. ಆಗ ನೀವೂ ನಮ್ಮ ಸಂಗಡಲೇ ಇದ್ದವರಾದುದರಿಂದ, ಕಾಡಿನಲ್ಲಿ ಸಿಕ್ಕಿದ ಆಹಾರಗಳನ್ನು ತಿಂದು, ಎಷ್ಟು ಕಷ್ಟದಿಂದ ನಾವು ಕಾಲವನ್ನು ಕಳೆಯುತಿದ್ದೆವೆಂಬುದನ್ನು ನೀವೂ ಚೆನ್ನಾಗಿ ಬಲ್ಲಿರಿ. ಇನ್ನು ಹದಿಮೂರನೆಯದಾದ ಒಂದು ವರ್ಷವನ್ನು ನಾವು ಅಜ್ಞಾತವಾಸದಲ್ಲಿ ಕಳೆಯಬೇಕಾಗಿದೆ. ಅದುದರಿಂದ, ನಾವು ಎಲ್ಲಿಯಾದರೂ ತಲೆಮರೆಸಿಕೊಂಡು ಇನ್ನೊಂದುವರ್ಷಕಾಲವನ್ನು ಕಳೆಯುವುದಕ್ಕಾಗಿ ಹೋಗುವೆವು. ಇದಕ್ಕಾಗಿ ನಿಮ್ಮೆಲ್ಲರ ಅನುಮತಿಯನ್ನು ಬೇಡುವೆವು.

ದುರ್ಯೋಧನನಾದರೋ ಪರಮ ದುಶ್ಶೀಲನು. ಕರ್ಣನೂ, ಶಕುನಿಯೂ ಅದೇ ಸ್ವಭಾವವುಳ್ಳವರು. ಈ ಮೂವರೂ ನಮ್ಮಲ್ಲಿ ಆತ್ಯಂತಿಕವಾದ ವೈರವನ್ನಿಟ್ಟಿರುವರು. ನಮ್ಮ ರಹಸ್ಯವೇನಾದರೂ ಅವರಿಗೆ ತಿಳಿದುಬಿಟ್ಟರೆ, ಬಹಳ ಕೆಡುಕನ್ನು ಮಾಡುವರು. ಅವರು ಈಗಾಗಲೇ ಗೂಢಚಾರರನ್ನು ನಿಯಮಿಸಿರುವರು. ತಮ್ಮ ಸ್ವಜನರ ಪ್ರವರ್ತನೆಗಳಲ್ಲಿಕೂಡ ಕಣ್ಣಿಟ್ಟಿರುವರು. ಆ ದುರಾತ್ಮರ ವಿಷಯದಲ್ಲಿ ಯಾವನುತಾನೇ ನಂಬಿಕೆಯನ್ನಿಡಬಹುದು? ಓ ಮಹಾತ್ಮರೆ! ಮೊದಲಿನಂತೆ ನಾವು ನಮ್ಮ ರಾಜ್ಯದಲ್ಲಿ ನೆಲೆಗೊಂಡು, ನಮ್ಮ ರಾಷ್ಟ್ರಗಳೊಳಗೆಲ್ಲ ಅಲ್ಲಲ್ಲಿರುವ ನಿಮ್ಮಂತಹ ಮಹಾತ್ಮರಾದ ಬ್ರಾಹ್ಮಣರೊಡನೆ ಕಲೆತು, ಸಂತೋಷಿಸುವ ಕಾಲವು ತಿರುಗಿ ಬಂದೀತೆ?" ಎಂದು ಹೇಳಿ, ಮಹಾಶುದ್ಧಾತ್ಮನೂ, ಧರ್ಮಪುತ್ರನೂ ಆದ ಆ ಯುಧಿಷ್ಠಿರನು, ಕಣ್ಣೀರನ್ನು ಬಿಡುತ್ತಾ, ಗದ್ಗದಕಂಠವುಳ್ಳ

ವನಾಗಿ, ಕೊನೆಗೆ ದುಃಖಾವೇಶದಿಂದ ಪ್ರಜ್ಞೆತಪ್ಪಿದಂತಾದನು. ಆಗ ಅಲ್ಲಿದ್ದ ಬ್ರಾಹ್ಮಣರೂ, ಅವನ ಸಹೋದರರೂ ಮುಂದೆ ಬಂದು ಅವನನ್ನು ಸಮಾಧಾನಗೊಳಿಸಿದರು. ಆಮೇಲೆ ಧರ್ಮಪುತ್ರನು, ಮೆಲ್ಲಗೆ ಮೂರ್ಛೆತಿಳಿದೆದ್ದು, ತುಂಬಿದ ಕಣ್ಣೀರಿನೊಡನೆ ಅಲ್ಲಿ ತನ್ನ ಮುಂದಿದ್ದ ಧರ್ಮಜ್ಞನಾದ ಧೌಮ್ಯ ಮಹರ್ಷಿಯನ್ನು ಚೆನ್ನಾಗಿ ದೃಷ್ಟಿಸಿ ನೋಡಿದನು. ಆಗ ಧೌಮ್ಯನು ಅಲ್ಲಿದ್ದ ಇತರ ಬ್ರಾಹ್ಮಣರೊಡನೆ ಧರ್ಮರಾಜನಿಗೂ, ಅವನ ತಮ್ಮಂದಿರಿಗೂ ಸಮಾಧಾನೋಕ್ತಿಗಳನ್ನು ಹೇಳಿ, ಕಾಲೋಚಿತವಾದ ಹಲವು ಬುದ್ಧಿವಾದಗಳನ್ನು ಧರ್ಮರಾಜನಿಗೆ ಹೇಳತೊಡಗಿದನು. “ಓ ರಾಜೇಂದ್ರಾ! ನೀನು ಅನೇಕ ವಿಷಯಗಳನ್ನು ಬಲ್ಲವನು. ಜಿತೇಂದ್ರಿಯನು. ಸತ್ಯಸಂಧನು. ಮನಸ್ಸನ್ನು ಜಯಿಸಬಲ್ಲವನು. ಇಂತಹ ಧೀರಸ್ವಭಾವವುಳ್ಳವರು, ತಮಗೆ ಏನಾದರೂ ಇಂತಹ ವಿಪತ್ತು ಬಂದಾಗ, ಹೀಗೆ ಧೈರ್ಯವನ್ನು ನೀಗಿ ಮರುಗಲಾರರು. ಕಷ್ಟವೆಂಬುದು ದೇವತೆಗಳಿಗೂ ತಪ್ಪಿದುದಲ್ಲ. ಮಹಾತ್ಮರಾದ ಆ ದೇವತೆಗಳಲ್ಲಿಯೇ ಅನೇಕರು ಶತ್ರುಜಯಕ್ಕಾಗಿ ಒಮ್ಮೊಮ್ಮೆ ಅಲ್ಲಲ್ಲಿ ತಲೆಮರೆಸಿಕೊಂಡು ಕಾಲವನ್ನು ಕಳೆದಿರುವರು. ಹಿಂದೆ ದಿತಿಯ ಪುತ್ರರು ಸ್ವರ್ಗರಾಜ್ಯವನ್ನಾಕ್ರಮಿಸಿಕೊಂಡಿದ್ದಾಗ, ದೇವರಾಜನು ಬಹಳ ದುಃಖಿತನಾಗಿದ್ದು, ಬ್ರಹ್ಮನನ್ನು ಮೆಚ್ಚಿಸಿ, ಅವನ ಅನುಗ್ರಹವನ್ನು ಪಡೆಯುವುದಕ್ಕಾಗಿ ಬ್ರಾಹ್ಮಣವೇಷದಿಂದ ನಿಷಧದೇಶಕ್ಕೆ ಹೋಗಿ, ಅಲ್ಲಿ ಗಿರಿಪ್ರಸ್ಥವೆಂಬ ನಗರದಲ್ಲಿ ಯಾರಿಗೂ ತಿಳಿಯದೆ ತಲೆಮರೆಸಿಕೊಂಡಿದ್ದು, ಶತ್ರುನಿಗ್ರಹಕ್ಕೆ ಬೇಕಾದ ಪ್ರಯತ್ನಗಳನ್ನು ನಡೆಸಿದನಲ್ಲವೆ? ಕೊನೆಗೆ ಅವನು ಬ್ರಹ್ಮಾನುಗ್ರಹದಿಂದ, ಮಹಾಬಲಾಢ್ಯರಾದ ದೈತ್ಯರೆಲ್ಲರನ್ನೂ ಜಯಿಸಿ, ತಿರುಗಿ ತನ್ನ ರಾಜ್ಯವನ್ನು ಪಡೆದು ಆಳಿದನಲ್ಲವೆ?. ಮಹಾವಿಷ್ಣುವೂ ಕೂಡ ಹಿಂದೊಮ್ಮೆ ಗರ್ಭದಲ್ಲಿರುವಾಗಲೇ ದೈತ್ಯರನ್ನು ಕೊಲ್ಲಬೇಕೆಂದುದ್ದೇಶಿಸಿ, ಅದಕ್ಕಾಗಿ ದಿತಿದೇವಿಯ ಬಳಿಯಲ್ಲಿದ್ದು ಸಮಯನಿರೀಕ್ಷಣೆ ಮಾಡಬೇಕಾದುದರಿಂದ, ಅಶ್ಮಗಿರಿಗೆ ಹೋಗಿ, ಅಲ್ಲಿ ಬಹುಕಾಲದವರೆಗೆ ಯಾರಿಗೂ ತಿಳಿಯದಂತೆ ವಾಸಮಾಡುತಿದ್ದನು. ಮಹಾವಿಷ್ಣುವು ಬಹಳ ಕುಳ್ಳನಾದ ಒಬ್ಬ ಬ್ರಹ್ಮಚಾರಿಯಂತೆ ವೇಷವನ್ನು ಮರೆಸಿಕೊಂಡು, ಬಲಿಚಕ್ರವರ್ತಿಯ ಬಳಿಗೆ ಹೋಗಿ, ತನ್ನ ಮೂರಡಿಗಳಿಂದ ಆ ಬಲಿಯ

ಅಲ್ಲಿಂದ ಹೊರಟರು. ಆಮೇಲೆ ಆ ಐದು ಮಂದಿ ಪಾಂಡವರೂ ದ್ರೌಪದಿಯನ್ನು ಕರೆದುಕೊಂಡು, ಧೌಮ್ಯರೊಡನೆ ಕಲೆತು ತಾವಿದ್ದ ಸ್ಥಳದಿಂದ ಒಂದು ಹರದಾರಿಯ ದೂರದವರೆಗೆ ಪ್ರಯಾಣಮಾಡಿದರು. ಆ ಪಾಂಡವರಲ್ಲಿ ಒಬ್ಬೊಬ್ಬರೂ ಪ್ರತ್ಯೇಕವಾಗಿ ಶಾಸ್ತ್ರಗಳನ್ನೋದಿ ಬಲ್ಲವರು. ಒಬ್ಬೊಬ್ಬರೂ ಮಂತ್ರಾಲೋಚನೆಯಲ್ಲಿ ನಿಪುಣರು. ಸಂಧಿವಿಗ್ರಹಾದಿ ರಾಜನೀತಿತತ್ವಗಳನ್ನು ಚೆನ್ನಾಗಿ ಅರಿತವರು. ಇಂತಹ ಪುರುಷಶ್ರೇಷ್ಠರಾದ ಆ ಸಹೋದರರೈವರೂ ಪತ್ನೀಸಮೇತರಾಗಿ, ಮರುದಿನದಿಂದ ಹಿಡಿದು ಅಜ್ಞಾತವಾಸವನ್ನು ನಡೆಸುವ ಉದ್ದೇಶದಿಂದ, ಮುಂದಿನ ಕಾರ್ಯಾಲೋಚನೆಗಾಗಿ ಕುಳಿತರು.

ಮೊದಲನೆಯ ಅಧ್ಯಾಯವು.

ಧರ್ಮರಾಜನು ವಿರಾಟನಗರದಲ್ಲಿ ಅಜ್ಞಾತವಾಸವನ್ನು ನಡೆಸುವುದಾಗಿ ತೀರ್ಮಾನಿಸಿ, ತಾನು ಯತಿವೇಷದಿಂದ ಅಲ್ಲಿರುವುದಾಗಿ ತಿಳಿಸಿದುದು.

ವೈಶಂಪಾಯನನು ಜನಮೇಜಯನನ್ನು ಕುರಿತು, "ರಾಜಾ ಕೇಳು! ಸತ್ಯಸಂಧರೂ, ಉದಾರಮನಸ್ಸುಳ್ಳವರೂ ಆದ ಪಾಂಡವರು, ತಮ್ಮ ವನವಾಸಕಾಲವನ್ನು ಕಳೆದಮೇಲೆ, ಮುಂದಿನ ಕಾರ್ಯವನ್ನು ಕುರಿತು ತಿರುಗಿ ಧೌಮ್ಯರೊಡನೆ ಆಲೋಚಿಸತೊಡಗಿದರು. ಆಗ ಕುಂತೀಪುತ್ರನಾದ ಯುಧಿಷ್ಠಿರನು, ತನ್ನ ತಮ್ಮಂದಿರನ್ನೂ, ದ್ರೌಪದಿಯನ್ನೂ, ಧೌಮ್ಯರನ್ನೂ ನೋಡಿ ಹೀಗೆಂದು ಹೇಳುವನು "ನಾವು ರಾಜ್ಯವನ್ನಗಲಿ ಬಂದು ಈಗ್ಗೆ ಹನ್ನೆರಡು ವರ್ಷಗಳಾದುವು. ಹದಿಮೂರನೆಯ ವರ್ಷವು ಆರಂಭವಾಯಿತು. ಈ ಒಂದು ವರ್ಷವನ್ನು ಕಳೆಯುವುದೇ ನಮಗೆ ಬಹಳ ಕಷ್ಟತರವಾಗಿದೆ. ಆದುದರಿಂದ, ಓ ಅರ್ಜುನಾ! ಈ ಮುಂದಿನ ವರ್ಷದಲ್ಲಿ ನಮ್ಮ ವಾಸಕ್ಕೆ ಅನುಕೂಲವಾದ ಸ್ಥಳವೊಂದನ್ನು ಆಲೋಚಿಸಿ ನೋಡು. ಈಗ ಹದಿಮೂರನೆಯ ವರ್ಷವು ಬಂದುಬಿಟ್ಟಿತು. ನಾವು ಎಲ್ಲಿ ವಾಸಮಾಡಬಹುದು? ನಾವೆಲ್ಲರೂ ಒಂದಾಗಿ ಸೇರಿಯೇ ದ್ರೌಪದಿಯೊಡನೆ ಆ ಧೃತ

ರಾಷ್ಟ್ರಪುತ್ರರಿಗೆ ತಿಳಿಯದಂತೆ ಈ ಒಂದು ವರ್ಷಕಾಲವನ್ನು ಕಳೆಯಬೇಕು" ಎಂದನು. ಆದಕ್ಕಾ ಅರ್ಜುನನು "ಮಹಾರಾಜಾ! ಭರತಕುಲೋತ್ತಮಾ! ಆ ಧರ್ಮದೇವತೆಯ ವರಪ್ರಸಾದದಿಂದ ನಾವು ಬೇರೆ ಜನರಿಗೆ ತಿಳಿಯದಂತೆ ವಾಸಮಾಡಬಹುದಲ್ಲವೆ? ಸುರಕ್ಷಿತಗಳಾಗಿಯೂ, ರಮಣೀಯಗಳಾಗಿಯೂ ಇರುವ ಕೆಲವುದೇಶಗಳ ಹೆಸರನ್ನು ನಾನು ತಿಳಿಸುವೆನು. ಅವುಗಳಲ್ಲಿ ನಿನಗೆ ಯುಕ್ತವಾಗಿ ತೋರಿದ ಯಾವುದಾದರೂ ಒಂದು ಸ್ಥಳವನ್ನು ನೀನೇ ನಿಶ್ಚಯಿಸು. ನಮ್ಮ ಕುರುದೇಶಗಳ ಸುತ್ತುಮುತ್ತಿನಲ್ಲಿ ಅತಿರಮಣೀಯಗಳಾದ ಎಷ್ಟೋ ದೇಶಗಳುಂಟು. ಪಾಂಚಾಲದೇಶಗಳುಂಟು. ಮತ್ಸ್ಯದೇಶಗಳುಂಟು. ಹಾಗೆಯೇ ಸಾಲ್ವ, ವೈದೇಹ, ಬಾಹ್ಲಿಕ, ದಶಾರ್ಣ, ಶೂರಸೇನ, ಕಳಿಂಗ, ಮಾಗಧವೇ ಮೊದಲಾಗಿ ಹಲವು ದೇಶಗಳಿವೆ. ಅವುಗಳಲ್ಲಿ ವಿರಾಟನ ಪಟ್ಟಣವು, ಅತ್ಯಂತ ರಮಣೀಯವಾಗಿ, ಜನಸಮೃದ್ಧವಾಗಿ, ಯಾವಾಗಲೂ ಸುಭಿಕ್ಷವಾಗಿ, ಐಶ್ವರ್ಯದಿಂದಲೂ ಬಹಳ ಮೇಲೆನಿಸಿಕೊಂಡಿರುವುದಾಗಿ ಕೇಳಿರುವೆನು. ಅದರಂತೆಯೇ ಇನ್ನೂ ಬೇರೆಬೇರೆ ಎಷ್ಟೋ ರಾಷ್ಟ್ರಗಳುಂಟೆಂದೂ ಕೇಳುವೆವು. ಅವುಗಳಲ್ಲಿ ನಿನಗೆ ಸಮ್ಮತವಾದ ದೇಶಕ್ಕೆ ನಾವೆಲ್ಲರೂ ಹೋಗಿ ವಾಸಮಾಡುವೆವು. ಅಣ್ಣಾ! ಮೇಲೆ ಹೇಳಿದ ದೇಶಗಳಲ್ಲಿ ನಿನಗೆ ಯಾವುದು ವಾಸಯೋಗ್ಯವೆಂದು ತೋರುವುದು? ನಾವು ರಾಜ್ಯಭ್ರಷ್ಟರಾಗಿ ಬಂದೆವೆಂದು ಈಗ ನೀನು ಮನಸ್ಸಿನಲ್ಲಿ ವ್ಯಸನಕ್ಕೆ ಅವಕಾಶಕೊಡಬಾರದು. ಮುಂದಿನ ಆಲೋಚನೆಯನ್ನು ಮಾಡಬೇಕು" ಎಂದನು. ಅದಕ್ಕಾ ಧರ್ಮರಾಜನು "ಎಲೆ ವತ್ಸಾ! ಮಹಾಬಾಹೂ! ನೀನು ಹೇಳಿದುದೇನೋ ವಾಸ್ತವವೇ! ಮಹಾಮಹಿಮನೂ, ಸರ್ವಭೂತೇಶ್ವರನೂ, ನಮಗೆ ಪ್ರಭುವೂ ಆದ ಆ ಧರ್ಮದೇವನು ಹೇಳಿದಂತೆಯೇ ನಡೆಯುವುದರಲ್ಲಿ ಸಂದೇಹವಿಲ್ಲ. ಅದು ತಪ್ಪಲಾರದು. ಆದರೆ, ಈಗ ನಾವೆಲ್ಲರೂ ಒಂದಾಗಿ ಕಲೆತು, ಚೆನ್ನಾಗಿ ಆಲೋಚಿಸಿ, ನಮ್ಮ ಅಜ್ಞಾತವಾಸಕ್ಕಾಗಿ, ರಮಣೀಯವಾಗಿಯೂ, ಕ್ಷೇಮಕರವಾಗಿಯೂ, ಯಾವ ವಿಧದಲ್ಲಿಯೂ ನಿರ್ಭಯವಾಗಿಯೂ ಇರುವ ಒಂದು ಸ್ಥಳವನ್ನು ನಿರ್ಧರಿಸಿಟ್ಟುಕೊಳ್ಳಬೇಕಾದುದವಶ್ಯವಲ್ಲವೆ? ವತ್ಸ ಅರ್ಜುನಾ! ನೀನು ಹೇಳಿದಂತೆ ಮತ್ಸ್ಯದೇಶಾಧಿಪತಿಯಾದ ವಿರಾ

ಟನು ಬಹಳ ಬಲಾಢ್ಯನು. ಅಲ್ಲದೆ ಅವನಿಗೆ ಪಾಂಡವರಲ್ಲಿ ಸಹಜವಾದ ಪ್ರೇಮವುಂಟು. ಮತ್ತು ಅವನು ಧರ್ಮಶೀಲನು. ಉದಾರಸ್ವಭಾವವುಳ್ಳವನು. ವಯೋವೃದ್ಧನು. ಸಾಧುಜನಪ್ರಿಯನು. ಗುಣಾಢ್ಯನು. ಲೋಕಪ್ರಸಿದ್ಧವಾದ ಖ್ಯಾತಿಯುಳ್ಳವನು. ದೃಢಭಕ್ತಿಯುಳ್ಳವನು. ಜಿತೇಂದ್ರಿಯನು. ಆದುದರಿಂದ ಓ ಪಾರ್ಥಾ! ಆ ಮತ್ಸ್ಯರಾಜನ ಆಶ್ರಯದಲ್ಲಿರುವುದೇ ಉತ್ತಮವೆಂದು ನನಗೆ ತೋರುವುದು. ನಿಮ್ಮೆಲ್ಲರಿಗೂ ಸಮ್ಮತವಾದರೆ, ನಾವೆಲ್ಲರೂ ಈ ಮುಂದಿನ ಹನ್ನೆರಡು ತಿಂಗಳ ಕಾಲವನ್ನು ಆ ವಿರಾಟನಗರದಲ್ಲಿ, ಆ ರಾಜನ ಸೇವೆಯನ್ನು ಮಾಡುತ್ತ ಕಳೆಯಬಹುದು. ಆದರೆ ನಮ್ಮಲ್ಲಿ ಯಾರುಯಾರು ಎಂತಹ ವೃತ್ತಿಗಳನ್ನವಲಂಬಿಸಿ, ಆ ರಾಜನ ಸೇವೆಯಲ್ಲಿರಬಹುದೋ, ಅದನ್ನೂ ಈಗಲೇ ನಿಶ್ಚಯಿಸಬೇಕು. ಆದುದರಿಂದ, ನಿಮ್ಮಲ್ಲಿ ಯಾರುಯಾರು ಯಾವಯಾವ ಕೆಲಸವನ್ನು ಮಾಡಬಲ್ಲಿರೆಂಬುದನ್ನು ತಿಳಿಸಿರಿ'' ಎಂದನು. ಆಗ ಅರ್ಜುನನು ''ಅಣ್ಣಾ! ನಮ್ಮ ವಿಚಾರವು ಹಾಗಿರಲಿ! ಮಹಾರಾಜನಾದ ನೀನು ಆ ವಿರಾಟನಗರದಲ್ಲಿ ಯಾವ ವಿಧವಾದ ಕಾರ್ಯದಿಂದ ಅವನ ಸೇವೆಯನ್ನು ಮಾಡಬಹುದೋ ಅದನ್ನು ಮೊದಲು ತಿಳಿಸು. ಅಣ್ಣಾ! ನೀನಾದರೋ ನಿಷ್ಕಪಟವಾದ ವೃತ್ತಿಯಿಂದಲೇ ಯಾವಾಗಲೂ ಇರತಕ್ಕವನು. ಧರ್ಮಮಾರ್ಗದಲ್ಲಿಯೇ ಧೃಢವಾಗಿ ನೆಲೆಸಿದವನು. ಅಸೂಯಾದಿ ದುರ್ಗುಣಗಳಿಲ್ಲದವನು. ಯಾವಾಗಲೂ ಸತ್ಯವನ್ನೇ ನುಡಿಯತಕ್ಕವನು. ಯಜ್ಞಗಳನ್ನು ನಡೆಸಿದವನು. ಕ್ರೋಧಲೋಭಗಳನ್ನು ಜಯಿಸಿದವನು. ಕೇವಲ ಮೃದುಸ್ವಭಾವವುಳ್ಳವನು. ಉದಾರಬುದ್ಧಿಯುಳ್ಳವನು. ಅಕಾರ್ಯಗಳಿಗೆ ನಾಚುವ ಸ್ವಭಾವವುಳ್ಳವನು. ಧಾರ್ಮಿಕನು. ಸತ್ಯಪರಾಕ್ರಮನು. ಮೊದಲೇ ತಪಸ್ಸಿನಿಂದ ಕಂದಿದ ದೇಹವುಳ್ಳ ನೀನು, ಆ ರಾಜನಲ್ಲಿ ಯಾವ ಬಗೆಯ ಸೇವಾಕಾರ್ಯವನ್ನು ತಾನೇ ಮಾಡಬಹುದು? ಕಾರ್ಯಗಳಲ್ಲಿ ಕಪಟವಾಗಿಯಾಗಲಿ, ಕ್ರೂರವಾಗಿಯಾಗಲಿ ವರ್ತಿಸುವುದು ನಿನ್ನ ಸುಸ್ವಭಾವಕ್ಕೆ ವಿರುದ್ಧವು. ಹೀಗಿರುವಾಗ ನೀನು ಆ ರಾಜನಲ್ಲಿ ಯಾವ ಕೆಲಸವನ್ನು ಮಾಡಬಹುದು? ಮಹಾರಾಜಾ! ಪಾಪಬುದ್ಧಿಯುಳ್ಳವರಿಗೆ ಯೋಗ್ಯವಾದ ಯಾವ ಕಷ್ಟಾನುಭವಕ್ಕೂ ನೀನು ಅರ್ಹನಲ್ಲ. ಹೀಗಿರುವಾಗ ನಿನಗೆ ಬಂದೊದಗಿರುವ

ಇಂತಹ ಮಹಾಘೋರವಾದ ಕಷ್ಟದಶೆಯಿಂದ ನೀನು ಉತ್ತೀರ್ಣನಾಗುವುದು ಹೇಗೆ?'' ಎಂದನು. ಅರ್ಜುನನು ಹೇಳಿದ ಮಾತನ್ನು ಕೇಳಿ ಧರ್ಮರಾಜನು "ಅರ್ಜುನಾ! ವಿರಾಟನಲ್ಲಿ ನಾನು ಮಾಡುವ ಕಾರ್ಯವೇನೆಂಬುದನ್ನು ತಿಳಿಸುವೆನು ಕೇಳು! ಮತ್ಸ್ಯದೇಶಕ್ಕೆ ಆನಂದಕರನಾದ ಆ ರಾಜನಲ್ಲಿಗೆ ಹೋಗಿ, ಅವನ ಸಭಾನಾಯಕನಾಗಿರಬೇಕೆಂಬುದು ನನ್ನ ಉದ್ದೇಶವು. ನಾನು ಅಶ್ವವಿದ್ಯೆಯನ್ನು ಕಲಿತಿರುವೆನು. ಪಗಡೆಯಾಟವನ್ನೂ ಚೆನ್ನಾಗಿ ಆಡಬಲ್ಲೆನು. "ನನ್ನ ಹೆಸರು ಕಂಕ'' ನೆಂದು ಹೇಳಿಕೊಂಡು ಅವನ ಆಶ್ರಯವನ್ನು ಪಡೆಯುವೆನು. ವತ್ಸ ಪಾರ್ಥ! ನನ್ನಲ್ಲಿ ಚಿನ್ನ ಬೆಳ್ಳಿಗಳಿಂದಲೂ, ಸ್ಫಟಿಕ ವೈಡೂರ್ಯಗಳಿಂದಲೂ, ದಂತದಿಂದಲೂ ನಿರ್ಮಿತಗಳಾದ ಕಪ್ಪು ಮತ್ತು ಕೆಂಪು ಬಣ್ಣದ ನಾನಾಬಗೆಯ ಚಾರಿಗಳುಂಟು ಅವು ಬಹಳ ಅಂದವಾಗಿ, ಒಳ್ಳೇ ಕಾಂತಿವಿಶಿಷ್ಟಗಳಾಗಿ, ಮೇಲೆ ಮೇಲೆ ನೋಡಬೇಕೆಂಬ ಆಶೆಯನ್ನು ಹುಟ್ಟಿಸುವಂತಿರುವುವು. ಅರಸನ ಮತ್ತು ಗೋವಿನ ಗುರುತುಳ್ಳ ಮಂಗಳಕರಗಳಾದ ಆ ಚಾರಿಗಳನ್ನು ಹಾಸುವೆನು. ಅಲ್ಲದೆ, ವತ್ಸ ಅರ್ಜುನಾ! ಬಣ್ಣದಲ್ಲಿ ಕೆಂಪಾಗಿ, ಮರಕತ ರತ್ನಖಚಿತವಾಗಿಯೂ, ಅಂದವಾಗಿಯೂ, ನೋಡುವವರಿಗೆ ಆನಂದಕರವಾಗಿಯೂ, ಒಳ್ಳೇ ಸಮರ್ಥರಾದ ಶಿಲ್ಪಿಗಳಿಂದ ನಿಮಿತಗಳಾಗಿಯೂ ಇರುವ ಪಗಡೇಕಾಯಿಗಳೂ ನನ್ನಲ್ಲಿವೆ. ತತ್ಕಾಲಕ್ಕೆ ಅವೇ ನನ್ನ ಭಾಗಕ್ಕೆ ಧನದಂತಿವೆ. ಆ ಕಾಯಿಗಳನ್ನು ಕೈಯಿಂದ ಮುಟ್ಟಿದರೂ, ಮನುಷ್ಯರ ಮನಸ್ಸಿಗೆ ಒಂದು ಬಗೆಯ ಹರ್ಷವುಂಟಾಗುವುದು. ಹಳ್ಳತಿಟ್ಟಿಲ್ಲದೆ ಸಮವಾಗಿಯೂ, ಧೂಳಿಲ್ಲದೆ ಶುದ್ಧವಾಗಿಯೂ ಇರುವ ಸ್ಥಳದಲ್ಲಿ ಚಾರಿಗಳನ್ನು ಹಾಸಿ, ದಾಳಗಳನ್ನುರುಳಿಸುತ್ತಿರುವುದೇ ನನಗೆ ಒಂದು ವಿನೋದವಾದ ಕಾಲಕ್ಷೇಪವೆನಿಸುವುದು. ಇದಲ್ಲದೆ ನಾನು, ಕಂಕನೆಂಬ ಸನ್ಯಾಸಿಯಾಗಿ ವಿರಾಟನ ಸಭೆಯಲ್ಲಿ ಸೇರಿದಾಗ, ಜ್ಯೋತಿಷ್ಯದಲ್ಲಿಯೂ, ಪಕ್ಷಿ ಶಕುನಗಳಲ್ಲಿಯೂ, ಇತರ ನಿಮಿತ್ತ (ಶಕುನ) ಶಾಸ್ತ್ರದಲ್ಲಿಯೂ, ಪಗಡೆಯಾಟದಲ್ಲಿಯೂ, ನಾನು ಹಿಂದೆ ಕ್ರಮವಾಗಿ ಓದಿದ ಬ್ರಹ್ಮಜ್ಞಾನಬೋಧಕವಾದ ವೇದದಲ್ಲಿಯೂ, ಎಲ್ಲಾ ವೇದಾಂಗಗಳಲ್ಲಿಯೂ, ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳಲ್ಲಿಯೂ, ನೀತಿಶಾಸ್ತ್ರಗಳಲ್ಲಿಯೂ ಪಾರಂಗತನಂತೆ ತೋರಿಸಿಕೊಂಡು,

ದಿರುವಂತಾಯಿತು. ಮಹಾವೀರ್ಯವುಳ್ಳ ಹಿಡಿಂಬನನ್ನೂ, ಕಿರ್ಮೀರರೆಂಬ ರಾಕ್ಷಸರನ್ನೂ ಕೊಂದು, ಆ ಕಾಡುಗಳನ್ನು ನೀನು ನಿಷ್ಕಂಟಕವಾಗಿ ಮಾಡಿದೆ. ಜಟಾಸುರವಧದಿಂದ ನೀನು ದ್ರೌಪದಿಯ ಮಹಾವಿಪತ್ತನ್ನು ನೀಗಿಸಿದೆಯಲ್ಲದೆ, ನಮ್ಮನ್ನೂ ಮರಣದಿಂದ ತಪ್ಪಿಸಿದೆ. ಇಂತಹ ಮಹಾ ವೀರ್ಯಸಂಪನ್ನನಾದ ನೀನು, ಆ ವಿರಾಟನಗರದಲ್ಲಿ ಹೇಗೆತಾನೇ ಸೇವಾಕಾ ರ್ಯವನ್ನು ಮಾಡಿ ಜೀವಿಸಬಲ್ಲೆ? ವತ್ಸ ವೃಕೋದರಾ! ನೀನಾದರೋ ಕೋಪಸ್ವಭಾವವುಳ್ಳವನು. ಮಹಾಬಲಾಢ್ಯನು. ಇಂತಹ ನೀನು ಕೇವಲ ದುರ್ಬಲನಾದ ಆ ವಿರಾಟನ ನಗರದಲ್ಲಿ ಹೇಗೆ ಸೇವೆಮಾಡಿಕೊಂಡಿರಬಲ್ಲೆ" ಎಂದನು. ಅದಕ್ಕಾ ಭೀಮನು, "ಓ ನರೇಂದ್ರಾ! ನಾನು ವಲಲನೆಂಬ ಹೆಸರಿನಿಂದ ವಿರಾಟನಲ್ಲಿ ಅಡಿಗೆಯವನಾಗಿರಬೇಕೆಂದು ಉದ್ದೇಶಿಸುವೆನು. ಒಳ್ಳೆಯ ರುಚಿರುಚಿಯಾದ ಬಗೆಬಗೆಯ ರಸಗಳನ್ನೂ, ತೊವ್ವೆಗಳನ್ನೂ ನಾನು ಮಾಡಬಲ್ಲೆನು. ಅಡಿಗೆಯ ಕಾರ್ಯದಲ್ಲಿ ನನಗೆ ನೈಪುಣ್ಯವುಂಟು. ಇದಕ್ಕೆ ಮೊದಲು ವಿರಾಟನು ಒಳ್ಳೆಯ ಸುಶಿಕ್ಷಿತರಾದ ಅಡಿಗೆಯವರಿಂದ ಮಾಡಿಸಿದ ಯಾವಯಾವ ಬಗೆಯ ವ್ಯಂಜನಗಳುಂಟೋ, ಅವುಗಳನ್ನೂ ರುಚಿಯಲ್ಲಿ ಮೀರಿಸುವಹಾಗೆ ಪದಾರ್ಥಗಳನ್ನು ಮಾಡಿ ಬಡಿಸಿ, ಆ ರಾಜನ ಮನಸ್ಸನ್ನು ಸಂತೋಷಪಡಿಸಬಲ್ಲೆನು. ಆ ರಾಜನು ಇದುವರೆಗೆ ಹಿಂದೆ ಯಾವಾಗಲೂ ತಿಂದು ಕಾಣದ ರಸವತ್ತಾದ ಮತ್ತು ಗುಣಯುಕ್ತವಾದ ಅನ್ನಪಾನಾದಿಗಳನ್ನು ಒದಗಿಸಬಲ್ಲೆನು. ನನ್ನ ಅಡಿಗೆಯ ರುಚಿಯನ್ನು ಒಂದಾವರ್ತಿ ಸವಿನೋಡಿದರೆ, ಮತ್ಸ್ಯರಾಜನು ನನ್ನಲ್ಲಿ ಅಸಾಧಾರಣಪ್ರೀತಿ ಯನ್ನಿಡುವನು. ಅಣ್ಣಾ! ಇದು ಮಾತ್ರವಲ್ಲ. ಅಡಿಗೆಗೆ ಬೇಕಾದ ಸೌದೆ ಗಾಗಿ ನೂರಾರು ಮರಗಳನ್ನು ಕಿತ್ತು, ಒಂದೇ ಹೊರೆಯಾಗಿ ಹೊತ್ತು ತರು ವೆನು. ಆ ವಿರಾಟನು ನಾನು ಮಾಡತಕ್ಕ ಈ ಅದ್ಭುತಕಾರ್ಯಗಳನ್ನು ನೋಡಿದರೆ, ಎಂದಿಗೂ ನನ್ನನ್ನು ಅಲಕ್ಷ್ಯಮಾಡಲಾರನು. ಅಣ್ಣಾ! ಮತ್ತೊಂದು ಸಂಗತಿಯುಂಟು. ಇದುವರೆಗೆ ಯಾರಿಗೂ ಸೋಲದೆ ಆ ವಿರಾ ಟನ ಆಸ್ಥಾನದಲ್ಲಿದ್ದುಕೊಂಡು ಎಂತವರಿಗೂ ತಾವು ದುರ್ಜಯರೆಂಬ ನಂಬಿಕೆಯನ್ನು ರಾಜನಿಗೆ ಹುಟ್ಟಿಸಿ ಅವನನ್ನಾಶ್ರಯಿಸಿ ಜೀವಿಸುತ್ತಿರುವ ಜಟ್ಟಿಗಳೆಲ್ಲರನ್ನೂ ಜಯಿಸಿ, ಅವನನ್ನು ಸಂತೋಷಗೊಳಿಸಬಲ್ಲೆನು. ಆದರೆ,

ಐದುವರ್ಷಗಳ ಕಾಲದವರೆಗೆ ವಾಸಮಾಡಿ ಬಂದವನು. ಸಮಸ್ತ ಶಸ್ತ್ರಧಾರಿಗಳಿಗೂ ಮೇಲೆನಿಸಿದ ಈತನು, ಬ್ರಹ್ಮಚರ್ಯೆಯನ್ನು ಹಿಡಿದು ದೃಢವ್ರತವುಳ್ಳವನಾಗಿ, ಮಹಾವೇಗವುಳ್ಳುವಾಗಿಯೂ, ಸೂಕ್ಷ್ಮಗಳಾಗಿಯೂ, ವಿಚಿತ್ರಗಳಾಗಿಯೂ, ಅಮೋಘಗಳಾಗಿಯೂ ಇರುವ ಅಸ್ತ್ರಗಳನ್ನೂ ಪಡೆದು ಬಂದಿರುವನು. ಮತ್ತು ಇವನು ಸರ್ವವಿಷಯಗಳನ್ನೂ ಬಲ್ಲವನು. ಸರ್ವಜನಪ್ರಿಯನು. ವಾಗ್ಮಿಗಳಲ್ಲಿ ಮೇಲೆನಿಸಿದವನು. ಈತನು ಇಂದ್ರನಿಂದ ಅನೇಕಾಸ್ತ್ರಗಳನ್ನು ಪಡೆದು, ಅವನಿಂದ ಅನುಜ್ಞಪ್ತನಾಗಿ ತಿರುಗಿ ಭೂಮಿಗೆ ಬಂದವನು. ವತ್ಸ ಭೀಮಾ! ಹೆಚ್ಚೇಕೆ? ಪಾಂಡುಪುತ್ರರಾದ ನಮ್ಮೆಲ್ಲರ ಕ್ಷೇಮಕ್ಕಾಗಿಯೂ, ಧೃತರಾಷ್ಟ್ರಪುತ್ರರಾದ ಕೌರವರ ವಿನಾಶಕ್ಕಾಗಿಯೂ ಈ ಲೋಕದಲ್ಲಿ ಜನಿಸಿದ ಹನ್ನೆರಡನೆಯ ರುದ್ರನೆಂದೂ, ಹದಿಮೂರನೆಯ ಆದಿತ್ಯನೆಂದೂ, ಒಂಭತ್ತನೆಯ ವಸುವೆಂದೂ, ಎಂಟನೆಯ ಕುಲಪರ್ವತವೆಂದೂ ನಾನು ಇವನನ್ನು ಭಾವಿಸಿರುವೆನು. ಇವನ ಎಡಬಲದ ತೋಳುಗಳೆರಡೂ ಒಂದೇ ಅಳತೆಯುಳ್ಳವುಗಳಾಗಿ, ದೀರ್ಘವಾಗಿ, ಮಹಾವೃಷಭದ ಮುಂಗಾಲುಗಳಿಗೆ ಸಮಾನಗಳಾಗಿ, ಜ್ಯಾಘಾತದಿಂದ (ಬಿಲ್ಲಿನ ಹೆದೆಯ ಪೆಟ್ಟಿನಿಂದ) ಜಿಡ್ಡುಗಟ್ಟಿದ ಗುರುತುಗಳನ್ನೊಳಕೊಂಡು, ಉಬ್ಬಿ ದಪ್ಪನಾಗಿಯೂ, ದೊಡ್ಡ ಬಾಗಿಲಗುಳಿಗೆ ಸಮಾನವಾಗಿಯೂ, ಆನೆಯ ಸೊಂಡಿಲಂತೆ ದುಂಡಾಗಿ, ಅಂಗುಲಿತ್ರಾಣಗಳನ್ನು (ಕೈಗೌಸಣಿಗೆ) ಧರಿಸಲು ಯೋಗ್ಯವಾಗಿಯೂ, ಮೃದುವಾದ ಮತ್ತು ಕೆಂಪಾದ ಅಂಗೈಗಳಿಂದ ಮಂಗಳಕರವಾಗಿ ಶೋಭಿಸುತ್ತಿರುವುವು. ಮತ್ತು ಶ್ಯಾಮಲವಾದ ಮೈಬಣ್ಣದಿಂದಲೂ, ಯೌವನ ವಯಸ್ಸಿನಿಂದಲೂ, ಸುರುಳಿಗಟ್ಟಿದ ತಲೆಕೂದಲುಗಳಿಂದಲೂ ದರ್ಶನೀಯವಾದ ಸುಂದರಾಕೃತಿಯುಳ್ಳವನಾಗಿ, ಗಾಂಡೀವಧಾರಿಯೆಂದೂ, ಶ್ವೇತಾಶ್ವನೆಂದೂ, ಕಿರೀಟಿಯೆಂದೂ, ವಾನರಧ್ವಜನೆಂದೂ ಪ್ರಖ್ಯಾತಿಗೊಂಡ ಈ ಕುಮಾರನು, ಆ ವಿರಾಟನ ಬಳಿಯಲ್ಲಿ ಯಾವ ವೇಷವನ್ನು ಧರಿಸಿ, ಯಾವ ವೃತ್ತಿಯನ್ನವಲಂಬಿಸಿ, ಯಾವ ಕಾರ್ಯಗಳನ್ನು ಮಾಡುತ್ತ, ಹೇಗೆ ನಡೆದುಕೊಳ್ಳುವನೋ ಕಾಣೆನು. ಭೀಭತ್ಸುವೆಂದೂ, ಭಯಂಕರ ಧನುರ್ಧಾರಿಯೆಂದೂ ಲೋಕವಿದಿತನಾದ ನಮ್ಮ ಈ ಅರ್ಜುನನು, ಯಾವ ಕಾರ್ಯದಿಂದ ವಿರಾಟನನ್ನು ಮೆಚ್ಚಿಸುತ್ತ,

ನಿಯತಕಾಲವನ್ನು ಕಳೆಯುಬಹುದು?'' ಎಂದನು. ಆಗ ಅರ್ಜುನನು ಅಣ್ಣಾ! ನೀನು ಹೇಳಿದುದೆಲ್ಲ ನಿಜವೇ! ಜ್ಯಾಘಾತಗಳಿಂದಲೂ, ಆಗಾಗ ತೋಳನ್ನು ತಟ್ಟುವುದರಿಂದಲೂ, ಪಟ್ಟುಗಟ್ಟಿದ ಈ ನನ್ನ ತೋಳಿನ ಗುರು ರುತುಗಳನ್ನು, ಬೇರೊಬ್ಬರ ಕಣ್ಣಿಗೆ ಕಾಣದಂತೆ ಮರೆಸಿಡಬೇಕಾದರೆ, ನಾನು ಯಾವಾಗಲೂ ಕಂಚುಕವನ್ನು (ರವಿಕೆಯನ್ನು) ತೊಟ್ಟುಕೊಂಡೇ ಇರಬೇ ಕಲ್ಲದೆ ಬೇರೆವಿಧದಿಂದ ಅವುಗಳನ್ನು ಮರೆಸಿಡಲು ಸಾಧ್ಯವಿಲ್ಲ. ಹಾಗೆ ನಾನು ಹೆಂಗಸಂತೆ ರವಿಕೆಯನ್ನು ತೊಟ್ಟುಕೊಳ್ಳುವುದು ಹೀನಕಾರ್ಯ ವಾಗಿದ್ದರೂ, ಕಾರ್ಯಸಾಧನೆಗಾಗಿ ನಾನು ಹಾಗೆ ಮಾಡಿಯೇ ತೀರ ಬೇಕು. ಜ್ಯಾಘಾತದಿಂದ ಅಲ್ಲಲ್ಲಿ ವಿಶಾಲವಾದ ಗುರುತುಗಳುಳ್ಳ ಈ ನನ್ನ ಉಬ್ಬಿದ ಭುಜಗಳನ್ನು ಮರೆಸಿಡುವುದಕ್ಕೆ ಬೇರೆ ಉಪಾಯವಿಲ್ಲ. ಸ್ತ್ರೀವೇ ಷಕ್ಕೆ ತಕ್ಕಂತೆ ಕೈಯಲ್ಲಿ ಎರಡು ಶಂಖದ ಬಳೆಗಳನ್ನೂ, ಕಿವಿಯಲ್ಲಿ ತೂಗಾ ಡುವ ಎರಡು ಕುಂಡಲಗಳನ್ನೂ ತೊಟ್ಟುಕೊಂಡು, ತಲೆಯ ಕೂದಲನ್ನು ಜಡೆಹಾಕಿ ಹೆಣೆದು ಹಿಂದೆ ತೂಗುಬಿಟ್ಟು, ನನ್ನ ಹೆಸರು ಬೃಹನ್ನಳೆಯೆಂದು ಹೇಳಿಕೊಂಡು ಆ ರಾಜನ ಬಳಿಗೆ ಹೋಗುವೆನು. ಮತ್ತು ಅಲ್ಲಿ ನಾನು ಸ್ತ್ರೀಯರ ಸ್ವಭಾವಕ್ಕೆ ತಕ್ಕಂತೆ, ಆಗಾಗ ಕಥೆಗಳನ್ನು ಹೇಳುತ್ತ, ಪ್ರಜೆ ಗಳ ನಡತೆಗಳನ್ನೆಲ್ಲ ಹಲವು ಬಗೆಯ ಪರಿಹಾಸಗಳಿಂದ ಉದ್ಘಾಟಿಸಿ ತೋರಿ ಸುತ್ತ, ವಿರಾಟ ರಾಜನಿಗೂ, ಅವನ ಅಂತಃಪುರದ ಸ್ತ್ರೀಯರಿಗೂ ಸಂ ತೋಷವನ್ನುಂಟುಮಾಡುತ್ತಿರುವೆನು. ಇದಲ್ಲದೆ ಆ ರಾಜನ ಅಂತಃಪುರ ಸ್ತ್ರೀಯರಿಗೆ ನೃತ್ಯ, ಗೀತ ವಾದ್ಯಾದಿಗಳನ್ನೂ ವಿವಿಧ ರೀತಿಯಲ್ಲಿ ಕಲಿಸಿ ಕೊಡುವೆನು. ರಾಜೇಂದ್ರಾ! ಹೀಗೆ ನಾನು ಆ ವಿರಾಟನಗರಿಯಲ್ಲಿ ಸ್ತ್ರೀ ಸ್ವಭಾವಕ್ಕನುಗುಣವಾದ ನೃತ್ತಗೀತಾದಿಗಳಿಂದಲೂ, ಮಾತುಕತೆಗಳಿಂದ ಲೂ, ಹೇಗೋ ನನ್ನ ರೂಪವನ್ನು ಉಪಾಯದಿಂದ ಮರೆಸಿಕೊಂಡು ಕಾಲ ವನ್ನು ಕಳೆಯಬಲ್ಲೆನು. ಯಾರಾದರೂ ನನ್ನ ಪೂರ್ವೋತ್ತರಗಳನ್ನು ಕೇಳಿದ ಪಕ್ಷದಲ್ಲಿ, ನಾನು ಯುಧಿಷ್ಠಿರನ ಗೃಹದಲ್ಲಿ ದ್ರೌಪದಿಗೆ ಪರಿಚಾರಿಕೆ ಯಾಗಿದ್ದೆನೆಂದೂ, ಧರ್ಮರಾಜನ ಪ್ರೀತಿಗೆ ನಾನು ಪಾತ್ರನಾಗಿದ್ದೆನೆಂದೂ ಹೇಳುವೆನು. ಅಣ್ಣಾ! ಇದಲ್ಲದೆ ಮತ್ತೊಂದು ರಹಸ್ಯವನ್ನು ತಿಳಿಸುವೆನು. ಕೇಳು. ಊರ್ವಶಿಯ ಶಾಪದಿಂದ ನನಗೆ ನಪುಂಸಕತ್ವವು ಪ್ರಾಪ್ತವಾಗಿದೆ.

ಈ ಹದಿಮೂರನೆಯ ವರ್ಷದ ಕೊನೆಯಲ್ಲಿ ಆ ಶಾಪದಿಂದ ನನಗೆ ಬಿಡುಗಡೆಯಾಗುವಂತೆ ಇಂದ್ರನು ಅನುಗ್ರಹಿಸಿರುವನು. ಆದುದರಿಂದ ಆ ಶಾಪ ಕಾಲವನ್ನು ದಾಟುವುದಕ್ಕೆ ಇದೊಂದು ಒಳ್ಳೇ ಸಂದರ್ಭವೂ ಏರ್ಪಟ್ಟಿದೆ. ಅಂತಹ ಸ್ತ್ರೀವೇಷದಿಂದಿರಬೇಕೆಂಬುದೇ ನನ್ನ ತೀರ್ಮಾನವು. ಹಿಂದೆ ನಳರಾಜನು ಹೇಗೋ ಹಾಗೆ, ಈ ವಿಧವಾಗಿ ನಾನು ಕೃತ್ರಿಮವೇಷದಿಂದ ಸ್ವರೂಪವನ್ನು ಮರೆಸಿಕೊಂಡು, ವಿರಾಟನಗರದಲ್ಲಿ ಈ ಒಂದು ವರ್ಷ ಕಾಲವನ್ನು ವಿನೋದದಿಂದ ಸುಖವಾಗಿಯೇ ಕಳೆಯುವೆನು" ಎಂದನು. ಆಗ ಧರ್ಮರಾಜನು ವ್ಯಸನದಿಂದ "ಆಹಾ! ಎಂತಹ ವಿಪರೀತವಿದು? ಕೀರ್ತಿಪರಾಕ್ರಮಗಳಲ್ಲಿ ಸಾಕ್ಷಾನ್ಮಹಾವಿಷ್ಣುವಿಗೆ ಸಮಾನನಾಗಿ, ಭರತ ಕುಲೋತ್ತಮನೆನಿಸಿಕೊಂಡು, ವಜ್ರಸಮಾನವಾದ ದೃಢಮುಷ್ಟಿಯುಳ್ಳ ಈ ಅರ್ಜುನನು ಕೂಡ, ಮಹಾಮೇರುಪರ್ವತವು ಮೈಮರೆಸಿಕೊಂಡಂತೆ, ತಾನು ಷಂಡನೆಂದು ಹೇಳಿಕೊಳ್ಳುತ್ತ ವಿರಾಟನಗರದಲ್ಲಿ ತಲೆಮರೆಸಿಕೊಂಡಿರುವೆನೆಂದು ಹೀಗೆ ಶಪಥಮಾಡಿದುದು ಒಂದು ಮಹಾಪಾಪದ ಫಲವಲ್ಲವೆ?" ಎಂದನು.

ಇದು ಮೂರನೆಯ ಅಧ್ಯಾಯವು.

―――

ನಕುಲಸಹದೇವರೂ, ದ್ರೌಪದಿಯೂ ತಮ್ಮತಮ್ಮ ನಿರ್ಣಯಗಳನ್ನು ತಿಳಿಸಿದುದು.

ಜನಮೇಜಯರಾಜಾ ಕೇಳು! ಪುರುಷಶ್ರೇಷ್ಠನಾಗಿ, ಧಾರ್ಮಿಕರಲ್ಲಿ ಮೇಲೆನಿಸಿದ ಅರ್ಜುನನು ಹೀಗೆಂದು ಹೇಳಿ ಸುಮ್ಮನಾಗಲು, ತಿರುಗಿ ಯುಧಿಷ್ಠಿರನು ಬೇರೊಬ್ಬ ತಮ್ಮನಾದ ನಕುಲನನ್ನು ದೃಷ್ಟಿಸಿ, "ಈ ನಕುಲನು ವಿರಾಟನ ಬಳಿಯಲ್ಲಿ ಯಾವ ಕಾರ್ಯಗಳನ್ನು ಮಾಡುತ್ತ ಹೇಗೆ ವರ್ತಿಸಬಲ್ಲನು? ಈತನೋ ಸುಕುಮಾರವಾದ ಶರೀರವುಳ್ಳವನು. ಯಾವಾಗಲೂ ಸುಖದಲ್ಲಿಯೇ ಬಳೆದವನೇಹೊರತು ದುಃಖಾರ್ಹನಲ್ಲ. ಶೂರನು. ನೋಡುವುದಕ್ಕೆ ಅಂದವಾದ ರೂಪವುಳ್ಳವನು. ಇನ್ನೂ ಬಾಲಕನು.

ಯಾವಾಗಲೂ ಮೋಹದಿಂದ ಬೆಳೆಸಲ್ಪಟ್ಟವನು. ಇಂತವನೂ ಈಗ ಇತರ ರಾಜನಲ್ಲಿ ಸೇವಾವೃತ್ತಿಯೆಂಬ ಕಷ್ಟಕಾರ್ಯಕ್ಕೆ ಮೈಗೊಟ್ಟು ಹೇಗೆ ಸಹಿಸಿಕೊಂಡಿರಬಲ್ಲನೋ ಕಾಣೆನು. ವತ್ಸ ನಕುಲಾ! ವಿರಾಟನ ನಗರದಲ್ಲಿ ನೀನು ಮಾಡಬೇಕೆಂದಿರುವ ಕಾರ್ಯವೆಂತದು? ನಿರ್ಣಯಿಸಿ ಹೇಳು" ಎಂದನು. ಆಗ ನಕುಲನು "ವಿರಾಟನಲ್ಲಿ ಅಶ್ವಾಧ್ಯಕ್ಷನಾಗಿರಬೇಕೆಂಬುದು ನನ್ನ ಉದ್ದೇಶವು. ಆ ಕಾರ್ಯವು ನನಗೆ ಬಹಳ ಪ್ರಿಯವಾಗಿಯೂ ಇರುವುದು. ದಾಮಗ್ರಂಥಿಯೆಂಬ ಹೆಸರನ್ನಿಟ್ಟುಕೊಂಡು, ಅಶ್ವಗಳನ್ನು ಹಿಡಿದು ಕಟ್ಟುವ ಕಾರ್ಯಗಳನ್ನು ನೋಡಿಕೊಳ್ಳುವೆನು. ನಾನು ಈ ಕೆಲಸಮಾಡಿದರೂ, ಜನರು ಯಾರೂ ನನ್ನನ್ನು ಎಂದಿಗೂ ಅಪಮಾನಗೊಳಿಸಲಾರರು. ಅಶ್ವಶಿಕ್ಷಣದಲ್ಲಿಯೂ, ಕುದುರೆಗಳ ರೋಗಚಿಕಿತ್ಸೆಯಲ್ಲಿಯೂ ನನಗೆ ನೈಪುಣ್ಯವುಂಟು. ಇದಲ್ಲದೆ, ನಿನಗೆ ಹೇಗೋ ಹಾಗೆ ನನಗೂ ಕುದುರೆಗಳನ್ನು ಕಂಡರೆ ಪ್ರೀತಿಯು ಹೆಚ್ಚು. ಕುದುರೆಯ ಮರಿಗಳಾಗಲಿ, ಹೆಣ್ಣು ಕುದುರೆಗಳಾಗಲಿ, ನನಗೆ ವಶವಾಗದೆ ಮೀರಿಹೋಗಲಾರವು. ಎಷ್ಟೇ ದುಷ್ಟಾಶ್ವಗಳಾಗಿದ್ದರೂ ನನ್ನಲ್ಲಿಗೆ ಬಂದಮೇಲೆ, ಮೇಲೇರಿ ಹೋಗುವುದಕ್ಕಾಗಲಿ, ಬಂಡಿಗಳಿಗೆ ಹೂಡುವುದಕ್ಕಾಗಲಿ ತಮ್ಮ ದೌಷ್ಟ್ಯವನ್ನು ತೋರಿಸಲಾರವು. ಆ ವಿರಾಟನಗರದಲ್ಲಿ ಯಾರಾದರೂ ನನ್ನ ಪೂರ್ವೋತ್ತರಗಳನ್ನು ಕೇಳಿದಪಕ್ಷದಲ್ಲಿ, "ನಾನು ಹಿಂದೆ ಪಾಂಡವರ ಬಳಿಯಲ್ಲಿ ಅಶ್ವಾಧ್ಯಕ್ಷನಾಗಿದ್ದೆ"ನೆಂದು ಹೇಳುತ್ತ, ನನ್ನ ನಿಜಸ್ಥಿತಿಯು ಯಾರಿಗೂ ತಿಳಿಯದಂತೆ ನಡೆದುಕೊಳ್ಳುವೆನು. ಇದೇ ನನ್ನ ತೀರ್ಮಾನವು" ಎಂದನು. ನಕುಲನು ಹೇಳಿದ ಈ ಮಾತನ್ನು ಕೇಳಿದಮೇಲೆ ಧರ್ಮರಾಜನು, ಸಹದೇವನಕಡೆಗೆ ತಿರುಗಿ "ಇನ್ನು ಈತನ ಸಂಗತಿಯೇನು? ಈತನೋ ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನು. ನೀತಿಯಲ್ಲಿ ಶುಕ್ರನಿಗೆ ಸಾಟಿಯಾದವನು. ದಾರಿತಪ್ಪಿ ಹೋಗದೆ ಯಾವಾಗಲೂ ಸನ್ಮಾರ್ಗದಲ್ಲಿಯೇ ನಡೆಯತಕ್ಕವನು. ಒಳ್ಳೇ ಸುಶಿಕ್ಷಿತನು. ಸತ್ಕಾರ್ಯದಲ್ಲಿಯೇ ನೆಲೆಗೊಂಡವನು. ರಾಜತಂತ್ರಗಳನ್ನೆಲ್ಲ ಬಲ್ಲವನು. ರಾಜ್ಯತಂತ್ರನಿಪುಣರಾರೂ ಇವನಲ್ಲಿ ಲವಮಾತ್ರವಾದರೂ ತಪ್ಪನ್ನು ಕಂಡುಹಿಡಿಯಲಾರರು. ಮತ್ತು ಇವನು ಒಳ್ಳೇ ರಾಜನೀತಿಗಳನ್ನೂ ತಿಳಿದವನು!

ಶೂರನು! ಸಕಲ ಮಂತ್ರಾಲೋಚನೆಗಳಲ್ಲಿಯೂ ಸಮರ್ಥನು. ಇವನು ನಮ್ಮ ತಾಯಿಯಾದ ಕುಂತಿಗೆ ಸವತಿಯ ಮಗನಾಗಿದ್ದರೂ, ಅವಳಿಗೆ ನಮಗಿಂತಲೂ ಪ್ರಿಯತಮನಾದ ಪುತ್ರನಂತಿರುವನು. ಇಂತವನು ವಿರಾಟ ನಲ್ಲಿ ಯಾವಕಾರ್ಯವನ್ನು ಮಾಡುತ್ತಿರಬಹುದು? ವತ್ಸ ಸಹದೇವಾ! ನೀನು ವಿರಾಟನಗರದಲ್ಲಿ ಯಾರಿಗೂ ತಿಳಿಯದಂತೆ ಹೇಗೆ ಕೆಲಸಮಾಡು ತ್ತಿರಬಲ್ಲೆ'' ಎಂದನು. ಅದಕ್ಕಾ ಸಹದೇವನು ''ಅಣ್ಣಾ! ವಿರಾಟನಲ್ಲಿ ಪಶುಪಾಲಕನಾಗಿರಬೇಕೆಂಬುದು ನನ್ನ ಕೋರಿಕೆ! ಪಶುಗಳನ್ನು ಮೇಯಿ ಸುವುದು, ಅವುಗಳ ಹಾಲನ್ನು ಕರೆಯುವುದು, ಅವುಗಳನ್ನು ಪೋಷಿಸು ವುದು, ಈ ಕಾರ್ಯಗಳೊಳಗೆಲ್ಲ ನನಗೆ ನೈಪುಣ್ಯವುಂಟು. ನನ್ನ ಹೆಸರು ತಂತ್ರೀಪಾಲನೆಂದು ಹೇಳಿಕೊಳ್ಳುವೆನು. ಮಹಾರಾಜಾ! ನಾನು ಈ ಕಾರ್ಯವನ್ನು ಕೈಕೊಂಡಪಕ್ಷದಲ್ಲಿ, ವಿರಾಟನಗರದಲ್ಲಿ ಗೋವುಗಳೆಲ್ಲ ರೋಗಾದಿಗಳಿಲ್ಲದೆ, ಪುಷ್ಟಿಯುಳ್ಳವುಗಳಾಗುವುವು. ಅವುಗಳ ಸಂಖ್ಯೆಯೂ ಅಭಿವೃದ್ಧಿಹೊಂದುವುದು. ಮತ್ತು ಅವು ಸಮೃದ್ಧಿಯಾಗಿ ಹಾಲು ಕೊಡು ವುವು. ಹೆಚ್ಚು ಕರುಗಳನ್ನು ಹಾಕುವುವು. ಹಸುಗಳೆಲ್ಲವೂ ಒಳ್ಳೇ ಬಲಾ ಢ್ಯಗಳಾಗಿ, ಚೆನ್ನಾಗಿ ಪೋಷಣೆಯನ್ನು ಹೊಂದಿ, ಜ್ವರಾದಿದೋಷ ಗಳೊಂದೂ ಮೈಗೆ ತಟ್ಟದಂತಾಗುವುದು. ನನ್ನ ವಶಕ್ಕೆ ಬಂದ ಗೋವು ಗಳಿಗೆ ಚೋರಭಯವಾಗಲಿ, ರೋಗಭಯವಾಗಲಿ, ವ್ಯಾಘ್ರಭಯವಾಗಲಿ ಇಲ್ಲದಂತೆ, ಅವು ಮಂದೆಗಳಲ್ಲಿ ಉಲ್ಲಾಸದಿಂದ ಒಂದಾಗಿ ಸೇರಿ ನಿಶ್ಚಿಂತ ವಾಗಿರುವುವು. ನನಗೂ ಗೋವುಗಳನ್ನು ಸಾಕುವುದರಲ್ಲಿ ಅಧಿಕಪ್ರೀತಿ ಯುಂಟು. ನನಗೆ ಆ ಕಾರ್ಯದಲ್ಲಿ ನೈಪುಣ್ಯವುಂಟು. ಅಣ್ಣಾ! ನೀನು ಕೂಡ ಮೊದಲು ನನ್ನನ್ನು ಯಾವಾಗಲೂ ಈ ಗೋರಕ್ಷಣಕಾರ್ಯದಲ್ಲಿಯೇ ನಿಯಮಿಸುತ್ತಿದ್ದೆಯಲ್ಲವೆ? ಅಂದಿನಿಂದಲೇ ನನಗೆ ಆ ಕಾರ್ಯದಲ್ಲ ಒಳ್ಳೇ ಅನುಭವವುಂಟಾಗಿದೆ. ಪಶುಗಳಿಗಿರಬೇಕಾದ ಒಳ್ಳೇ ಲಕ್ಷಣಗಳನ್ನೂ, ಅವುಗಳ ಸ್ವಭಾವಗಳನ್ನೂ, ಇನ್ನೂ ಅವುಗಳಿಗೆ ಸಂಬಂಧಪಟ್ಟ ಎಲ್ಲಾ ಸಂಗತಿಗಳನ್ನೂ ನಾನು ಚೆನ್ನಾಗಿ ಬಲ್ಲೆನು. ಇದಲ್ಲದೆ, ಮತ್ತೊಂದು ವಿಶೇಷವುಂಟು. ಯಾವ ಹೋರಿಯಮೂತ್ರವನ್ನು ಮೂಸಿದಮಾತ್ರಕ್ಕೇ ಗೊಡ್ಡುಹಸುಗಳು ಕೂಡ ಗರ್ಭವನ್ನು ಹೊಂದಿ, ಕರುಗಳನ್ನೀಯುವುವೋ,

ಅಂತಹ ಶುಭಲಕ್ಷಣವುಳ್ಳ ಹೋರಿಗಳನ್ನೂ ನಾನು ಬಲ್ಲೆನು. ಹೀಗೆ ನನಗೆ ಆ ಕಾರ್ಯದಲ್ಲಿ ನೈಪುಣ್ಯವೂ, ಪ್ರೀತಿಯೂ ಇರುವುದರಿಂದ, ನಾನು ಅದೇ ಕಾರ್ಯದಿಂದ ರಾಜನನ್ನು ಸಂತೋಷಗೊಳಿಸುವೆನು. ನೀನು ಚಿಂತಿಸಬೇಕಾದುದಿಲ್ಲ. ನನ್ನನ್ನು ಬೇರೆ ಯಾವನೂ ಕಂಡುಹಿಡಿಯ ಲಾರನು. ನನ್ನ ಈ ತೀರ್ಮಾನವು ನಿನಗೂ ಸಮ್ಮತವಾಗಿರಬಹುದು. ಇದೇ ನನ್ನ ಸಂಕಲ್ಪವು" ಎಂದನು.

ಆಮೇಲೆ ಧರ್ಮರಾಜನು ದ್ರೌಪದಿಯನ್ನು ನೋಡಿ "ಇನ್ನು ಈ ದ್ರೌಪದಿಯು ಅಲ್ಲಿ ಮಾಡಬೇಕೆಂದಿರುವ ಕಾರ್ಯವೇನು? ಇವಳಾದರೋ ಬೇರೆ ಸ್ತ್ರೀಯರಂತೆ ಯಾವ ಮನೆಗೆಲಸವನ್ನೂ ಮಾಡಿದವಳಲ್ಲ. ಹುಟ್ಟಿ ದುದು ಮೊದಲು, ಇವಳು, ಹೂ, ಗಂಧ, ಒಡವೆ, ಅಲಂಕಾರಗಳು, ವಿವಿಧ ವಸ್ತ್ರಗಳು, ಇವುಗಳನ್ನುಹೊರತು ಬೇರೊಂದನ್ನೂ ಕಂಡವಳಲ್ಲ. ಪತಿ ವ್ರತೆಯೂ, ಭಾಗ್ಯವತಿಯೂ ಆದ ಈಕೆಯು ಅಲ್ಲಿ ಹೇಗೆ ವರ್ತಿಸಬೇಕೋ ತಿಳಿಯಲಿಲ್ಲ. ಇವಳಾದರೋ ನಮ್ಮೆಲ್ಲರಿಗೂ ಪ್ರಾಣಕ್ಕಿಂತಲೂ ಪ್ರಿಯ ತಮಳು. ಇವಳಲ್ಲಿ ನಮಗೆ ಪತ್ನಿಯೆಂಬ ಮೋಹವು ಮಾತ್ರವಲ್ಲ. ಇವಳು ನಮಗೆ ತಾಯಿಯಂತೆ ಶ್ರದ್ಧೆಯಿಂದ ಪೋಷಿಸಲ್ಪಡಬೇಕಾದವಳು. ಜ್ಯೇಷ್ಠ ಸಹೋದರಿಯಂತೆ ಗೌರವಿಸಲ್ಪಡಬೇಕಾದವಳು. ಸುಕುಮಾರ ದೇಹವುಳ್ಳ ವಳು. ಒಳ್ಳೇ ಸೌಶೀಲ್ಯವತಿ! ರಾಜಕುಮಾರಿ! ಮಹಾ ಯಶಸ್ವಿನಿ! ಮಂಗಳ ಸ್ವರೂಪಿಣಿಯಾದ ಇಂತವಳು, ಆ ವಿರಾಟಗೃಹದಲ್ಲಿ ತನ್ನ ಸತೀತ್ವವನ್ನು ಕಾಪಾಡಿಕೊಂಡು ಹೇಗೆ ವಾಸಮಾಡುವಳೋ ಕಾಣೆನು" ಎಂದನು. ಅದಕ್ಕೆ ದ್ರೌಪದಿಯು "ನಾಥಾ! ನನಗಾಗಿ ನೀನು ಚಿಂತಿಸ ಬೇಡ! ನನ್ನ ಭಾಗದಲ್ಲಿ ನಿನಗೇನೂ ಯೋಚನೆಯಿಲ್ಲದಂತೆ ನಾನು ಅಲ್ಲಿ ವಾಸಮಾಡಬಲ್ಲೆನು. ನಾನು ಯಾರೆಂದಾಗಲಿ, ನಾನು ಮಾಡುವ ಕಾರ್ಯ ವೇನೆಂಬುದಾಗಲಿ ಯಾರಿಗೂ ತಿಳಿಯದಂತೆ ನಾನು ಅಲ್ಲಿರಬಲ್ಲೆನು. ನಾನು ಹೇಗೆ ವರ್ತಿಸುವೆನೆಂಬುದನ್ನು ತಿಳಿಸುವೆನು" ಕೇಳು.

ಓ ಕ್ಷತ್ರಿಯಕುಲೋತ್ತಮಾ! ನಿನಗೆ ಮಂಗಳವಾಗಲಿ! ಉತ್ತಮ ಕುಲದಲ್ಲಿ ಹುಟ್ಟಿದವಳಾದರೂ ನಾನು, ಸೈರಂಧ್ರಿಯೆಂಬ ಹೆಸರಿನಿಂದ, ಪರ

ಧರ್ಮರಾಜನು ತನ್ನೊಡನೆ ಬಂದಿದ್ದ ಇಂದ್ರಸೇನಾದಿಗಳನ್ನು ಬೇರೆಬೇರೆ ಕಡೆಗಳಿಗೆ ಹೋಗುವಂತೆ ಸೂಚಿಸಿದುದು. ರಾಜಸನ್ನಿಧಿಯಲ್ಲಿ ಹೇಗೆ ವರ್ತಿಸಬೇಕೆಂಬು ದನ್ನು ಕುರಿತು ಪಾಂಡವರಿಗೆ ಧೌಮ್ಯನ ಬುದ್ಧಿವಾದಗಳು.

ಆಮೇಲೆ ಧರ್ಮರಾಜನು ಸಹೋದರರನ್ನು ಕುರಿತು "ನೀವು ಈಗ ಹೇಳಿದಂತೆಯೇ ನಿಮ್ಮನಿಮ್ಮ ನಿಶ್ಚಿತಕಾರ್ಯಗಳನ್ನು ನಡೆಸಿರಿ. ನಾನು ನನ್ನ ಸ್ವಬುದ್ಧಿಯಿಂದ ನಿಶ್ಚಯಿಸಿದ ಮತ್ತೊಂದು ಸಂಗತಿಯನ್ನು ಹೇಳು ವೆನು. ನಮ್ಮ ಪುರೋಹಿತರಾದ ಧೌಮ್ಯರು, ದ್ರುಪದರಾಜನಗರದಲ್ಲಿ ನಮ್ಮ ಸೂತರೊಡನೆಯೂ, ಅಡಿಗೆಯವರೊಡನೆಯೂ ಸೇರಿ ಅಗ್ನಿಹೋತ್ರ ವನ್ನು ರಕ್ಷಿಸುತ್ತಿರಲಿ! ಈ ಇಂದ್ರಸೇನಾದಿಗಳು ರಥವನ್ನು ತೆಗೆದುಕೊಂಡು ಶೀಘ್ರದಲ್ಲಿಯೇ ದ್ವಾರಕೆಗೆ ಹೋಗುವುದೊಳ್ಳೆಯದೆಂದು ತೋರುವುದು. ದ್ರೌಪದಿಯ ಪರಿಚಾರಿಕೆಯರಾದ ಈ ಸ್ತ್ರೀಯರೆಲ್ಲರೂ ತಮ್ಮ ಸೂತರೊಡ ನೆಯೂ, ಅಡಿಗೆಯವರೊಡನೆಯೂ ಪಾಂಚಾಲದೇಶಕ್ಕೆ ಹೋಗಿ ಅಲ್ಲಿರಲಿ! ಅಲ್ಲಿ ಯಾರಾದರೂ ಇವರನ್ನು ಪಾಂಡವರೆಲ್ಲಿರುವರೆಂದು ಕೇಳಿದರೆ, "ಮಹಾತ್ಮರಾದ ಆ ಪಾಂಡವರೆಲ್ಲರೂ ಅರ್ಧರಾತ್ರಿಯಲ್ಲಿ ನಮ್ಮನ್ನೂ, ಭಿಕ್ಷಾಶನರಾದ ಬ್ರಾಹ್ಮಣರನ್ನೂ ಬಿಟ್ಟು, ದ್ವೈತವನದಿಂದ ಹೊರಟುಹೋದ ವರು ಎಲ್ಲಿಗೆ ಹೋದರೋ ತಿಳಿಯಲಿಲ್ಲ"ವೆಂದು ಹೇಳಬೇಕು ಎಂದನು. ಹೀಗೆ ಪಾಂಡವರೆಲ್ಲರೂ ತಾವುತಾವು ವಿರಾಟನಗರದಲ್ಲಿ ಮಾಡತಕ್ಕ ಕಾರ್ಯ ಗಳನ್ನು ತಿಳಿಸಿ, ಒಬ್ಬರನ್ನೊಬ್ಬರು ಬೀಳ್ಕೊಂಡು, ಆಮೇಲೆ ಧೌಮ್ಯನ ಅನುಮತಿಯನ್ನು ಕೇಳಿದಾಗ, ಸಮಸ್ತಧರ್ಮಗಳನ್ನೂ ಬಲ್ಲ ಪಾಂಡವ ರನ್ನು ಕುರಿತು ಹೀಗೆಂದು ಉಪದೇಶಿಸತೊಡಗಿದನು.

"ರಾಜೇಂದ್ರಾ! ಲೋಕದ ನಡೆವಳಿಕೆಗಳೆಲ್ಲ ಯಾವ ವಿಧವಾಗಿವೆ ಯೆಂಬುದನ್ನು ನೀವು ಚೆನ್ನಾಗಿ ಬಲ್ಲಿರಿ! ಹಾಗಿದ್ದರೂ, ಆಪ್ತರಾದವರು ತಮಗಿರುವ ಸ್ನೇಹದಿಂದ, ತಮಗೆ ತಿಳಿದುದನ್ನು ತಿಳಿಸದೆ ಬಿಡಬಾರದು. ಈಗ ನಾನೂ ನಿಮಗೆ ಕೆಲವು ಸಂಗತಿಗಳನ್ನು ಹೇಳಬೇಕೆಂದಿರುವೆನು.

ರಾಜಸನ್ನಿಧಿಯಲ್ಲಿದ್ದು ಅವನಿಗೆ ಪ್ರಿಯನಾದ ಪುರುಷನು ಯಾವ ಸಂದರ್ಭದಲ್ಲಿಯೂ ತನ್ನ ಹದ್ದನ್ನು ಮೀರಿ ನಡೆಯಬಾರದು. ವಿದ್ವಾಂಸರು ಲೋಕದಲ್ಲಿ ಅವರವರಿಗೆ ತಕ್ಕ ವ್ಯವಹಾರವೇ ಮರ್ಯಾದೆಯೆಂದು ಹೇಳುವರು. ಅಂತಹ ಮರ್ಯಾದೆಯನ್ನು ಮೀರಿ ನಡೆದವನು ಮಗನಾಗಲಿ, ಮೊಮ್ಮಗನಾಗಲಿ, ಒಡಹುಟ್ಟಿದವನಾಗಲಿ ಅಂತವರನ್ನು ರಾಜರು ಆದರಿಸಲಾರರು. ಒಬ್ಬನು ರಾಜನ ಪ್ರೀತಿಗೆ ಪಾತ್ರನಾಗಿ, ಒಂದು ದೊಡ್ಡ ಅಧಿಕಾರಸ್ಥಾನವನ್ನು ಪಡೆದು ಐಶ್ವರ್ಯವಂತನಾಗಿದ್ದರೂ, ತನ್ನ ಸ್ಥಿತಿಯೆಷ್ಟೆಂಬುದನ್ನು ಆಲೋಚಿಸಿ, ಅದನ್ನು ಮೀರಿ ಹೋಗದೆ ಇತರ ವಿಷಯಗಳಲ್ಲಿ ತನ್ನನ್ನು ಹುಟ್ಟುಕುರುಡನಂತೆ ತಿಳಿದುಕೊಂಡಿರಬೇಕು. ರಾಜಸೇವೆಯಲ್ಲಿರತಕ್ಕವನು ಧೈರ್ಯಶಾಲಿಯಾಗಿ, ಯಾವಾಗಲೂ ರಾಜದ್ವಾರವನ್ನೇ ಕಣ್ಣಿಟ್ಟು ಕಾಯುತ್ತಿರಬೇಕು. ಆದರೆ, ರಾಜನಲ್ಲಿ ಎಂದಿಗೂ ಪೂರ್ಣವಾದ ನಂಬಿಕೆಯನ್ನಿಡಬಾರದು. ಮತ್ತೊಬ್ಬರು ಆಶಿಪಡದೆ ಇರತಕ್ಕ ಸ್ಥಾನವನ್ನೇ ಆಶ್ರಯಿಸಬೇಕು. ರಾಜಗೃಹದಲ್ಲಿ ವಾಸಮಾಡತಕ್ಕ ಪುರುಷನು, ತಾನು ಯಾವ ಆಸನವನ್ನು ಆಶ್ರಯಿಸಿದರೆ ತನಗಿಂತಲೂ ಬಲಾಢ್ಯರಾದ ಬೇರೆಯವರಿಗೆ ಮನಸ್ಸು ನೋಯಲಾರದೋ, ಅಂತಹ ಸ್ಥಾನವನ್ನೇ ಅಪೇಕ್ಷಿಸಬೇಕು. ಮತ್ತು ರಾಜಗೃಹದಲ್ಲಿ ವಾಸಮಾಡುವವನು, ತಾನು ಯಾವ ಸ್ಥಳದಲ್ಲಿ ಹೇಗೆ ಕುಳಿತರೆ ಬೇರೊಬ್ಬರಿಗೆ ತಾನು ಹದ್ದು ಮೀರಿ ಹೋದನೆಂಬ ಸಂದೇಹವು ಹುಟ್ಟುವುದೋ ಅಂತಹ ಸ್ಥಳದಲ್ಲಿಯಾಗಲಿ, ಆ ರೀತಿಯಲ್ಲಿಯಾಗಲಿ ಎಂದಿಗೂ ಕುಳ್ಳಿರಬಾರದು. ತನಗೆ ಯೋಗ್ಯವಾದ ಸ್ಥಳದಲ್ಲಿ ತನ್ನ ಇಷ್ಟಾನುಸಾರವಾಗಿರಬಹುದು. ಅಥವಾ ರಾಜನ ಸಮೀಪದಲ್ಲಿ ಯಾವಾಗಲೂ ನಿಂತೇ ಇರಬಹುದು. ರಾಜಸಭೆಯಲ್ಲಿ ಮತ್ತೊಬ್ಬನ ಆಸನವನ್ನು ಎಂದಿಗೂ ಅಪೇಕ್ಷಿಸಬಾರದು. ಮತ್ತೊಬ್ಬರ ಆಸನದಲ್ಲಿ ಕುಳಿತರೆ, ಅವನ ಭೃತ್ಯರು ಅಂತವನನ್ನು ಸಭೆಯಿಂದೆಳೆದು ಹಾಕುವರು. ಮತ್ತು ಅಂತವನು ಶತ್ರುಗಳಿಂದ ಹಾಸ್ಯಮಾಡಲ್ಪಡುವನು. ಹಣಕ್ಕಾಗಿ ರಾಜರಲ್ಲಿ ಸೇವೆಮಾಡುವ ಭೃತ್ಯರು, ಎಂದಿಗೂ ರಾಜನಿಗಿದಿರಾಗಿ ಮುಂಭಾಗದಲ್ಲಿರುವ ಆಸನದಲ್ಲಿ ಕುಳ್ಳಿರಬಾರದೆಂಬುದು ನೀತಿಜ್ಞರ ಅಭಿಪ್ರಾಯವು. ಬುದ್ಧಿಶಾಲಿಯಾದವನು, ತನ್ನ ಪ್ರಭುವಿನ ಎಡ

ಪಾಂಡವರು ವಿರಾಟನಗರದ ಸಮೀಪಕ್ಕೆ ಬಂದುದು.

" ಜನಮೇಜಯ ರಾಜೇಂದ್ರಾ! ಕೇಳು! ಆ ಪಾಂಡವರೆಲ್ಲರೂ ಅಗ್ನಿಯನ್ನೂ, ಪುರೋಹಿತನಾದ ಧೌಮ್ಯನನ್ನೂ ಪ್ರದಕ್ಷಿಣಮಾಡಿ ನಮಸ್ಕರಿಸಿ, ಅಲ್ಲಿಂದ ಪ್ರಯಾಣಮಾಡತೊಡಗಿದರು. ಆಗ ಧರ್ಮರಾಜನು ತಿರುಗಿ ಧೌಮ್ಯನನ್ನು ನೋಡಿ " ಓ ಬ್ರಾಹ್ಮಣೋತ್ತಮಾ! ತಮ್ಮ ಆಜ್ಞೆಯನ್ನು ಕೈಕೊಂಡೆವು. ನಿಮಗೆ ಮಂಗಳವಾಗಲಿ! ನಮ್ಮ ತಾಯಿಯಾದ ಕುಂತಿ, ಮತ್ತು ಕೀರ್ತಿಮಂತನಾದ ನನ್ನ ತಂದೆ, ಇವರೊಬ್ಬರು ಹೊರತು (ನಮ್ಮ ತಾಯಿತಂದೆಗಳಲ್ಲದೆ) ಬೇರೆ ಯಾರೂ ನಿಮ್ಮಂತೆ ನಮ್ಮ ಕ್ಷೇಮಚಿಂತಕರಾಗಿ ಹಿತೋಪದೇಶವನ್ನು ಮಾಡುವವರಿಲ್ಲ. ಇನ್ನು ಮುಂದೆ ನಾವು ಈ ಕಷ್ಟದಿಂದ ದಾಟುವುದಕ್ಕೂ, ಅಜ್ಞಾತವಾಸಕ್ಕೆ ಹೊರಡುವುದಕ್ಕೂ, ಮುಂದೆ ನಮ್ಮ ಕ್ಷೇಮಕ್ಕೂ, ನಾವು ನಡೆಸಬೇಕಾದ ಕಾರ್ಯವನ್ನು ತಿಳಿಸಬೇಕು" ಎನಲು, ಧೌಮ್ಯನು ಅವರ ಪ್ರಯಾಣಕಾಲದಲ್ಲಿ, ಮಂತ್ರದಿಂದಲೂ, ಹವಿಸ್ಸುಗಳಿಂದಲೂ ಪರಿಪೂತವಾದ ಅಗ್ನಿಯನ್ನು ಹುತಮಾಡಿ, ಸಕಲವಿಘ್ನನಿವಾರಕಗಳಾಗಿಯೂ, ಸರ್ವ ಕಾರ್ಯ ಸಿದ್ಧಿಕರಗಳಾಗಿಯೂ ಇರುವ ಮಂತ್ರಗಳನ್ನು ಜಪಿಸಿದನು. ಆಮೇಲೆ ಮಹಾರಥರಾದ ಆ ಪಾಂಡವರೆಲ್ಲರೂ ದ್ರೌಪದಿಯನ್ನು ಮುಂದಿಟ್ಟುಕೊಂಡು, ಧೌಮ್ಯನನ್ನೂ ಕರೆದುಕೊಂಡು, ತಮ್ಮತಮ್ಮ ಆಯುಧಗಳನ್ನು ಹಿಡಿದು, ವನದಿಂದ ವನಕ್ಕೆ ಪ್ರಯಾಣಮಾಡಿ ಹೋಗುತ್ತಿದ್ದರು. ಆ ವೀರರು ಕತ್ತಿಯನ್ನು ಸೊಂಟಕ್ಕೆ ಕಟ್ಟಿಕೊಂಡು, ಬಿಲ್ಲುಬಾಣಗಳನ್ನೂ, ಬತ್ತಳಿಕೆಗಳನ್ನೂ ಧರಿಸಿ, ಕಾಮ್ಯಕವನವನ್ನು ದಾಟಿ, ದಶಾರ್ಣದೇಶದ ಉತ್ತರಕ್ಕೂ, ಪಾಂಚಾಲದೇಶದ ದಕ್ಷಿಣಕ್ಕೂ, ಯಕೃಲ್ಲೋಮ ಶೂರಸೇನಗಳೆಂಬ ಎರಡು ದೇಶಗಳ ನಡುಮಾರ್ಗವಾಗಿ ಹೊರಟು, ಯಮುನಾನದಿಯ ಬಳಿಗೆ ಬಂದರು. ಆ ವೀರರು ಕಾಲುನಡೆಯಿಂದಲೇ ಯಮುನಾನದಿಯ ದಕ್ಷಿಣತೀರವನ್ನು ಸೇರಿ, ಅಲ್ಲಿಂದ ಪಶ್ಚಿಮಾಭಿಮುಖವಾಗಿ ತಿರುಗಿ, ಕಾಡಿಂದ ಕಾಡಿಗೆ ಪ್ರವೇಶಿಸುತ್ತಾ ಪ್ರಯಾಣಮಾಡಿದರು. ಮಹಾಧನುಷ್ಮಂತರಾದ ಆ ಪಾಂಡವರು ಹೀಗೆ ವನಮಾರ್ಗವಾಗಿ ಪ್ರಯಾಣಮಾಡುವಾಗ, ಅಲ್ಲಲ್ಲಿ ರಮಣೀಯಗಳಾದ

ವನದುರ್ಗಗಳಲ್ಲಿಯೂ, ಅಂದವಾದ ಸಣ್ಣ ತಟಾಕಗಳಲ್ಲಿಯೂ, ನದೀ ಸಂಗಮಸ್ಥಾನಗಳಲ್ಲಿಯೂ ಸ್ವಲ್ಪ ಹೊತ್ತು ತಂಗಿ, ವಿಶ್ರಾಂತಿಯನ್ನು ತೆಗೆದು ಕೊಳ್ಳುವರು ! ಅಲ್ಲಲ್ಲಿ ನಾನಾಬಗೆಯ ಬಳ್ಳಿಗಳಿಂದಾವೃತವಾಗಿ, ಪುಷ್ಪಸಮೃದ್ಧಿಯಿಂದ ಮನೋಹರಗಳಾಗಿ, ಸುಗಂಧವಿಶಿಷ್ಟಗಳಾಗಿರುವ ವಿವಿಧಾಕಾರವುಳ್ಳ ವೃಕ್ಷಗಳ ಸೊಗಸನ್ನು ನೋಡುವರು ! ಆ ಮರಗಳಲ್ಲಿರುವ ಪುಷ್ಪಗಳ ಮತ್ತು ಫಲಗಳ ಸುಗಂಧವನ್ನಾಘ್ರಾಣಿಸುವರು ! ಅಲ್ಲಲ್ಲಿ ತಂಗಿ ಮುಂದೆ ಪ್ರಯಾಣಮಾಡುವರು ! ಮಹಾಧನುರ್ಧಾರಿಗಳೂ, ಬಲಾಢ್ಯರೂ ಆದ ಆ ಪಾಂಡವರು, ಅಲ್ಲಲ್ಲಿ ಕಾಡುಮೃಗಗಳನ್ನು ಭೇದಿಸುವರು ! ಯಾರಾದರೂ "ನೀವು ಯಾರೆ"ಂದು ಕೇಳಿದಾಗ, ತಾವು ಬೇಡರೆಂದು ಹೇಳಿಕೊಳ್ಳುವರು. ಹೀಗೆ ಹನ್ನೆರಡು ವರ್ಷಗಳು ಪೂರ್ಣವಾಗುವವರೆಗೆ ವನವಾಸದಲ್ಲಿದ್ದು, ಕೊನೆಗೆ ಮತ್ಸ್ಯರಾಜನ ಪಟ್ಟಣವನ್ನು ಪ್ರವೇಶಿಸಿದರು. ಪುರೋಹಿತನಾದ ಧೌಮ್ಯನು ಅವರನ್ನು ಬಿಟ್ಟು ಹಿಂತಿರುಗಿ, ಒಂದಾನೊಂದು ಆಶ್ರಮದಲ್ಲಿ ಗುಪ್ತವಾಗಿ ಅಗ್ನಿಹೋತ್ರವನ್ನು ರಕ್ಷಿಸಿಕೊಂಡಿದ್ದನು. ಮಹಾತ್ಮರಾದ ಪಾಂಡವರು ಅತ್ತಲಾಗಿ ಅಜ್ಞಾತವಾಸಕ್ಕಾಗಿ ಹೊರಟಮೇಲೆ, ಅವರ ಸಂಗಡಿಗರಾಗಿದ್ದ ಇಂದ್ರಸೇನಾದಿಗಳು ಧರ್ಮರಾಜನು ಸೂಚಿಸಿದಂತೆ ದ್ವಾರಕೆಗೆ ಸೇರಿ, ಅವರ ರಥಗಳನ್ನೂ, ರಥಾಶ್ವಗಳನ್ನೂ ಕಾಪಾಡುತ್ತ, ತಮ್ಮ ಸ್ವರೂಪವನ್ನು ಮರೆಸಿಕೊಂಡು ಗುಪ್ತವಾಗಿ ಸುಖದಿಂದಿರುತ್ತಿದ್ದರು. ಇತ್ತಲಾಗಿ ಪಾಂಡವರು ವಿರಾಟನಗರವನ್ನು ಸೇರಿದಮೇಲೆ, ದ್ರೌಪದಿಯು ಧರ್ಮರಾಜನನ್ನು ಕುರಿತು " ನಾಥಾ! ಇದೋ ! ಇತ್ತಲಾಗಿ ವಿಶಾಲವಾದ ಬಯಲುಗಳಲ್ಲಿ ದನಗಳ ಮಂದೆಯಿರುವ ಸ್ಥಳಕ್ಕೆ ಹೋಗುವ ಸಣ್ಣ ಕಾಲುದಾರಿಯು ಕಾಣಿಸುವುದು. ಗ್ರಾಮಗಳಿಗೂ, ನಗರಗಳಿಗೂ ಸೇರಿದಂತೆ ಹೂತೋಟಗಳಲ್ಲಿರುವ ಮರಗಳನ್ನು ನೋಡು. ವಿರಾಟನ ರಾಜಧಾನಿಯು ಇನ್ನು ಸ್ವಲ್ಪ ದೂರದಲ್ಲಿರುವಂತೆ ತೋರುವುದು. ನನಗೆ ಮಾರ್ಗಾಯಾಸವು ಅಧಿಕವಾಗಿರುವುದರಿಂದ, ಇಲ್ಲಿಯೇ ಒಂದು ರಾತ್ರಿ ತಂಗಿದ್ದು, ಆಮೇಲೆ ಮುಂದೆ ಹೋಗುವೆವು" ಎಂದಳು. ಆಗ ಧರ್ಮರಾಜನು ನಕುಲನನ್ನು ನೋಡಿ "ವತ್ಸಾ! ಮಾದ್ರೀನಂದನಾ! ಕಮಲದಳಾಯತಾಕ್ಷಿಯಾದ ಈ ದ್ರೌಪದಿಯನ್ನು ನೀನು ಸ್ವಲ್ಪ ಹೊತ್ತಿನವರೆಗೆ

ತೋಳುಗಳಿಂದೆತ್ತಿಕೊಂಡು ನಡೆ. ಇನ್ನೇನು! ಇನ್ನು ಸ್ವಲ್ಪ ದೂರದೊಳಗಾಗಿ ವಿರಾಟನಗರವು ಸಮೀಪಿಸುವುದು. ನಾವು ಅಲ್ಲಿಗೆ ಸೇರಿಬಿಟ್ಟರೆ ನೆಮ್ಮದಿಯಿಂದಿರಬಹುದು. ಕಾಡುಗಳನ್ನೆಲ್ಲ ದಾಟಿ ಬಂದುಬಿಟ್ಟೆವು'' ಎಂದನು. ಅದಕ್ಕಾ ನಕುಲನು ''ಅಣ್ಣಾ! ಇದಕ್ಕೆ ಮುಂಚೆ ಬೆಳಗಿನಹೊತ್ತೆಲ್ಲಾ ನಾನು ಬೇಟೆಯಾಡಿ ಮೃಗಗಳನ್ನು ಕೊಂದು ಬಹಳ ಆಯಾಸಗೊಂಡಿರುವೆನು. ಕಾಡಿನಲ್ಲಿ ಬಹುದೂರಕ್ಕೆ ಸುತ್ತಿರುವೆನು. ಮೃಗಗಳನ್ನುಬೆನ್ನಟ್ಟಿ ವೇಗದಿಂದೋಡಿದೆನಲ್ಲದೆ, ಹಳ್ಳತಿಟ್ಟುಗಳಿಂದ ಬಹಳ ದುರ್ಗಮವಾದ ಕಾಡುಗಳಲ್ಲಿ ಬಹುದೂರಕ್ಕೆ ಬಿಸಿಲಲ್ಲಿ ನಡೆದು ಶ್ರಮಪಟ್ಟಿರುವೆನು. ಆದುದರಿಂದ ಈಗ ನಾನು ಇವಳನ್ನೆತ್ತಿಕೊಂಡು ಹೋಗಲು ಅಶಕ್ತನಾಗಿರುವೆನು'' ಎಂದನು. ಆಗ ಧರ್ಮರಾಜನು ಸಹದೇವನನ್ನು ಕರೆದು ''ವತ್ಸ! ನೀನಾದರೂ ಈ ದ್ರೌಪದಿಯನ್ನು ಸ್ವಲ್ಪದೂರದವರೆಗೆ ಎತ್ತಿಕೊಂಡು ನಡೆ. ವಿರಾಟನಗರಿಗೆ ಸೇರಿಬಿಡುವೆವು'' ಎನಲು, ಸಹದೇವನು ''ಅಣ್ಣಾ! ನಾನೂ ಹಸಿವುಬಾಯಾರಿಕೆಗಳಿಂದ ತಪಿಸುತ್ತಿರುವೆನು. ನಾನು ಬಹಳವಾಗಿ ದಣಿದಿರುವುದರಿಂದ, ಇವಳನ್ನೆತ್ತಿಕೊಂಡು ಹೋಗಲು ನನಗೆ ಸಾಧ್ಯವಿಲ್ಲ. ನಿನಗೆ ಶುಭವಾಗಲಿ! ನನ್ನನ್ನು ಮನ್ನಿಸು'' ಎಂದನು. ಆಗ ಧರ್ಮರಾಜನು ''ಅರ್ಜುನಾ! ವೀರಸಿಂಹನೆನಿಸಿರುವ ನೀನಾದರೂ ರಾಜಕುಮಾರಿಯೂ, ಸುಕುಮಾರಿಯೂ ಆದ ಈ ದ್ರೌಪದಿಯನ್ನು, ಭುಜಗಳಿಂದೆತ್ತಿಕೊಂಡು, ಸ್ವಲ್ಪ ದೂರದವರೆಗೆ ನಡೆಯುವೆಯಾ? ನಾವು ರಾಜಧಾನಿಗೆ ಹೋಗಿ ಸೇರಿಬಿಡುವೆವು. ಇನ್ನು ವನವಾಸದ ಕಷ್ಟವು ನಮ್ಮನ್ನು ಬಿಟ್ಟಹಾಗಿದೆ'' ಎಂದನು. ಅರ್ಜುನನು ಅಣ್ಣನ ಆಜ್ಞೆಗೆ ವಿಧೇಯನಾಗಿ ಸಂತೋಷದಿಂದ ಮುಂದೆ ಬಂದು, ಪ್ರಿಯದರ್ಶನೆಯಾದ ಆ ಪಾಂಚಾಲರಾಜಕುಮಾರಿಯನ್ನು ತೋಳುಗಳಿಂದೆತ್ತಿಕೊಂಡನು. ಜಟಾವಲ್ಕಲಗಳನ್ನು ಧರಿಸಿ ಜಿತೇಂದ್ರಿಯನಾದ ಆ ಅರ್ಜುನನು, ಧನುರ್ಬಾಣಗಳಿಂದಲೂ, ಬತ್ತಳಿಕೆಯಿಂದಲೂ ಶೋಭಿತನಾಗಿ, ದ್ರೌಪದಿಯನ್ನು ಭುಜದಮೇಲೇರಿಸಿಟ್ಟುಕೊಂಡೇ ದಾರಿ ನಡೆದು, ವಿರಾಟರಾಜಧಾನಿಯ ಸಮೀಪಕ್ಕೆ ತಂದಿಳಿಸಿದನು.

ಇದು ಆರನೆಯ ಅಧ್ಯಾಯವು.



ಪಾಂಡವರು ವಿರಾಟನಗರದ ಹೊರಗಿನ ಶ್ಮಶಾನಕ್ಕೆ ಸಮೀಪವಾಗಿದ್ದ ಬನ್ನಿಯ ಮರದಲ್ಲಿ ತಮ್ಮ ಆಯುಧಗಳನ್ನು ಮರೆಸಿಟ್ಟುದು.

ಪಾಂಡವರು ವಿರಾಟನಗರಿಯ ಸಮೀಪಕ್ಕೆ ಬಂದಮೇಲೆ, ಧರ್ಮರಾಜನು ಅರ್ಜುನನನ್ನು ನೋಡಿ "ಪರಂತಪಾ! ಈ ನಮ್ಮ ಆಯುಧಗಳನ್ನೆಲ್ಲ ಎಲ್ಲಿಯಾದರೂ ಇಟ್ಟು ಹೋಗಬೇಕಲ್ಲವೆ? ಇವುಗಳನ್ನು ರಹಸ್ಯವಾಗಿ ಮತ್ತು ಸುರಕ್ಷಿತವಾಗಿಡುವುದೆಲ್ಲಿ? ನಾವು ಆಯುಧಸಹಿತವಾಗಿಯೇ ಪುರಪ್ರವೇಶವನ್ನು ಮಾಡಿದಪಕ್ಷದಲ್ಲಿ, ಈ ಪುರವಾಸಿಗಳಿಗೆ ಇಲ್ಲದ ಭಯವನ್ನು ನಾವೇ ಹುಟ್ಟಿಸಿದಂತಾಗುವುದರಲ್ಲಿ ಸಂದೇಹವಿಲ್ಲ. ಇದಲ್ಲದೆ ಲೋಕತ್ರಯದಲ್ಲಿಯೂ ಪ್ರಖ್ಯಾತಿಗೊಂಡ ಈ ನಿನ್ನ ಗಾಂಡೀವವನ್ನು ನೀನು ಸಂಗಡ ತೆಗೆದುಕೊಂಡುಹೋದಲ್ಲಿ, ದುರ್ಯೋಧನನಿಗೆ ನಮ್ಮ ಸಂಗತಿಯು ತಿಳಿಯದೆ ಹೇಗುವುದೆ? ನಾವು ಈ ಧನುಸ್ಸಿನೊಡನೆ ಹೋಗಿ ಪಟ್ಟಣದಲ್ಲಿ ಜನಗಳ ಮುಂದೆ ಸಂಚರಿಸುತ್ತಿದ್ದರೆ, ಜನರು ನಮ್ಮನ್ನು ಒಡನೆಯೇ ಗುರುತುಹಿಡಿಯುವುದರಲ್ಲಿ ಸಂದೇಹವಿಲ್ಲ. ಅಜ್ಞಾತವಾಸಕಾಲಕ್ಕೆ ಮೊದಲು ನಮ್ಮಲ್ಲಿ ಒಬ್ಬನ ಗುರುತು ಸಿಕ್ಕಿದರೂ ತಿರುಗಿ ನಾವು ಹನ್ನೆರಡುವರ್ಷ ವನವಾಸದಲ್ಲಿರಬೇಕಾಗುವುದು. ಆದುದರಿಂದ ಈ ನಮ್ಮ ಆಯುಧಗಳೆಲ್ಲವನ್ನೂ ಎಲ್ಲಿಯಾದರೂ ಬಚ್ಚಿಟ್ಟು ಪುರಪ್ರವೇಶವನ್ನು ಮಾಡುವುದು ಒಳ್ಳೆಯದು" ಎಂದನು. ಅಜಾತಶತ್ರುವಾದ ಧರ್ಮರಾಜನ ಮಾತನ್ನು ಕೇಳಿ, ಮಹಾಯಶಸ್ವಿಯೂ, ಶತ್ರುನಾಶಕನೂ ಆದ ಅರ್ಜುನನು ಹೀಗೆಂದು ಹೇಳುವನು. "ಓ ನರಶ್ರೇಷ್ಠಾ! ಇದೋ! ಈ ವನದಲ್ಲಿ ಒಂದು ದೊಡ್ಡ ಬನ್ನೀಮರವು ಕಾಣಿಸುವುದು ನೋಡು. ಅದರ ಕೊಂಬೆಗಳು ಭಯಂಕರವಾಗಿ ಹರಡಿರುವುವು. ಶ್ಮಶಾನಕ್ಕೆ ಸಮೀಪವಾಗಿ, ಸಂಚಾರಮಾರ್ಗವನ್ನು ಬಿಟ್ಟು ಒಂದು ಕಡೆಗಾಗಿರುವುದರಿಂದ, ಅದರ ಬಳಿಗೆ ಜನಗಳು ಹೋಗುವ ಸಂಭವವಿಲ್ಲ. ಬಹಳ ವಿಶಾಲವಾಗಿ ಹರಡಿದ ಕೊಂಬೆಗಳುಳ್ಳ ಈ ಮರದಮೇಲೆ ಕಾಗೆಗಳು ವಿಶೇಷವಾಗಿ ಸೇರಿಕೊಂಡಿರುವುವು. ಇದರ ಅಡಿಮರವು ಬಹಳ ದಪ್ಪನಾಗಿ ಉಬ್ಬಿ ಬೆಳೆದಿರುವುದರಿಂದ, ಏರು

ವುದೂ ಕಷ್ಟವೆಂದು ತೋರುತ್ತಿದೆ. ಈ ಶ್ಮಶಾನಕ್ಕೆ ಸಮೀಪದಲ್ಲಿ ಸುತ್ತು ಮುತ್ತಲೂ ವಿಶೇಷವಾಗಿ ಮನೆಗಳೂ ಕಾಣುವುದಿಲ್ಲ. ಆದುದರಿಂದ ಈ ಮರದಮೇಲೆ ನಮ್ಮ ಆಯುಧಗಳನ್ನು ಬಚ್ಚಿಟ್ಟು ಪಟ್ಟಣದೊಳಗೆ ಪ್ರವೇಶಿಸುವೆವು. ಇದರ ಸುತ್ತುಮುತ್ತಿನಲ್ಲಿ ಜನಗಳಾರೂ ಸಂಚರಿಸುವಹಾಗಿಲ್ಲ. ಆದುದರಿಂದ, ನಮ್ಮೆಲ್ಲರ ಆಯುಧಗಳನ್ನು ಒಂದು ಮನುಷ್ಯಾಕಾರಕ್ಕೆ ಜೋಡಿಸಿ ಅದರಮೇಲೆ ಚರ್ಮ, ಕೂದಲು, ಅಸ್ಥಿ ಮುಂತಾದುವುಗಳಿಂದ ಮುಚ್ಚಿದಹಾಗೆ ಮಾಡಿ, ಬಿಲ್ಲಿನ ನಾಣುಗಳಿಂದ ಬಿಗಿದು ಕಟ್ಟಿ, ತಾನಾಗಿ ಈ ಮರದ ಕೊಂಬೆಗೆ ಉರುಲುಹಾಕಿಕೊಂಡ ಒಬ್ಬ ಮನುಷ್ಯನ ಶವದಂತೆ ಕಾಣಿಸಿ ಇದಕ್ಕೆ ತೂಗುಬಿಡುವೆವು. ಹೀಗೆ ಮಾಡಿಟ್ಟರೆ, ಕಾಡಿನಲ್ಲಿ ಸಂಚರಿಸುವ ಮನುಷ್ಯರು ಯಾರೂ ಈ ಮರದ ಹತ್ತಿರಕ್ಕೆ ಬರಲಾರರು. ಇದರೊಳಗೆ ಆಯುಧಗಳನ್ನು ಬಚ್ಚಿಟ್ಟಿರುವ ಸಂಗತಿಯೂ ಬೇರೊಬ್ಬರಿಗೆ ತಿಳಿಯಲಾರದು'' ಎಂದನು. ಧನಂಜಯನು ಹೀಗೆಂದು ಹೇಳಿ, ಶಸ್ತ್ರಗಳನ್ನಿಡುವುದಕ್ಕಾಗಿ ಯತ್ನಿಸಿದಾಗ, ಪಂಚಪರ್ವತಗಳಿಗೆ ಸಮಾನರಾದ ಆ ಪಂಚಪಾಂಡವರೂ ತಮ್ಮತಮ್ಮ ಮಹಾಯುಧಗಳನ್ನೂ, ಬತ್ತಳಿಕೆಗಳನ್ನೂ, ಉಜ್ವಲಕಾಂತಿಯುಳ್ಳ ಖಡ್ಗಗಳನ್ನೂ ತಂದು ಒಂದಾಗಿ ಸೇರಿಸಿಟ್ಟರು. ಆಗ ಯುಧಿಷ್ಠಿರನು ಸಹದೇವನನ್ನು ಕರೆದು ''ವತ್ಸ! ಸಹದೇವಾ! ಎಲೈ ವೀರನೆ! ನೀನು ಈ ಮರವನ್ನೇರಿ ಈ ಆಯುಧಗಳನ್ನೆಲ್ಲ ಅದರ ಮೇಲೆ ಕಟ್ಟಿಡಬೇಕು'' ಎಂದು ಹೇಳಿ, ಅರ್ಜುನನನ್ನು ಕರೆದು, ಆಯುಧಗಳನ್ನೆಲ್ಲ ಎತ್ತಿಕೊಡುವಂತೆ ಹೇಳಿದನು. ಆಗ ಅರ್ಜುನನು ಹಿಂದೆ ತಾನು ಯಾವ ಧನುಸ್ಸಿನಿಂದ ದೇವ, ಮನುಷ್ಯ, ಪಿಶಾಚ, ನಾಗ, ರಾಕ್ಷಸರನ್ನೂ, ನಿವಾತಕವಚರನ್ನೂ, ಪೌಲೋಮರನ್ನೂ, ದುರ್ಜಯರಾದ ಕಾಲಕೇಯರನ್ನೂ ಜಯಿಸಿ, ರಥಮಾತ್ರ ಸಹಾಯನಾಗಿ ನಿಗ್ರಹಿಸಿದನೋ, ಐಶ್ವರ್ಯದಿಂದ ಪ್ರಬಲವೆನಿಸಿದ ಇನ್ನೂ ಬೇರೆ ಅನೇಕದೇಶಗಳನ್ನು ಜಯಿಸಿದನೋ, ಶತ್ರುಭಯಂಕರವೂ, ಮಹಾಘೋರವೂ ಆದ ಆ ಗಾಂಡೀವವೆಂಬ ಬಿಲ್ಲನ್ನು ನಾಣಿಳಿಸಿದನು. ಆಮೇಲೆ ಮಹಾತೇಜಸ್ವಿಯಾದ ಯುಧಿಷ್ಠಿರನು, ಯಾವ ತನ್ನ ಧನುಸ್ಸಿನಿಂದ ಕುರುಕ್ಷೇತ್ರವನ್ನು ಕಾಪಾಡಿದನೋ, ಯಾವುದು ಸರ್ವಲೋಕವನ್ನೂ ವಶಗೊಳಿಸತಕ್ಕ ಪ್ರಭಾವ

ದಲೇ ನಕುಲನೆಂದು ಹೆಸರುಗೊಂಡವನೂ ಆದ ಆ ಮಾದ್ರೀಪುತ್ರನು, ಹಿಂದೆ ಯಾವುದರಿಂದ ತಾನು ಪಶ್ಚಿಮದಿಕ್ಕನ್ನು ಜಯಿಸಿದ್ದನೋ ಅಂತಹ ಧನುಸ್ಸನ್ನು ನಾಣಿಳಿಸಿ ತಂದುಕೊಟ್ಟನು. ಆಮೇಲೆ ಧರ್ಮರಾಜನು ಸಹದೇವನನ್ನು ನೋಡಿ "ವತ್ಸ ಸಹದೇವಾ! ಕಳಿಂಗರನ್ನೂ, ದಕ್ಷಿಣದೇಶದವರನ್ನೂ, ಮಾಗಧರನ್ನೂ ಯಾವ ಧನುಸ್ಸಿನಿಂದ ನೀನು ಯುದ್ಧದಲ್ಲಿ ದಹಿಸಿದೆಯೋ, ಆ ನಿನ್ನ ಧನುಸ್ಸನ್ನು ಮರದಮೇಲಿಡುವುದಕ್ಕಾಗಿ ನಾಣಿಳಿಸಿ ತೆಗೆದುಕೊಂಡು ಬಾ" ಎನಲು, ಸಹದೇವನು ಒಡನೆಯೇ ತನ್ನ ಧನುಸ್ಸಿಗೆ ಕಟ್ಟಿದ ನಾಣನ್ನು ಬಿಚ್ಚಿತಂದನು. ಆಮೇಲೆ ಆ ಪಾಂಡವರೆಲ್ಲರೂ ಚಿನ್ನದ ಹಿಡಿಗಳುಳ್ಳ ತಮ್ಮ ಖಡ್ಗಗಳನ್ನೂ, ನಾನಾಬಗೆಯ ಬಾಣಗಳನ್ನೂ, ಬತ್ತಳಿಕೆಗಳನ್ನೂ, ಆಯುಧಗಳನ್ನೂ, ಗದೆಗಳನ್ನೂ, ಸಣ್ಣ ಕತ್ತಿಗಳನ್ನೂ ಒಂದಾಗಿ ಸೇರಿಸಿ ಕಟ್ಟಿದರು. ಆಗ ಧರ್ಮರಾಜನು ಸಹದೇವನನ್ನು ಕುರಿತು "ವತ್ಸ! ಸಹದೇವ! ನೀನು ಈ ಬನ್ನಿಯ ಮರವನ್ನೇರಿ, ಈ ನಮ್ಮ ಆಯುಧಗಳನ್ನೆಲ್ಲ ಅದರ ಮೇಲಿಡು. ಇದೋ! ಈ ಸಮೀಪದಲ್ಲಿ ಗೋಜಾತಿಯ ಮೃಗವೊಂದು ಪ್ರಾಣವನ್ನು ನೀಗಿ ಅಚೇತನವಾಗಿ ಬಿದ್ದಿದೆ. ಈ ಮೃಗವನ್ನು ಕತ್ತರಿಸಿ ಅದರ ಚರ್ಮವನ್ನು ಸುಲಿದುತೆಗೆದು, ಅದರಿಂದ ಈ ನಮ್ಮ ಆಯುಧಗಳೆಲ್ಲವನ್ನೂ ಸುತ್ತಿಡು" ಎಂದನು. ಅದರಂತೆಯೇ ಸಹದೇವನು ಬನ್ನಿಯ ಮರವನ್ನೇರಿ, ಬಹುಶೀಘ್ರವಾಗಿ ಬಿಲ್ಲುಗಳನ್ನು ಆ ಮರಕ್ಕೆ ಕಟ್ಟಿ, ಪಶುವಿನ ಚರ್ಮದಿಂದ ಸುತ್ತಿ ಕಟ್ಟಿದನು. ಚಳಿ, ಗಾಳಿ, ಮಳೆಗಳಿಂದಾಗಲಿ, ಬಿಸಿಲಿನಿಂದಾಗಲಿ, ಆ ಆಯುಧಗಳೊಂದೂ ಕೆಟ್ಟುಹೋಗಬಾರದೆಂದು ಅವುಗಳನ್ನು ಬಹಳ ಎಚ್ಚರಿಕೆಯಿಂದ ಬಾರಿಬಾರಿಗೂ ಚೆನ್ನಾಗಿ ಸುತ್ತಿ ಚರ್ಮದಿಂದ ಮುಚ್ಚಿಟ್ಟನು. ದೊಡ್ಡ ಮಳೆ ಬಂದಾಗಲೂ ಆಯುಧಗಳಿಗೆ ಎಲ್ಲೆಲ್ಲಿ ಇರಿಸಲುನೀರು ತಗುಲಬಹುದೆಂದು ಸಂದೇಹವು ತೋರಿತೋ, ಆ ಸ್ಥಳಗಳನ್ನೆಲ್ಲ ಬಲವಾಗಿ ಹಗ್ಗದಿಂದ ಚೆನ್ನಾಗಿ ಬಿಗಿದು ಕಟ್ಟಿದನು. ಆಮೇಲೆ ಪಾಂಡವರು ಪ್ರಾಯೋಪವೇಶದಿಂದ ಒಣಗಿ, ಕೇವಲ ಚರ್ಮವೂ, ಅಸ್ಥಿಯೂ, ನರಗಳೂ ಮಾತ್ರವುಳ್ಳ ಒಬ್ಬ ಉಂಛವೃತ್ತಿಯವನ (ತಿರುಪೆಯವನ) ಮೃತಶರೀರವು ಸಮೀಪದಲ್ಲಿರುವುದನ್ನು ಕಂಡು, ಅದನ್ನು ತಂದು ಆ ಆಯುಧದ ಕಟ್ಟಿನ ಮುಂಗಡೆಗೆ ಬಿಗಿದಿಟ್ಟರು.

ರೂ ಆದ ನಮಗೆ ಹಿರಿಯರ ಕಾಲದಿಂದ ಅನುಸರಿಸಿ ಬಂದ ಕುಲಧರ್ಮವಾಗಿದೆ'' ಎಂಬ ಮಾತುಗಳನ್ನು ಎಲ್ಲರ ಕಿವಿಗೂ ಬೀಳುವಂತೆ ಹೇಳುತ್ತ ಬರುತ್ತಿದ್ದರು. ಎಲ್ಲರೂ ವಿರಾಟನಗರದ್ವಾರಕ್ಕೆ ಬಂದೊಡನೆ, ಭೀಮಾರ್ಜುನರೂ, ನಕುಲ ಸಹದೇವರೂ, ಧರ್ಮರಾಜನೂ, ರಾಜಪತ್ನಿಯಾದ ದ್ರೌಪದಿಯೂ, ಹಿಂದೆ ತಾವುತಾವು ನಿರ್ಣಯಿಸಿಕೊಂಡಿದ್ದಂತೆ ವೇಷಾಂತರಗಳಿಂದ ಮತ್ಸ್ಯರಾಜನ ಬಳಿಯಲ್ಲಿ ಹದಿಮೂರನೆಯ ವರ್ಷಾಂತದವರೆಗೆ ಅಜ್ಞಾತವಾಸದಿಂದಿರುವುದಕ್ಕಾಗಿ ಪುರಪ್ರವೇಶವನ್ನು ಮಾಡಿದರು. ಆಗ ಧರ್ಮರಾಜನು ವಿರಾಟನಗರದಲ್ಲಿ, ತಮ್ಮೊಳಗೆ ಒಬ್ಬರಿಗೊಬ್ಬರು ರಹಸ್ಯವಾಗಿ ಕರೆಯುವುದಕ್ಕಾಗಿ, ಐದು ಮಂದಿಗೂ ಕ್ರಮವಾಗಿ, ಜಯ, ಜಯೇಶ, ವಿಜಯ, ಜಯತ್ಸೇನ, ಜಯದ್ಬಲರೆಂಬ ಸಂಕೇತನಾಮಗಳನ್ನಿಟ್ಟು "ಏನಾದರೂ ಆಪತ್ತು ಸಂಭವಿಸಿದಾಗ, ನಾವು ಅನ್ಯೋನ್ಯವಾಗಿ ಈ ಸಂಕೇತನಾಮಗಳಿಂದಲೇ ಕರೆಯಬೇಕು'' ಎಂದು ನಿಯಮಿಸಿದನು. ಆಮೇಲೆ ಆ ಪಾಂಡವರೆಲ್ಲರೂ ತಮ್ಮ ಪ್ರತಿಜ್ಞೆಯಂತೆ ಹದಿಮೂರನೆಯ ವರ್ಷದ ಅಜ್ಞಾತವಾಸಕ್ಕಾಗಿ, ಮಹಾ ವೈಭವವುಳ್ಳ ಆ ವಿರಾಟನಗರದೊಳಕ್ಕೆ ಕಾಲಿಟ್ಟರು.

ಇದು ಏಳನೆಯ ಅಧ್ಯಾಯವು.

---

{ ವಿರಾಟನಗರಪ್ರವೇಶಕ್ಕೆ ಮೊದಲು ಧರ್ಮರಾಜನು ದುರ್ಗಾಸ್ತುತಿಯನ್ನು ಮಾಡಿದುದು. }

ರಮಣೀಯವಾದ ಆ ವಿರಾಟನಗರದೊಳಗೆ ಪ್ರವೇಶಿಸುವ ಮೊದಲು ಯುಧಿಷ್ಠಿರನು ದುರ್ಗಾಸ್ತುತಿಯನ್ನು ಮಾಡತೊಡಗಿದನು. ಶ್ರೀಮನ್ನಾರಾಯಣನಿಗೆ ವಿಶ್ವಾಸಪಾತ್ರಳಾಗಿ, ತ್ರಿಲೋಕೇಶ್ವರಿಯೆನಿಸಿಕೊಂಡ ಯಾವ ದೇವಿಯು, ನಂದಗೋಕುಲದಲ್ಲಿ ಯಶೋದೆಯ ಗರ್ಭದಿಂದ ಹುಟ್ಟಿ, ಲೋಕಕ್ಕೆ ಮಂಗಳಕರೆಯಾಗಿ ಯದುಕುಲವರ್ಧಿನಿಯೆನಿಸಿಕೊಂಡಳೋ ಯಾವಳು ಕಂಸನಿಂದ ಶಿಲಾತಲದಲ್ಲಿ ಅಪ್ಪಳಿಸಲ್ಪಟ್ಟವಳಾಗಿ, ಆಕಾಶಕ್ಕೆ ಹಾರಿ ಕಂಸನನ್ನು ಓಡಿಸಿ ದಾನವರಿಗೆ ಕ್ಷಯಕಾರಿಣಿಯಾದಳೋ ! ಶ್ರೀಕೃಷ್ಣ

ನಿಗೆ ಸಹೋದರಿಯಾಗಿ, ದಿವ್ಯಮಾಲಿಕೆಯಿಂದಲಂಕೃತಳಾಗಿ, ದಿವ್ಯ ವಸ್ತ್ರವನ್ನು ಧರಿಸಿ, ಖಡ್ಗ ಖೇಟಕಗಳೆಂಬ ಆಯುಧಗಳನ್ನು ಹಿಡಿದು ಶೋಭಿಸುತ್ತಿದ್ದಳೋ, ಮಂಗಳಸ್ವರೂಪಿಣಿಯಾದ ಯಾವಳು ತನ್ನನ್ನು ಸ್ಮರಿಸತಕ್ಕವರ ಪಾಪಭಾರವನ್ನಿಳಿಸುವುದಕ್ಕಾಗಿ ಕೆಸರಿನಲ್ಲಿ ಸಿಕ್ಕಿದ ದುರ್ಬಲವಾದ ಗೋವನ್ನು ಉದ್ಧರಿಸುವಂತೆ ಆ ಪಾಪದಿಂದುದ್ಧರಿಸುವಳೋ, ಅಂತಹ ದುರ್ಗೆಯನ್ನು ಧರ್ಮರಾಜನು ಮನಸಾ ಧ್ಯಾನಿಸಿ, ತನ್ನ ತಮ್ಮಂದಿರೊಡನೆ ಆ ದೇವಿಯ ಪ್ರತ್ಯಕ್ಷದರ್ಶನವನ್ನಪೇಕ್ಷಿಸಿ, ಬಗೆಬಗೆಯ ಸ್ತೋತ್ರಗಳಿಂದ ಸ್ತುತಿಸತೊಡಗಿದನು. "ವರಪ್ರದೇ! ಹೇ ಕೃಷ್ಣೇ! ಕುಮಾರೀ! ಬ್ರಹ್ಮಚಾರಿಣೀ! ನಿನಗೆ ನಮಸ್ಕಾರವು. ಬಾಲಸೂರ್ಯನಿಗೆ ಸಮಾನವಾದ ಆಕೃತಿಯಿಂದಲೂ, ಪೂರ್ಣಚಂದ್ರನಿಗೆಣೆಯಾದ ಮುಖದಿಂದಲೂ, ನಾಲ್ಕು ಭುಜಗಳಿಂದಲೂ, ನಾಲ್ಕು ಮುಖಗಳಿಂದಲೂ ಉಬ್ಬಿದ ಸ್ತನಜಘನಗಳಿಂದಲೂ ಶೋಭಿಸುವ ನಿನಗೆ ನಮಸ್ಕಾರವು. ನವಿಲುಗರಿಯ ಬಳೆಗಳನ್ನೂ, ಕೇಯೂರಾಂಗದಗಳೆಂಬ ತೋಳ್ಬಳೆಗಳನ್ನೂ ಧರಿಸಿದ ನಿನಗೆ ನಮಸ್ಕಾರವು. ನೀನು ಶ್ರೀಮಹಾವಿಷ್ಣುವಿನ ಪತ್ನಿಯಾದ ಲಕ್ಷ್ಮೀದೇವಿಯಂತೆ ಪ್ರಕಾಶಿಸುವೆ. ಓ ಗಗನಚಾರಿಣೀ! ನಿನ್ನ ಸ್ವರೂಪವೂ, ನಿನ್ನ ಬ್ರಹ್ಮಚರ್ಯವೂ ಅತ್ಯಂತ ಶುದ್ಧವಾದುದು. ನೀಲಮೇಘದಂತೆ ಶ್ಯಾಮಲವರ್ಣವುಳ್ಳವಳು. ಸಂಕರ್ಷಣದೇವನ ಮುಖದಂತೆ ಮುಖವುಳ್ಳವಳು. ಇಂದ್ರಧ್ವಜದಂತೆ ನೀಡಿದ ಭುಜಗಳುಳ್ಳವಳು. ಬೇರೆಬೇರೆ ಕೈಗಳಲ್ಲಿ ಪಾತ್ರವನ್ನೂ, ತಾವರೆ ಹೂವನ್ನೂ, ಘಂಟೆಯನ್ನೂ, ಪಾಶ ಚಾಪ ಮಹಾಚಕ್ರ ಮೊದಲಾದ ನಾನಾಯುಧಗಳನ್ನೂ ಧರಿಸಿ, ಶುದ್ಧವಾದ ಸ್ತ್ರೀರೂಪದಿಂದಿರುವೆ! ದೇವಿ! ನೀನು ಕುಂಡಲಾಲಂಕೃತಗಳಾದ ಕಿವಿಗಳಿಂದಲೂ, ಚಂದ್ರಸದೃಶ ಮುಖದಿಂದಲೂ ವಿಚಿತ್ರವಾದ ಕಿರೀಟದಿಂದಲೂ, ಅಂದವಾದ ತುರುಬಿನಿಂದಲೂ ಸರ್ಪದೇಹದಂತೆ ಒಪ್ಪುವ ಒಡ್ಯಾಣದಿಂದಲೂ ಪ್ರಕಾಶಿಸುತ್ತಿರುವೆ. ಕಾಂಚೀದಾಮದಿಂದ ಅಲಂಕೃತವಾದ ನಿನ್ನ ಕಟಿಭಾಗವು, ವಾಸುಕಿ ಶರೀರದಿಂದ ಆವೃತವಾದ ಮಂದರಪರ್ವತದಂತೆ ಇರುವುದು. ನವಿಲುಗರಿಗಳಿಂದ ನಿರ್ಮಿತವಾಗಿ ಮೇಲಕ್ಕೆತ್ತಿದ ಧ್ವಜದಿಂದ ಶೋಭಿಸುತ್ತಿರುವೆ. ಕೌಮಾರವ್ರತವನ್ನು ಹಿಡಿದು ದೇವಲೋಕವನ್ನು ಪಾವನಮಾಡಿದೆ. ಆದುದರಿಂದ ನೀನು ದೇವತೆಗಳ

ಅಜ್ಞಾತವಾಸದಲ್ಲಿರುವ ನಿಮ್ಮನ್ನು ಕೌರವರಾಗಲಿ, ಆ ನಗರವಾಸಿಗಳಾಗಲಿ, ಇತರರಾಗಲಿ ತಿಳಿಯಲಾರರು'' ಎಂದಳು.

ವರಪ್ರದೆಯಾದ ದುರ್ಗಾದೇವಿಯು ಯುಧಿಷ್ಠಿರನಿಗೆ ಹೀಗೆಂದು ಹೇಳಿ, ಆ ಪಾಂಡವರೆಲ್ಲರಿಗೂ ರಕ್ಷೆಯನ್ನು ಮಾಡಿ ಅಲ್ಲಿಯೇ ಅದೃಶ್ಯಳಾದಳು.

ಇದು ಎಂಟನೆಯ ಅಧ್ಯಾಯವು.



## ಯುಧಿಷ್ಠಿರನು ಸನ್ಯಾಸಿವೇಷದಿಂದ ವಿರಾಟನ ಬಳಿಗೆ ಬಂದುದು.

ಆಮೇಲೆ ಪಾಂಡವರು ಶುದ್ಧಜಲವುಳ್ಳುದಾಗಿಯೂ, ಶುಭಪ್ರದವಾಗಿಯೂ, ದೋಷರಹಿತವಾಗಿಯೂ ಇರುವ ಗಂಗಾನದಿಯನ್ನು ಕಂಡರು. ಮಹರ್ಷಿಗಂಧರ್ವಸೇವಿತವಾಗಿ, ಲೋಕಮನೋಹರವಾದ ಆ ಜಾಹ್ನವೀ ನದಿಯಲ್ಲಿ ಪಾಂಡವರೆಲ್ಲರೂ ಇಳಿದು ಸ್ನಾನಮಾಡಿ, ದೇವರ್ಷಿಪಿತೃಗಳಿಗೆ ತರ್ಪಣವನ್ನು ಮಾಡಿದರು. ಅಲ್ಲಿ ಯುಧಿಷ್ಠಿರನಿಗೆ, ತಂದೆಯಾದ ಯಮಧರ್ಮರಾಜನು ತನಗೆ ಕೊಟ್ಟ ವರವು ನೆನಪಿಗೆ ಬಂದಿತು. ಒಡನೆ ಅವನು ಅಗ್ನಿಕಾರ್ಯವನ್ನೂ, ಜಪಗಳನ್ನೂ ಮುಗಿಸಿ, ಪೂರ್ವಾಭಿಮುಖನಾಗಿ ನಿಂತು ಕೈ ಮುಗಿದು, ತನ್ನ ತಂದೆಯಾದ ಧರ್ಮರಾಜನನ್ನು ಧ್ಯಾನಿಸಿಕೊಂಡು, ಮೆಲ್ಲಗೆ ಹೀಗೆಂದು ಚಿಂತಿಸುವನು. "ವರಪ್ರದನೂ, ಪ್ರಜಾಧಿಪತಿಯೂ ಆದ ನನ್ನ ತಂದೆ ಯಮಧರ್ಮರಾಜನು, ನನ್ನಲ್ಲಿ ಪ್ರಸನ್ನನಾಗಿ ವರವನ್ನು ಕೊಟ್ಟಿರುವನು. ನನ್ನ ಸಹೋದರರು ದಾಹದಿಂದ ನೀರನ್ನಪೇಕ್ಷಿಸಿದಾಗ, ನನ್ನ ಮಾತಿನಂತೆ ಹೋಗಿ, ಒಂದು ತಟಾಕವನ್ನು ಪ್ರವೇಶಿಸಿದರು. ಆಗ ಅವರು, ಯುದ್ಧದಲ್ಲಿ ವಜ್ರಪಾಣಿಯಾದ ಇಂದ್ರನಿಂದ ದಾನವರು ಹೇಗೋ ಹಾಗೆ, ಒಬ್ಬ ಯಕ್ಷರಾಜನಿಂದ ಆ ಅರಣ್ಯಮಧ್ಯದಲ್ಲಿ ಕೆಳಗೆ ಕೆಡಹಲ್ಪಟ್ಟರು. ಆಗ ನಾನು ಹೋಗಿ, ಅಲ್ಲಿ ಆ ಯಕ್ಷನು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳಿ, ನನ್ನ ತಂದೆಯಾದ ಧರ್ಮರಾಜನನ್ನು

ವಿರಾಟನ ಸಭೆಗೆ ಬಂದನು. ಆಗ ವಿರಾಟನ ವೈಭವವನ್ನು ಕೇಳಬೇಕೆ? ಸಭಾಸ್ಥಾನದಲ್ಲಿ ಕುಳಿತಿದ್ದ ವಿರಾಟನು, ಅಗ್ನಿಯಂತೆ ಮಹಾ ತೇಜಸ್ವಿಯಾಗಿ ಬೆಳಗುತ್ತ, ಕ್ರೂರವಿಷವುಳ್ಳ ಸರ್ಪದಂತೆ, ಇತರರಿಗೆ ದುರಾಸದನಾಗಿರುವನು. ಅನೇಕಜನರು ಸುತ್ತಲೂ ಕೈಕಟ್ಟಿ ನಿಂತಿರುವರು. ವಿಚಿತ್ರಗಳಾದ ನಾನಾಬಗೆಯ ಆಯುಧಗಳನ್ನು ಕೈಯಲ್ಲಿ ಹಿಡಿದ ಅನೇಕಯೋಧರು ಅವನ ಅಂಗರಕ್ಷಕರಾಗಿ ಸುತ್ತಲೂ ನಿಂತಿರುವರು. ಶಿಕ್ಷೆಗಳನ್ನೂ, ಅಕ್ಷರಗಳನ್ನೂ, ಮಂತ್ರಗಳನ್ನೂ ಬಲ್ಲ ಅನೇಕಬ್ರಾಹ್ಮಣರು, ಕೈಕಾಣಿಕೆಗಳನ್ನು ಹಿಡಿದು ನಾಲ್ಕು ಕಡೆಗಳಿಂದಲೂ ಬಂದು ಕಿಕ್ಕಿರಿದು ನಿಂತಿರುವರು. ಅಲ್ಲಲ್ಲಿ ಆನೆಗಳೂ, ಕುದುರೆಗಳೂ, ಆನೆಯ ಮುಖವುಳ್ಳ ಮೃಗಗಳೂ, (ವ್ಯಾಳಿಗಳೂ) ದಟ್ಟವಾಗಿ ನಿಂತಿರುವುವು. ಅಲ್ಲಲ್ಲಿ ಗುಜ್ಜಾರಿಗಳು ಸುತ್ತಲೂ ಓಡಾಡುತ್ತಿರುವರು. ಇಂತಹ ಆಸ್ಥಾನದನಡುವೆ ವಿರಾಟನು, ಎತ್ತರವಾದ ಬಿಳೀತಲೆಪಾಗನ್ನು ಧರಿಸಿ, ವೈಡೂರ್ಯದ ಕುಂಡಲಗಳನ್ನು ಕಿವಿಯಲ್ಲಿಟ್ಟು ಕುಳಿತಿರುವನು. ಆಗ ಯುಧಿಷ್ಠಿರನು, ಸ್ವರ್ಗದಲ್ಲಿ ಇಂದ್ರನನ್ನು ಬೃಹಸ್ಪತಿಯು ಹೇಗೋ ಹಾಗೆ ವಿರಾಟನನ್ನು ಸಮೀಪಿಸಿದನು. ಹೀಗೆ ಬರುತ್ತಿರುವ ಯುಧಿಷ್ಠಿರನನ್ನು ವಿರಾಟನೂ, ಅವನ ಸಭೆಯಲ್ಲಿ ನೆರೆದಿದ್ದ ಅನೇಕಬ್ರಾಹ್ಮಣರೂ ಕುತೂಹಲದಿಂದ ನೋಡುತ್ತಿದ್ದರು. ಆಗ ವಿರಾಟನು "ಎಲೈ ಸಭಾಸದರೆ! ನಮ್ಮ ಸಭೆಗೆ ಪ್ರವೇಶಿಸುತ್ತಿರುವ ಈ ಯುವಕನಾರು? ಇವನನ್ನು ನಿಮ್ಮಲ್ಲಿ ಯಾರಾದರೂ ಇದಕ್ಕೆ ಮೊದಲು ಕಂಡುದುಂಟೇ? ಇವನು ತನ್ನ ಕಾಂತಿಯಿಂದ ಕುಬೇರನನ್ನು ಹೋಲುತ್ತಿರುವನು. ತನ್ನ ರೂಪಾತಿಶಯದಿಂದ ಭೂಮಿಯನ್ನು ಬೆಳಗುವಂತಿರುವನು. ಸಿಂಹದಂತೆಯೂ, ಆನೆಯ ಸಲಗದಂತೆಯೂ ಬರುವ ಈತನು ಸುವರ್ಣಪರ್ವತದಂತೆ ಶೋಭಿಸುತ್ತಿರುವನು. ಇವನು ತೇಜಸ್ಸಿನಿಂದ ಸೂರ್ಯಾಗ್ನಿಗಳಂತೆಯೂ, ಪ್ರಸನ್ನಕಾಂತಿಯಿಂದ ಚಂದ್ರನಕ್ಷತ್ರಗಳೊಡಗೂಡಿದ ಒಂದು ಹೊಸಗ್ರಹದಂತೆಯೂ ತೋರುವನು. ಇವನು ಅಸಾಧಾರಣವಾದ ರಾಜತೇಜಸ್ಸಿನಿಂದ ಬೆಳಗುತ್ತಿದ್ದರೂ, ಇವನ ಹಿಂದೆ ಅನುಚರರಾರೂ ಕಾಣುವುದಿಲ್ಲ. ಪಟ್ಟದಾನೆಯಿಲ್ಲ! ರಾಜಯೋಗ್ಯವಾದ ಶ್ವೇತಚ್ಛತ್ರವಿಲ್ಲ! ಕಿವಿಗಳಲ್ಲಿ ಕುಂಡಲವಿಲ್ಲ! ತೋಳ್ಬಳೆಗಳಿಲ್ಲ! ಕಂಠದಲ್ಲಿ ವಿಚಿ

ರನೂ ನೀನೂ ಸಮಾನಗುಣವುಳ್ಳವರೇ. ನನಗೆ ತಾಯಿ, ತಂದೆ, ಬಂಧುಗಳಾರೂ ಇಲ್ಲ. ನನಗೆ ಅಂದವಿಲ್ಲ. ಸುಖವಿಲ್ಲ. ಸಂತತಿಯಿಲ್ಲ. ಈಗ ನನಗೆ ಸುಖದುಃಖಗಳೂ, ರಾಗದ್ವೇಷಗಳೂ, ಗತಾಗತಗಳೂ ಸಮಾನವಾಗಿಯೇ ಇರುವುವು. ಕಾಮದಿಂದಲೂ, ಧನದಿಂದಲೂ ಮುಕ್ತನಾಗಿರುವೆನು. ಈಗ ನಿನ್ನ ಮನೆಯಲ್ಲಿ ವಾಸಕ್ಕಾಗಿ ಬಂದೆನು. ಒಬ್ಬರಿಗೂ ಸಾಧ್ಯವಲ್ಲದ ಕಾರ್ಯವನ್ನು ಮಾಡಬಲ್ಲ ನಾನು ಈಗ ಹಿಡಿದ ವ್ರತವು ಒಂದು ಸಂವತ್ಸರಕ್ಕೆ ಸಮಾಪ್ತವಾಗುವುದು. ಅದುವರೆಗೆ ಇಲ್ಲಿದ್ದು ನಿನ್ನನ್ನು ನನ್ನ ಕಾರ್ಯಗಳಿಂದ ಸಂತೋಷಪಡಿಸಿ, ಆಮೇಲೆ ನನ್ನಿಷ್ಟವಿದ್ದ ಕಡೆಗೆ ಹೊರಟು ಹೋಗುವೆನು. ಅಕ್ಷಕ್ರೀಡೆಗಳಲ್ಲಿ ನನಗೆ ನೈಪುಣ್ಯವುಂಟು. ಪಕ್ಷಿಗಳ ಮತ್ತು ಮೃಗಗಳ ಶಬ್ದಗಳನ್ನೂ ನಾನು ತಿಳಿಯಬಲ್ಲೆನು. ನಾನು ಪರಾಜಿತನಾಗಿ ಬೇರೆ ಗತಿಯಿಲ್ಲದೆ ಸನ್ಯಾಸವನ್ನು ಪರಿಗ್ರಹಿಸಿ ಭಿಕ್ಷುಕನಾಗಿರುವೆನು,'' ಎಂದನು.

ಈ ಮಾತನ್ನು ಕೇಳಿ ವಿರಾಟನು ಸಂತೋಷದಿಂದ ಆ ಸನ್ಯಾಸಿಯನ್ನು ನೋಡಿ, ಶುಭಾಕ್ಷರಗಳುಳ್ಳ ಮೃದುವಾಕ್ಯದಿಂದ, ಆ ಸಭೆಗೆಲ್ಲಾ ಕೇಳುವಂತೆ ಆತನನ್ನು ಕುರಿತು, ''ಓ ಮಹಾತ್ಮಾ ! ನಿನ್ನ ಇಷ್ಟವರಗಳನ್ನೆಲ್ಲ ಕೊಡುವೆನು. ನಿನಗಿಷ್ಟವಿದ್ದರೆ ಈ ಮತ್ಸ್ಯದೇಶವನ್ನೇ ನೀನು ಆಳುತ್ತಿರಬಹುದು. ಅಕ್ಷವಿದ್ಯೆಯನ್ನು ತಿಳಿದ ಜೂಜಾಳಿಗಳನ್ನು ಕಂಡರೆ ನನಗೂ ಬಹಳ ಪ್ರಿಯವು. ದ್ಯೂತದಲ್ಲಿ ನಿಪುಣನಾದುದರಿಂದ ನೀನು ನನ್ನ ರಾಜ್ಯಕ್ಕೆ ಅರ್ಹನು. ನೀನು ಚಕ್ರವರ್ತಿಗಳಿಗೆ ಸಮನಾಗಿ ಕಾಣಿಸುವೆ. ಆದುದರಿಂದ ನೀನು ಯಾವಾಗಲೂ ನನ್ನೊಡನೆ ಸಮಾನವಾಗಿಯೇ ವಸ್ತ್ರ, ವಾಹನ, ಭೋಜನಾದಿಗಳನ್ನೂ, ಪುಷ್ಪಾಭರಣಗಳನ್ನೂ, ಆಸನಗಳನ್ನೂ, ಅನುಲೇಪನಗಳನ್ನೂ ಯಥೇಚ್ಛವಾಗಿ ಅನುಭವಿಸುತ್ತಿರಬಹುದು. ನಿನ್ನನ್ನು ಯಾವಾಗಲೂ ನೋಡುತ್ತಿರುವುದೇ ನನಗೆ ಬಹಳ ಪ್ರೀತಿಕರವಾಗಿರುವುದು. ಕಷ್ಟಕ್ಕೆ ಸಿಕ್ಕಿದ ಬ್ರಾಹ್ಮಣೋತ್ತಮರಾಗಲಿ, ಬೇರೆ ಜನರಾಗಲಿ ತಮ್ಮ ಕಷ್ಟನಿವೃತ್ತಿಗಾಗಿ ನಿನ್ನಲ್ಲಿಗೆ ಬಂದರೆ, ನೀನು ಕೋರಿದಂತೆ ಅವರಿಗೆ ನಡೆಸಬೇಕಾದ ಕಾರ್ಯಗಳನ್ನೆಲ್ಲ ನಾನು ನಡೆಸಿಕೊಡುವೆನು. ಇದರಲ್ಲಿ

ಸಂದೇಹವಿಲ್ಲ. ನನ್ನಲ್ಲಿ ನಿನಗೆ ಅಪ್ರಿಯವನ್ನು ಮಾಡತಕ್ಕವರು ಯಾರಿದ್ದರೂ ಅವರನ್ನು ಕಂಡುಹಿಡಿದು, ನನ್ನ ದೇಶದಿಂದಲೇ ಹೊರಡಿಸುವೆನು. ಜಿತೇಂದ್ರಿಯನಾದ ನೀನು ನನ್ನ ಸರ್ವಸ್ವತ್ತುಗಳಿಗೂ ಅಧಿಪತಿಯಾಗಿದ್ದು ಇಲ್ಲಿಯೇ ವಾಸಮಾಡುತ್ತಿರು," ಎಂದನು.

ಆಗ ಯುಧಿಷ್ಠಿರನು "ಇದಕ್ಕಿಂತಲೂ ನನಗೆ ಆಗಬೇಕಾದ ಕೋರಿಕೆಯು ಬೇರೊಂದಿಲ್ಲ. ಜೂಜಿನಲ್ಲಿ ಗೆದ್ದ ವಸ್ತುಗಳಲ್ಲಿ ಸ್ವಲ್ಪವನ್ನಾದರೂ ನಾನು ನನ್ನ ಸ್ವಂತಕ್ಕಾಗಿ ಇಟ್ಟುಕೊಳ್ಳತಕ್ಕವನಲ್ಲ. ನಾನು ಎಂತಹ ಮೃಷ್ಟಾನ್ನಭೋಜನವನ್ನಾದರೂ ಮುಟ್ಟುವವನಲ್ಲ. ಹವಿಸ್ಸನ್ನು ಭುಜಿಸುವೆನು. ರಾತ್ರಿಯಲ್ಲಿ ನೆಲದಮೇಲೆ ಮಲಗುವೆನು. ನಾನೊಂದು ವ್ರತೋಪದೇಶವನ್ನನುಸರಿಸಿ, ದೃಢವಾದ ಪ್ರತಿಜ್ಞೆಯನ್ನು ಮಾಡಿಕೊಂಡಿರುವೆನು. ಯಾವನಮೇಲೆಯೂ ಕೋಪಿಸಬಾರದೆಂಬುದು ನನ್ನ ಮುಖ್ಯ ವ್ರತವು. ಈ ನಿಯಮದಿಂದ ನಾನು ನಿನ್ನಲ್ಲಿ ವಾಸಮಾಡುವುದಕ್ಕೆ ಇಷ್ಟಪಡುವೆನೇ ಹೊರತು, ಬೇರೆ ವಿಧದಿಂದಲ್ಲ. ನೀನು ಈ ವರಗಳನ್ನು ಕೊಟ್ಟರೆ ನಾನು ಧನ್ಯನಾಗುವೆನು," ಎಂದನು.

ಎಲೈ ಜನಮೇಜಯ ರಾಜೇಂದ್ರನೇ! ವಿಷ್ಣುವಿಗೆ ವಜ್ರಪಾಣಿಯಾದ ಇಂದ್ರನೊಡನೆ ಸಮಾಗಮವುಂಟಾದಂತೆ, ವಿರಾಟನಿಗೂ, ಯುಧಿಷ್ಠಿರನಿಗೂ ಹೀಗೆ ಪ್ರಥಮಸಮಾಗಮವುಂಟಾಯಿತು. ಧರ್ಮರಾಜನು ಬಂದು ಆಸನದಲ್ಲಿ ಕುಳಿತಿದ್ದಾಗ, ಅವನ ರೂಪಸಂಪತ್ತನ್ನು ಎಷ್ಟು ನೋಡಿದರೂ ವಿರಾಟನಿಗೆ ತೃಪ್ತಿಯುಂಟಾಗುತ್ತಿರಲಿಲ್ಲ. ಸ್ವರ್ಗವನ್ನು ಇಂದ್ರನು ಹೇಗೋ ಹಾಗೆ ಯುಧಿಷ್ಠಿರನು ರಾಜಸಭೆಯನ್ನಲಂಕರಿಸುತ್ತ, ವಿರಾಟನಿಂದ ವಿಶೇಷ ಸತ್ಕೃತನಾಗಿ ಸುಖದಿಂದಿರುತ್ತಿದ್ದನು. ಅವನ ನಿಜಸ್ಥಿತಿಯನ್ನು ಯಾರೂ ತಿಳಿಯಲಾರದಿದ್ದರು.

ಇದು ಒಂಭತ್ತನೆಯ ಅಧ್ಯಾಯವು.



ಅಡಿಗೆಯವನ ವೇಷದಿಂದ ಬಂದ ಭೀಮನನ್ನು ವಿರಾಟನು ತನ್ನ ಪಾಕಶಾಲೆಯ ಅಧಿಕಾರಕ್ಕೆ ನಿಯಮಿಸಿದುದು.

ಆಮೇಲೆ ಆ ವಿರಾಟಸಭೆಯ ಪಶ್ಚಿಮದ ಕಡೆಯಿಂದ, ಭಯಂಕರವಾದ ಆಕೃತಿಯುಳ್ಳ ಸಿಂಹಪರಾಕ್ರಮಿಯಾದ ಭೀಮನು ಬಂದು, ಅಲ್ಲಿದ್ದವರ ಕಣ್ಣಿಗೆ ಕಾಣಿಸಿಕೊಂಡನು. ಆಗ ಭೀಮನಾದರೋ ಕೈಯಲ್ಲಿ ಒಂದು ಕಡೆಗೋಲನ್ನೂ, ಒಂದು ಸೌಟನ್ನೂ ಹಿಡಿದು, ಚೆನ್ನಾಗಿ ಸಾಣೆಹಿಡಿದ ಎರಡು ಸಣ್ಣ ಕತ್ತಿಗಳನ್ನು ಸೊಂಟಕ್ಕೆ ಸಿಕ್ಕಿಸಿರುವನು. ಪಾನಕ, ರಾಗ, ಷಾಡಬಗಳೆಂಬ ರಸವಿಶೇಷಗಳಲ್ಲಿ ನೆನೆಸಿ, ಚೆನ್ನಾಗಿ ತಿಕ್ಕಿ ನಯಮಾಡಿದ, ಹಸುವಿನ ತೊಗಲನ್ನೂ, ಹಸೀಶುಂಠಿ ಮತ್ತು ಮಾಲಾತೃಣಗಳನ್ನೊಳಕೊಂಡ ಒಂದು ಸಂಪುಟವನ್ನೂ, ಕಬ್ಬಿಣದ ಪಾತ್ರೆಯನ್ನೂ ಹಿಡಿದಿರುವನು. ಗಂಭೀರವಾದ ಆಕೃತಿಯಿಂದ ಕೂಡಿ, ಲೋಕವನ್ನೆಲ್ಲ ಬೆಳಗುವ ಸೂರ್ಯನಂತೆ ಉತ್ತಮತೇಜಸ್ಸಿನಿಂದ ಪ್ರಕಾಶಿಸುವನು. ಗಿರಿರಾಜನಂತೆ ಬಲವುಳ್ಳ ಆ ಭೀಮನು, ಮೈಮೇಲೆ ಕಪ್ಪಾದ ಬಟ್ಟೆಯನ್ನುಟ್ಟು, ಮುಂದೆ ಬಂದು ವಿರಾಟನ ಬಳಿಯಲ್ಲಿ ನಿಂತನು. ಆನೆಯ ಸಲಗದಂತಿರುವ ಆ ಭೀಮನು ಸಭಾಮಧ್ಯದಲ್ಲಿ ಬಂದು ನಿಂತಾಗ, ರಾತ್ರಿಯನ್ನು ಚಂದ್ರನು ಹೇಗೋ ಹಾಗೆ ಆ ಸಭಾಂಗಣವೆಲ್ಲವನ್ನೂ ಬೆಳಗುತ್ತಿದ್ದನು. ಇಂದ್ರಾನುಜನಾದ ಉಪೇಂದ್ರನನ್ನೂ, ಯಮದೇವನನ್ನೂ, ದಿಕ್ಪಾಲರಿಗೆಲ್ಲ ಒಡೆಯನಾದ ಶ್ರೀಹರಿಯನ್ನೂ ಹೋಲುತ್ತ, ಬಾಲಸೂರ್ಯನಂತೆ ವರ್ಚಸ್ವಿಯಾಗಿ ಬರುತ್ತಿದ್ದ ಭೀಮನನ್ನು ಕಂಡಾಗಲೇ, ವಿರಾಟನ ಮನಸ್ಸಿಗೆ ಒಂದು ವಿಧವಾದ ಭಯವೂ, ಕಳವಳವೂ ಉಂಟಾಯಿತು. ನಾಲ್ಕು ಕಡೆಗಳಿಗೂ ತಿರುಗಿ ತಿರುಗಿ ನೋಡುತ್ತ ಬೆಜ್ಜರಗೊಂಡಿದ್ದನು. ಶತ್ರುಸೈನ್ಯಗಳನ್ನು ಧ್ವಂಸಮಾಡತಕ್ಕ ಮಹಾಪರಾಕ್ರಮಿಯೂ, ರಾಜಕುಮಾರನೂ ಆದ ಆ ಭೀಮನು, ಮೈಮೇಲೆ ಒಂದೇ ಬಟ್ಟೆಯನ್ನುಟ್ಟು, ಸಭಾಮಧ್ಯಕ್ಕೆ ಬರುತ್ತಿರುವುದನ್ನು ಸ್ವಲ್ಪ ದೂರದಿಂದ ಕಂಡಾಗಲೇ ವಿರಾಟನ ಮನಸ್ಸು ತಬ್ಬಿಬ್ಬಾಯಿತು. ಅಲ್ಲಿದ್ದ ಜನರೆಲ್ಲರೂ ಭಯಗ್ರಸ್ತರಾಗಿ ಮೆಲ್ಲಮೆಲ್ಲಗೆ ಹಿಂಜರಿದು ನಾನಾಕಡೆಗೆ ಸರಿಯುತ್ತಿದ್ದರು.

ಆಗ ವಿರಾಟನು ಚಿಂತೆಯಿಂದ ನಿಟ್ಟುಸಿರು ಬಿಡುತ್ತ ಸಭಾಸದರನ್ನು ನೋಡಿ, "ಓ ಮಹಾಜನರೇ! ಅದೋ! ಅಲ್ಲಿ ಗಜರಾಜನಿಗೆ ಸಾಟಿಯಾದ ಒಬ್ಬ ಯೌವನಶಾಲಿಯು ಈ ನಮ್ಮ ಸಭೆಗಿದಿರಾಗಿ ಬರುತ್ತಿರುವನು. ಅವನು ಯಾರು? ಇದಕ್ಕೆ ಮೊದಲು ನಿಮ್ಮಲ್ಲಿ ಯಾರಾದರೂ ಇವನನ್ನು ನೋಡಿದವರುಂಟೆ? ವಿಶಾಲವಾದ ಎದೆ! ಉಬ್ಬಿದ ಹೆಗಲು! ಸಿಂಹದಂತೆಯೂ, ಹುಲಿಯಂತೆಯೂ ಗಂಭೀರವಾದ ನಡೆ! ಸಿಂಹದಂತೆ ದೇಹಶಕ್ತಿ! ಇವುಗಳಿಂದೊಪ್ಪುತ್ತ, ದಿವ್ಯಪುರುಷನಂತೆ ಕಾಣಿಸುತ್ತಿರುವ ಈತನು ಯಾರಾಗಿರಬಹುದು? ಸುವರ್ಣಗಿರಿಯಂತೆ ಕಾಂತಿಯುಕ್ತನಾಗಿ, ರಾಜತೇಜಸ್ಸಿದಿಂದ ಬೆಳಗುತ್ತಿರುವ ಇವನೂ ಒಬ್ಬ ರಾಜನಂತೆಯೇ ಕಾಣಿಸುತ್ತಿರುವನು. ಇವನು ವಾಸ್ತವದಲ್ಲಿ ಕ್ಷತ್ರಿಯನೇ ಆಗಿರಬೇಕು. ಇವನು ಸಾಕ್ಷಾನ್ಮಹೇಂದ್ರನಿಗೆ ಸಮನಾಗಿರುವನು. ರೂಪದಲ್ಲಿಯೂ ಅಸಮಾನನು. ಈ ಭೂಮಿಯನ್ನು ಇಂದ್ರನಂತೆ ಚೆನ್ನಾಗಿ ಪಾಲಿಸಬಲ್ಲವನು. ಇವನು ರಾಜನಲ್ಲದೇ ಇರಲಾರನೆಂದು ನನಗೆ ತೋರಿದೆ. ಐಶ್ವರ್ಯದಿಂದ ಭ್ರಷ್ಟನಾದ ನಹುಷಪುತ್ರನಂತೆ, ಇವನೂ ಐಶ್ವರ್ಯವನ್ನು ಕಳೆದುಕೊಂಡ ಒಬ್ಬ ರಾಜನೇ ಆಗಿರಬೇಕು," ಎಂದನು.

ವಿರಾಟನು ಹೀಗೆ ತರ್ಕಿಸುತ್ತಿರುವಾಗಲೇ, ಭೀಮನು ಆ ಸಭೆಯ ಮುಂದೆ ಬಂದು, ರಾಜನಿಗೆ ಜಯಶಬ್ದವನ್ನು ಹೇಳಿ, ಆಮೇಲೆ ಸಭಾಧ್ಯಕ್ಷರನ್ನೂ, ಇತರ ಸಭಿಕರನ್ನೂ ಕುಶಲಪ್ರಶ್ನೆಗಳಿಂದ ಸಂತೋಷಗೊಳಿಸಿದನು. ಆಮೇಲೆ ಭೀಮನು ವಿರಾಟರಾಜನಿಗೆ ಮೇಲೆಮೇಲೆ ತನ್ನಲ್ಲಿ ಪ್ರೇಮವು ಹೆಚ್ಚುವಂತಿರುವ ಮೃದುವಾಕ್ಯಗಳಿಂದ ಅವನನ್ನು ಕುರಿತು "ಓ ಶತ್ರುಸೂದನಾ! ಜೀವನಾರ್ಥವಾಗಿ ನಾನು ನಿನ್ನಲ್ಲಿಗೆ ಬಂದೆನು. ನೀನು ಲೋಕಕ್ಕೆಲ್ಲಾ ಮೇಲಾದ ಆಶ್ರಯನೆನಿಸಿರುವೆ. ರಾಜಾ! ನಾನು ಶೂದ್ರನು. ನಾಲ್ಕನೆಯ ವರ್ಣ (ಅಕ್ಷರ) ದವನು. ಗುರುಪದೇಶವನ್ನನುಸರಿಸಿ ಪರಿಚಾರಕ ವೃತ್ತಿಯನ್ನವಲಂಬಿಸಿರುವೆನು. ಒಳ್ಳೇ ತೊವ್ವೆಗಳನ್ನೂ, ಉತ್ತಮವಾದ ರಸಗಳನ್ನೂ ಪಾಕಮಾಡುವ ವಿದ್ಯೆಯು ನನಗೆ ಚೆನ್ನಾಗಿ ತಿಳಿಯುವುದು. ಒಳ್ಳೇ ಭಕ್ಷಣಗಳನ್ನೂ, ಮಾಂಸಗಳನ್ನೂ, ಹಣ್ಣು

ಗಳಿಂದ ಮಾಡಬಹುದಾದ ಅನೇಕ ರಸಾಯನಗಳನ್ನೂ ಪಾಕಮಾಡುವೆನು. ಪಾಕಶಾಲೆಯ ಕೆಲಸದಲ್ಲಿ ನನಗೆ ಸಮಾನನಾದವನೇ ಇಲ್ಲವೆಂದು ತಿಳಿ'' ಎಂದನು. ಆಗ ವಿರಾಟನು ಸಂತೋಷದಿಂದ ಭೀಮನನ್ನು ನೋಡಿ, ಪ್ರಿಯವಾಗಿಯೂ, ಗಂಭೀರವಾಗಿಯೂ ಇರುವ ಮಾತುಗಳಿಂದ ವಿನಯ ಪೂರ್ವಕವಾಗಿ ಹೀಗೆಂದು ಹೇಳುವನು. "ಎಲೈ! ನೀನಾದರೋ ಕುಬೇರ ನಂತೆಯೂ, ಇಂದ್ರನಂತೆಯೂ, ಸೂರ್ಯನಂತೆಯೂ ಪ್ರಕಾಶಿಸುತ್ತಿರುವೆ. ನಿನ್ನಲ್ಲಿ ಯಾವ ವಿಧವಾದ ಶೂದ್ರತ್ವವೂ ಕಾಣಬರುವುದಿಲ್ಲ. ಅಗ್ನಿಗೂ, ಸರ್ಪಕ್ಕೂ ಸಮಾನವಾದ ತೇಜಸ್ಸುಳ್ಳ ನಿನಗೆ, ಅಡಿಗೆಯ ಮನೆಯಲ್ಲಿ ನಡೆಸ ಬೇಕಾದ ವೃತ್ತಿಯು ಯೋಗ್ಯವಾಗಿ ಕಾಣುವುದಿಲ್ಲ. ಗರುಡಗಂಧರ್ವ ನಾಗರಿಗೆ ಸಮಾನನಾದ ನೀನು ಅಡಿಗೆಯವನಾಗಿರಲು ಯೋಗ್ಯನಲ್ಲ. ಆದುದರಿಂದ, ಇನ್ನು ಮೇಲೆ ನೀನು ನನ್ನ ಸೈನ್ಯಕ್ಕೆಲ್ಲ ಅಧಿಪತಿಯಾಗಿರು. ನನ್ನ ರಥಗಳನ್ನೂ, ಧ್ವಜಗಳನ್ನೂ ನೀನೇ ತೆಗೆದುಕೊಂಡು, ನನ್ನ ಆನೆಯ ಸೈನ್ಯಕ್ಕೆ ನಿಯಾಮಕನಾಗು. ಈ ಭೂಮಿಯನ್ನೇ ಪಾಲಿಸುವ ಅರ್ಹತೆಯುಳ್ಳ ನಿನಗೆ ಅಡಿಗೆಯ ಕಾರ್ಯವು ಉಚಿತವಲ್ಲ'' ಎಂದನು.

ಅದಕ್ಕಾ ಭೀಮನು "ರಾಜೇಂದ್ರಾ! ನಾನು ನಾಲ್ಕನೆಯ ವರ್ಣ ದವನು. ನಿನ್ನಿಂದ ಅಂತಹ ಪದವಿಯನ್ನು ಪಡೆಯಲು ನಾನು ಅರ್ಹ ನಲ್ಲ. ನಾನು ಜಾತಿಯಲ್ಲಿ ಶೂದ್ರನು. ನನಗೆ ವಲಲನೆಂದು ಹೆಸರು. ಜೀವನಾರ್ಥಿಯಾಗಿ ನಿನ್ನ ದೇಶಕ್ಕೆ ಬಂದೆನು. ನಾನು ಪೂರ್ವದಲ್ಲಿ ಯುಧಿ ಷ್ಠಿರನ ಅಡಿಗೆಯ ಮನೆಯಲ್ಲಿದ್ದೆನು. ಅವನು ನನಗೆ ಬೇಕಾದ ಹಾಗೆ ಅನ್ನಪಾನಗಳನ್ನು ಕೊಡುತ್ತಿದ್ದನು. ಅವನ ಅಡಿಗೆಯವರಿಗೆಲ್ಲ ನಾನೇ ಪ್ರಧಾನನೆನಿಸಿದ್ದೆನು. ಹೀಗಿದ್ದರೂ ನೀನು ನನ್ನನ್ನು ಅಂಗೀಕರಿಸದೆ ಹೋದಪಕ್ಷದಲ್ಲಿ, ನಾನು ಬಂದ ದಾರಿಯನ್ನು ಹಿಡಿದು ಇಲ್ಲಿಂದ ಹೊರಟು ಹೋಗುವೆನು. ಅನ್ನವನ್ನು ಪಕ್ವಮಾಡುವ ಕೆಲಸಕ್ಕೆ ನೀನು ನನ್ನನ್ನು ನಿಯಮಿಸಿಕೊಂಡರೆ, ನಾನು ಅಡಿಗೆಯವನಾಗಿ ನಿನ್ನಲ್ಲಿರುವೆನು. ಇದ ಲ್ಲದೆ, ಓ ರಾಜೇಂದ್ರಾ! ಬಲದಲ್ಲಿ ನನಗೆ ಸಮಾನನು ಬೇರೊಬ್ಬನಿಲ್ಲ. ಬಾಹುಯುದ್ಧದಲ್ಲಿ ನನಗೆ ಯಾವಾಗಲೂ ಪ್ರಿಯವುಂಟು. ಆನೆಗಳನ್ನೂ,

ಅರ್ಜುನನು ನಪುಂಸಕವೇಷದಿಂದ ವಿರಾಟನ ಸಭೆಗೆ ಬಂದುದು. ವಿರಾಟನು ಅವನನ್ನು ತನ್ನ ಕುಮಾರಿಗೆ ನಾಟ್ಯಾಚಾರ್ಯನಾಗಿರು ವಂತೆ ನಿಯಮಿಸಿದುದು.

ಆಮೇಲೆ, ಒಳ್ಳೇ ಮೈ ಬಣ್ಣವುಳ್ಳ ಬೇರೊಬ್ಬ ಯುವಕನು, ಸ್ತ್ರೀವೇಷ ಧಾರಿಯಾಗಿ, ಚೆನ್ನಾಗಿ ದೇಹಾಲಂಕರಣಮಾಡಿಕೊಂಡು ವಿರಾಟನ ಸಭಾ ಸ್ಥಾನದಮುಂದೆ ಕಾಣಿಸಿಕೊಂಡನು. ಅವನಿಗೆ ಎರಡು ಕಿವಿಗಳಲ್ಲಿಯೂ ಹವಳದ ಕುಂಡಲಗಳು. ಕೈಗಳಲ್ಲಿ ತೂಗಾಡುತ್ತಿರುವ ಶಂಖದ ಬಳೆಗಳು, ಮೈಮೇಲೆ ಕೆಂಪು ಮತ್ತು ಕಪ್ಪು ಬಣ್ಣದ ಎರಡು ವಸ್ತ್ರಗಳು! ಅಂದವಾದ ಮೈಕಟ್ಟು! ಮುಖದಲ್ಲಿ ಶುಕ್ರ ಬೃಹಸ್ಪತಿಗಳಂತೆ ಒಪ್ಪುವ ದಿವ್ಯ ತೇಜಸ್ಸು! ಉದ್ದವಾಗಿ ಮತ್ತು ದಟ್ಟವಾಗಿ ಬೆನ್ನಮೇಲೆ ಕೆದರಿದ ತಲೆಕೂದಲು, ಉಬ್ಬಿದ ಹೆಗಲು, ಮದದಾನೆಯಂತೆ ಗಂಭೀರವಾದ ನಡೆ, ಇಂತಹ ರೂಪಾ ತಿಶಯವುಳ್ಳ ಆ ಅರ್ಜುನನು, ನೆಲವನ್ನು ಜಗ್ಗಿಸುವ ನಡೆಯಿಂದ ವಿರಾಟನ ಸಭೆಯನ್ನು ಪ್ರವೇಶಿಸಿ, ವಿರಾಟನ ಬಳಿಗೆ ಬಂದಾಗ, ತನ್ನ ನಪುಂಸಕ ವೇಷದಿಂದ ನೋಡುವವರ ಕಣ್ಣಿಗೆ ಗ್ರಹಣಹಿಡಿದ ಪೂರ್ಣಚಂದ್ರನಂತೆ, ಒಪ್ಪಿಯೂ, ಒಪ್ಪದಂತೆಯೂ ಕಾಣಿಸಿದನು. ದೇವೇಂದ್ರಪುತ್ರನಾದುದ ರಿಂದ, ದೇವೇಂದ್ರನಂತೆ ದಿವ್ಯ ತೇಜಸ್ಸುಳ್ಳವನೂ, ಶತ್ರುನಿಗ್ರಾಹಕನೂ ಆದ ಆ ಅರ್ಜುನನು, ಕಪಟವಲ್ಲದ ಸಹಜವಾದ ವೇಷದಿಂದ ತನ್ನ ನಿಜ ಸ್ಥಿತಿಯನ್ನು ಮರೆಸಿಕೊಂಡು, ಮದದಾನೆಯಂತೆ ಧೀರವಾದ ನಡೆಯಿಂದ ಸಭಾಸ್ಥಾನಕ್ಕೆ ಬಂದು ನಿಂತನು.

ಇವನನ್ನು ಕಂಡೊಡನೆ ವಿರಾಟರಾಜನು ವಿಸ್ಮಿತನಾಗಿ, ತನ್ನ ಸಮೀ ಪದಲ್ಲಿದ್ದವರನ್ನು ನೋಡಿ “ಈ ಹೊಸ ಮನುಷ್ಯನಾವನು? ಇದುವರೆಗೆ ಇವನ ವಿಷಯವನ್ನು ನಾನು ಕಂಡುಕೇಳಿದಂತಿಲ್ಲವಲ್ಲ?” ಎಂದು ಪ್ರಶ್ನೆ ಮಾಡಿದನು. ಅಲ್ಲಿದ್ದವರಾರೂ, ಅವನು ತಮಗೆ ತಿಳಿದವನೆಂದು ಹೇಳಲಿಲ್ಲ. ಆಗ ರಾಜನು ವಿಸ್ಮಯಗೊಂಡವನಾಗಿ, ಅಲ್ಲಿದ್ದವರನ್ನು ಕುರಿತು “ಮಹಾ ಗಜದಂತಿರುವ ಠೀವಿ! ಸಿಂಹದಂತೆ ನಡೆ! ವೃಷಭದ ಕಣ್ಣಿನಂತಿರುವ ಕಣ್ಣು,

ವುದು. ನೀನು ಬಿಲ್ಲನ್ನು ಹಿಡಿದಾಗಲೇ ದುಂಡಗೆ ಉಬ್ಬಿ ಉದ್ದವಾದ ಈ ನಿನ್ನ ತೋಳುಗಳೆರಡಕ್ಕೂ ಅಧಿಕ ಶೋಭಾಸ್ಪದವಾಗುವುದು. ಆದುದರಿಂದ ನೀನು ನಿನ್ನ ಆಕೃತಿಗೆ ಯೋಗ್ಯವಾದ ಧನುಸ್ಸನ್ನು ಧರಿಸಿ, ಇಲ್ಲಿಯೇ ಸ್ಥಿರವಾಗಿ ನಿಂತು, ಈ ನನ್ನ ಪಟ್ಟಣವನ್ನೂ, ದೇಶವನ್ನೂ ನಿರಪಾಯವಾಗಿ ರಕ್ಷಿಸುತ್ತಿರು. ನನಗೆ ಯಾವ ವಿಧದಿಂದ ಯೋಚಿಸಿದರೂ ನಿನ್ನಲ್ಲಿ ನಪುಂಸಕತ್ವವೇ ಕಾಣುವುದಿಲ್ಲ. ನೀನು ಈ ನನ್ನ ಮತ್ಸ್ಯದೇಶವನ್ನು ಶೀಘ್ರದಲ್ಲಿಯೇ ಪುರೋವೃದ್ಧಿಗೆ ತಂದು ರಕ್ಷಿಸಬಲ್ಲವನೆಂದು ನನಗೆ ನಂಬಿಕೆಯುಂಟು. ನಾನು ನಿಜವನ್ನೇ ಹೇಳುವೆನೆಂದು ತಿಳಿ. ನಾನು ಈ ರಾಜ್ಯವನ್ನೇ ನಿನಗೆ ಒಪ್ಪಿಸಿಕೊಡುವೆನು'' ಎಂದನು. ಇದರಮೇಲೆ ಅರ್ಜುನನು ಏನು ಮಾಡುವನೋ ಎಂದು ತಿಳಿಯುವುದಕ್ಕಾಗಿ, ವಿರಾಟನು ತನ್ನ ಆಯುಧಶಾಲೆಯಿಂದ, ವಿವಿಧವರ್ಣವುಳ್ಳವುಗಳಾಗಿಯೂ, ಉದ್ದವಾಗಿಯೂ ದೃಢವಾಗಿಯೂ, ನಾಣೇರಿಸಿ ಸಿದ್ಧವಾಗಿಯೂ ಇದ್ದ ಅನೇಕ ಧನುಸ್ಸುಗಳನ್ನು ತರಿಸಿ, ಅವನ ಮುಂದೆ ಇರಿಸಿದನು. ಆಗ ಅರ್ಜುನನು ರಾಜನನ್ನು ನೋಡಿ "ಓ ಪ್ರಭೂ! ನಾನು ಇಂತಹ ಧನುಸ್ಸುಗಳನ್ನು ಯಾವಾಗಲೂ ಎತ್ತಿದವನಲ್ಲ. ಇಂತಹ ಬಿಲ್ಲುಗಳನ್ನು ನಾನು ಹಿಂದೆ ಯಾವಾಗಲೂ ನೋಡಿದವನೂ ಅಲ್ಲ. ನನ್ನಂತವರು ಇಂತಹ ಬಿಲ್ಲನ್ನು ಕೈಯಲ್ಲಿ ಹಿಡಿದುದನ್ನೂ ನಾನು ಕಂಡಿಲ್ಲ. ಈ ಬಿಲ್ಲುಬಾಣಗಳೆಲ್ಲವೂ ನನಗೇಕೆ? ನಾನು ಕುಣಿಯುವೆನು! ಹಾಡುವೆನು! ವಾದ್ಯಗಳನ್ನು ನುಡಿಸುವೆನು! ನಟುವತನದಲ್ಲಿ ನನಗೆ ವಿಶೇಷ ಪಾಂಡಿತ್ಯವುಂಟು. ಆದುದರಿಂದ ಆ ಕಾರ್ಯದಲ್ಲಿ ನನ್ನನ್ನು ನಿಯೋಗಿಸು. ನಿನ್ನ ಮಗಳಾದ ಉತ್ತರೆಗೆ ನರ್ತನವನ್ನು ಕಲಿಸುವ ಕಾರ್ಯಕ್ಕೆ ನನ್ನನ್ನು ನಿಯಮಿಸು. ಅದನ್ನು ನಾನು ಅವಳಿಗೆ ಚೆನ್ನಾಗಿ ಕಲಿಸಿಕೊಡುವೆನು" ಎಂದು ಬಹಳ ದೀನಭಾವವನ್ನು ತೋರಿಸುವ ಮಾತುಗಳನ್ನಾಡಿದನು. ಆಗ ವಿರಾಟರಾಜನು "ಓ ಬೃಹನ್ನಳೆ! ನೀನು ಕೇಳಿದಂತೆಯೇ ನಡೆಸಿಕೊಡುವೆನು. ನೀನು ನನ್ನ ರಾಣಿವಾಸದಲ್ಲಿದ್ದು, ನನ್ನ ಕುಮಾರಿಗೂ, ಅವಳಿಗೆ ಸಮಾನಸ್ಕಂಧರಾದ ಇತರ ಕನ್ಯೆಯರಿಗೂ ನರ್ತನವನ್ನು ಕಲಿಸುತ್ತಿರು'' ಎಂದು ಹೇಳಿ, ಆಗಲೇ ತನ್ನ ಮಗಳನ್ನು ಅಲ್ಲಿಗೆ ಕರೆತರಿಸಿ, ಸಂತೋಷಪೂರ್ವಕವಾಗಿ ಅವಳನ್ನು

## ನಕುಲನು ವಿರಾಟನಲ್ಲಿಗೆ ಬಂದು, ಅಶ್ವಪಾಲಕನಾಗಿ ಸೇರಿದುದು.

ಆಮೇಲೆ ವಿರಾಟನು ತನ್ನ ಕುದುರೆಗಳನ್ನು ನೋಡುತ್ತಿರುವ ಸಮಯಕ್ಕೆ ಸರಿಯಾಗಿ, ಪಾಂಡುಪುತ್ರರಲ್ಲಿ ಮತ್ತೊಬ್ಬನು ಅಲ್ಲಿಗೆ ಬಂದನು. ಅವನು ಬರುತ್ತಿರುವಾಗಲೇ ಜನರೆಲ್ಲರೂ ಅವನನ್ನು ಮೇಘದ ಮರೆಯಿಂದ ಹೊರಗೆ ಬಂದ ಚಂದ್ರನನ್ನು ಹೇಗೋ ಹಾಗೆ ಸಂತೋಷದಿಂದ ನೋಡುತಿದ್ದರು. ಆಗ ನಕುಲನು ಮುಂದೆ ಬಂದು, ಅಲ್ಲಲ್ಲಿದ್ದ ಕುದುರೆಗಳನ್ನೆಲ್ಲ ಗಮನಿಸಿ ನೋಡಲಾರಂಭಿಸಿದನು. ಆಮೇಲೆ ವಿರಾಟನು ಆತನನ್ನು ದೃಷ್ಟಿಸಿನೋಡಿ, ತನ್ನ ಸಮೀಪದಲ್ಲಿ ನೆರೆದಿದ್ದ ತನ್ನ ಕಡೆಯವರನ್ನು ಕುರಿತು "ನಮ್ಮ ಕಡೆಗೆ ಬರುತ್ತಿರುವ ಈತನಾರು? ಇವನನ್ನು ಇದಕ್ಕೆ ಮೊದಲು ನೀವು ಯಾರಾದರೂ ಬಲ್ಲಿರೇನು? ಇವನನ್ನು ನೋಡಿದರೆ ನನಗೆ ಇವನಲ್ಲಿ ಪ್ರೀತಿ ಹುಟ್ಟುವುದು. ಇವನ ದರ್ಶನವೇ ನನಗೊಂದು ಉಲ್ಲಾಸವನ್ನುಂಟುಮಾಡುತ್ತಿದೆ. ನಿಮ್ಮಲ್ಲಿ ಯಾರಾದರೂ ಇವನ ವಿಷಯವನ್ನು ತಿಳಿದವರಾಗಿದ್ದರೆ ಹೇಳಿರಿ. ಇವನಾದರೋ ಆಗಾಗ ನಮ್ಮ ಕುದುರೆಗಳನ್ನು ಬಹಳವಾಗಿ ಗಮನಿಸಿ ನೋಡುತ್ತಿರುವನು. ಇದರಿಂದ ಇವನಿಗೆ ಕುದುರೆಗಳ ಸ್ವಭಾವವನ್ನು ಪರೀಕ್ಷಿಸಿ ತಿಳಿಯುವುದರಲ್ಲಿ ನೈಪುಣ್ಯವುಂಟೆಂದು ತೋರುವುದು. ಈಗಲೇ ಅವನನ್ನು ನನ್ನ ಬಳಿಗೆ ಕರೆದುಕೊಂಡು ಬನ್ನಿರಿ. ಈ ವೀರನು, ಯಾವನೋ ದೇವಾಂಶಪುರುಷನಂತೆ ಕಾಣಿಸುತ್ತಿರುವನು" ಹೀಗೆಂದು ವಿರಾಟನು ಆಲೋಚನೆಮಾಡುತ್ತಿರುವಾಗಲೇ, ನಕುಲನು ಬೇಗನೆ ಅಲ್ಲಿ ನೆರೆದಿದ್ದ ಸಭೆಯುನಡುವೆ ಬಂದು ನಿಂತು, ರಾಜನಿಗೆ ನಮಸ್ಕರಿಸಿ "ರಾಜೇಂದ್ರಾ! ನಾನು ಜೀವನಾರ್ಥವಾಗಿ ನಿನ್ನಲ್ಲಿ ವೇತನವನ್ನೂ, ಭೋಜನವನ್ನೂ ಅಪೇಕ್ಷಿಸಿ, ಬಂದವನು. ನಿನ್ನ ಕುದುರೆಗಳನ್ನು ಕಟ್ಟುವ ಕೆಲಸವನ್ನು ನಾನು ನೋಡಿಕೊಳ್ಳುವೆನು. ನನ್ನನ್ನು ನೀನು ಪೋಷಿಸಬೇಕು. ನಿನಗೆ ಇಷ್ಟವಿದ್ದ ಪಕ್ಷದಲ್ಲಿ ನಿನ್ನ ಕುದುರೆಗಳಿಗೆಲ್ಲ ನನ್ನನ್ನು ಅಧಿಕಾರಿಯನ್ನಾಗಿಯೂ ಮಾಡಬಹುದು" ಎಂದನು. ಅದಕ್ಕಾ ವಿರಾಟನು "ಅಯ್ಯಾ! ನೀನು ಜೀವನಕ್ಕಾಗಿ ಚಿಂತಿಸಬೇಕಾದುದಿಲ್ಲ!

ನಿನಗೆ ಬೇಕಾದ ವಾಹನಗಳನ್ನೂ, ಧನವನ್ನೂ, ವೇತನವನ್ನೂ ನಾನು ಕೊಡುವೆನು. ಆದರೆ, ಕುದುರೆಯುವನಾಗಿರುವುದಕ್ಕೆ ನೀನು ಅರ್ಹನಲ್ಲವೆಂದು ನನಗೆ ತೋರುತ್ತಿದೆ. ನೀನು ಎಲ್ಲಿಂದ ಬಂದವನು? ಯಾರ ಕಡೆವನು? ನೀನು ಇಲ್ಲಿಗೆ ಹೇಗೆ ಬಂದು ಸೇರಿದೆ? ನಿನಗೆ ತಿಳಿದ ಶಿಲ್ಪವಿದ್ಯೆಯೆಂತದು? ಹೇಳು'' ಎಂದನು. ಅದಕ್ಕಾ ನಕುಲನು ''ರಾಜೇಂದ್ರಾ! ಐದು ಮಂದಿ ಪಾಂಡುಕುಮಾರರಲ್ಲಿ ರಾಜನಾದ ಯುಧಿಷ್ಠಿರನೆಂಬವನು ಹಿರಿಯನು. ಆತನು ನನಗೆ ಪೂರ್ವದಲ್ಲಿ ಕುದುರೆಗಳನ್ನು ನೋಡಿಕೊಳ್ಳುವ ಅಧಿಕಾರವನ್ನು ಕೊಟ್ಟಿದ್ದನು. ನಾನು ಕುದುರೆಗಳ ಸ್ವಭಾವವನ್ನು ತಿಳಿಯಬಲ್ಲವನು. ಕುದುರೆಗಳಿಗೆ ನಡೆಗಳನ್ನು ಕಲಿಸುವುದು, ದುಷ್ಟಾಶ್ವಗಳನ್ನು ಅಡಗಿಸಿ ಸ್ವಾಧೀನಕ್ಕೆ ತರುವುದು, ಕುದುರೆಗಳಿಗೆ ಬೇಕಾದ ಎಲ್ಲಾ ಬಗೆಯ ಚಿಕಿತ್ಸೆಗಳನ್ನು ಮಾಡುವುದು, ಈ ವಿದ್ಯೆಗಳೊಳಗೆಲ್ಲ ನನಗೆ ನೈಪುಣ್ಯವುಂಟು. ನನ್ನಲ್ಲಿಗೆ ಬಂದ ಕುದುರೆಗಳಾವುವೂ ಭಯಪಡವು. ಎಂತಹ ಹೆಣ್ಣು ಕುದುರೆಯಾದರೂ ನನ್ನಲ್ಲಿ ದೌಷ್ಟ್ಯವನ್ನು ತೋರಿಸಲಾರದು. ಇನ್ನು ಗಂಡು ಕುದುರೆಗಳು ನನಗೆ ವಶವಾಗುವುವೆಂಬುದನ್ನು ಹೇಳಬೇಕಾದುದೇನು? ನನ್ನ ಶಕ್ತಿಯನ್ನು ತಿಳಿದೇ ಯುಧಿಷ್ಠಿರನು ಗ್ರಂಥಿಕನೆಂದು ನನಗೆ ಹೆಸರಿಟ್ಟು ಕರೆಯುತಿದ್ದನು. ದೇವೇಂದ್ರನಿಗೆ ಮಾತಲಿಯೂ, ದಶರಥನಿಗೆ ಸುಮಂತ್ರನೂ, ಜಮದಗ್ನಿಪುತ್ರನಾದ ಪರಶುರಾಮನಿಗೆ ಸುಮಹನೂ ಹೇಗೋ ಹಾಗೆ, ನಾನು ನಿನಗೆ ಸಾರಥಿಯಾಗಿದ್ದು ನಿನ್ನ ಕುದುರೆಗಳನ್ನು ಶಿಕ್ಷಿಸುವೆನು. ಮಹಾರಾಜಾ! ಯುಧಿಷ್ಠಿರರಾಜನಲ್ಲಿ ನಾನು ನೂರು, ಸಾವಿರ, ಲಕ್ಷ ಮತ್ತು ಕೋಟಿ ಸಂಖ್ಯೆಯುಳ್ಳ ಕುದುರೆಗಳಿಗೆ ಪಾಲಕನಾಗಿದ್ದೆನು'' ಎಂದನು. ಅದನ್ನು ಕೇಳಿ ವಿರಾಟನು ನಕುಲನನ್ನು ಕುರಿತು ''ಹಾಗಿದ್ದರೆ, ನನ್ನಲ್ಲಿ ಅಲ್ಪಸ್ವಲ್ಪ ವಾಹನಗಳೂ, ಸೇನಾಶ್ವಗಳೂ ಯಾವುವುಂಟೋ ಅವೆಲ್ಲಕ್ಕೂ ನೀನು ಪಾಲಕನಾಗಿರು. ಮತ್ತು ನನ್ನಲ್ಲಿರುವ ಅಶ್ವಾರೋಹಿಗಳೂ, ಸಾರಥಿಗಳೂ ನಿನ್ನ ಅಧೀನದಲ್ಲಿರಲಿ! ನಿನ್ನನ್ನು ನೋಡಿದರೆ ದೇವತೆಯಂತೆ ಕಾಣುವೆ. ನಿನ್ನ ಇಷ್ಟದಂತೆಯೇ ನಡೆಸುವೆನು. ಇನ್ನೂ ನಿನಗೆ ಬೇಕಾದ ಕೋರಿಕೆಗಳನ್ನು ತಿಳಿಸು. ರಾಜಲಕ್ಷಣವುಳ್ಳ ನಿನಗೆ ಈ ಕುದುರೆಯ ಕೆಲಸವೇನೋ ನನಗೆ ಉಚಿತವಾಗಿ ತೋರು

ನನ್ನನ್ನು ನೀನು ನಿನ್ನ ಗೋವುಗಳಿಗೆ ಅಧಿಕಾರಿಯನ್ನಾಗಿ ಮಾಡು. ನಾನು ಅವುಗಳನ್ನು ಕಾಪಾಡುವೆನು. ನಾನು ಗೊಲ್ಲರ ಕೆಲಸದಲ್ಲಿ ನೈಪುಣ್ಯವುಳ್ಳವನು. ಅವು ನನ್ನಿಂದ ಚೆನ್ನಾಗಿ ಪೋಷಿಸಲ್ಪಟ್ಟು ಸುಖನಿದ್ರೆಯುಳ್ಳವುಗಳಾಗಿರಲಿ. ನಿನ್ನ ಪಶುಗಳು ನನ್ನ ಪೋಷಣೆಯಲ್ಲಿದ್ದರೆ, ಅವುಗಳಿಗೆ ಕಾಡುಮೃಗಗಳಿಂದಾಗಲಿ, ರೋಗದಿಂದಾಗಲಿ, ಕಾಡುಗಿಚ್ಚಿನಿಂದಾಗಲಿ, ಕಳ್ಳರಿಂದಾಗಲಿ ಸ್ವಲ್ಪಮಾತ್ರವೂ ಭೀತಿಯಿರದು. ಓ ನರೇಂದ್ರಾ! ನಿನ್ನ ಗೋವುಗಳು ನನ್ನ ವಶದಲ್ಲಿದ್ದರೆ, ಸಮೃದ್ಧವಾದ ಹಾಲನ್ನು ಕರೆಯತಕ್ಕವುಗಳಾಗಿ, ಯಾವ ರೋಗವೂ ಇಲ್ಲದಂತೆ ಸುಖದಿಂದಿರುವುವು. ನಿನ್ನ ಗೋಧನವು ಸಂಖ್ಯೆಯಲ್ಲಿ ಅಭಿವೃದ್ಧಿಹೊಂದಿ ಪುಷ್ಟಿಯುಳ್ಳವುಗಳಾಗುವುವು'' ಎಂದನು. ಆಗ ವಿರಾಟನು ಮಾದ್ರೀಪುತ್ರನಾದ ಸಹದೇವನ ಈ ಮಾತನ್ನು ಕೇಳಿ, ಅವನ ಆಕೃತಿಯನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಸಂತುಷ್ಟಹೃದಯನಾಗಿ ಅವನನ್ನು ಕುರಿತು ''ಓ ವೀರಾಗ್ರಣೀ! ನಿನ್ನಲ್ಲಿ ಗೊಲ್ಲತನವೇನೂ ನನಗೆ ತೋರುವುದಿಲ್ಲ. ದೃಢವಾದ ನಿನ್ನ ದೇಹವು ಕ್ಷತ್ರಿಯದೇಹದಂತೆಯೂ, ಉತ್ತಮವಂಶದಲ್ಲಿ ಜನಿಸಿದಂತೆಯೂ ತೋರುವುದು. ನಿನ್ನ ಆಕೃತಿಯನ್ನು ನೋಡಿದರೆ ನೀನು ಪಾಂಡಿತ್ಯವಿಲ್ಲದವನಂತೆ ತೋರುವುದಿಲ್ಲ. ನೀನು ಈ ರಾಜ್ಯದಲ್ಲಿ ಮಂತ್ರಿಸ್ಥಾನವನ್ನು ವಹಿಸಿ ನನಗೆ ಮಂತ್ರಾಲೋಚನೆಗಳನ್ನು ತಿಳಿಸುವ ಸಚಿವನಾಗಿರು. ಬೃಹಸ್ಪತಿಯು ಇಂದ್ರನನ್ನೂ, ಇತರ ದೇವತೆಗಳನ್ನೂ ಹೇಗೋ ಹಾಗೆ, ನನ್ನನ್ನೂ, ನನಗೆ ಒಳಪಟ್ಟ ಇತರ ರಾಜರನ್ನೂ ಪಾಲಿಸುತ್ತಿರು. ನೀನು ನನ್ನ ಸೈನ್ಯಗಳಿಗೆಲ್ಲ ಪಾಲಕನಾಗಿರು. ನಿನಗೆ ತಕ್ಕ ಖಡ್ಗವನ್ನು ಕೊಡುವೆನು. ನನ್ನ ಸೇನಾರಕ್ಷಣಭಾರವನ್ನು ವಹಿಸಿ, ಸೈನ್ಯಕ್ಕೆಲ್ಲ ನೀನೇ ಅಧಿಪತಿಯಾಗಿರು. ಇದೋ! ಈ ಬಿಲ್ಲನ್ನು ಗ್ರಹಿಸು'' ಎಂದು ಉತ್ಸಾಹಜನಕವಾದ ವಾಕ್ಯದಿಂದ ಸಮಾಧಾನಪಡಿಸಿದನು. ಇದನ್ನು ಕೇಳಿ ಮಹಾಬುದ್ಧಿಶಾಲಿಯಾದ ಆ ಸಹದೇವನು ರಾಜನನ್ನು ಹೊಗಳಿ, ಕೈಮುಗಿದು ''ಓ ರಾಜೇಂದ್ರಾ! ನಾನು ಹೇಳುವ ಸಾರವಾದ ವಾಕ್ಯವನ್ನು ಕೇಳು. ನಾನು ಕೆಲಸಗಾರನು. ಜಾತಿವಿಶೇಷದಿಂದ ನಾನು ದೋಷವುಳ್ಳವನು. ರಾಜನೀತಿಗಳಲ್ಲಿ ನಿನಗೆ ಆಲೋಚನೆಯನ್ನು ಹೇಳುವುದಕ್ಕೆ ಈಗ ನನಗೆ ಸಾಮರ್ಥ್ಯವೆಲ್ಲಿಯದು? ನಾನು ಇನ್ನೂ

ಯನ್ನುಟ್ಟು ಬರುತ್ತಿರುವ ಆ ಸ್ತ್ರೀವ್ಯಕ್ತಿಯನ್ನೂ, ಅನೇಕ ಸ್ತ್ರೀಪುರುಷರು ಅವಳನ್ನು ಸುತ್ತಿಮುತ್ತಿ ನೆರೆದು ನಿಂತು ನೋಡುತ್ತಿರುವುದನ್ನೂ ಕಂಡು, ಆ ರಾಜಪತ್ನಿಗೆ ಅವಳಲ್ಲಿ ಕನಿಕರವೂ, ಅವಳು ಯಾರೆಂದು ತಿಳಿಯಬೇಕೆಂಬ ಕುತೂಹಲವೂ ಉಂಟಾಯಿತು. ಆಗ ರಾಣಿಯು ತನ್ನ ಸಮೀಪದಲ್ಲಿದ್ದ ಸ್ತ್ರೀಯರನ್ನೂ, ತನ್ನಂತೆಯೇ ಆ ಹೊಸವ್ಯಕ್ತಿಯಾರೆಂದು ವಿಚಾರಿಸಬೇಕೆಂಬ ಆತುರದಿಂದಿದ್ದ ಕೆಲವು ವೃದ್ಧಸ್ತ್ರೀಯರನ್ನೂ ಕರೆದು, "ಈಗಲೇ ನೀವು ಅಲ್ಲಿಗೆ ಹೋಗಿ, ಆ ಹೆಂಗಸನ್ನು ಸುತ್ತಮುತ್ತಿ ನಿಂತಿರುವ ಜನರನ್ನು ತೊಲಗಿಸಿ, ಆಕೆಯನ್ನು ಇಲ್ಲಿಗೆ ಕರೆದುಕೊಂಡು ಬನ್ನಿರಿ. ಆ ಸಾಧ್ವಿಯನ್ನು ಕಂಡುದು ಮೊದಲು ನನ್ನ ಮನಸ್ಸು ಅವಳಲ್ಲಿ ಕನಿಕರದಿಂದ ಕಳವಳಿಸುತ್ತಿರುವುದು. ನಿಮಗೆ ಸಮ್ಮತವಾದರೆ, ನೀವು ಈಗಲೇ ಅವಳನ್ನು ಇಲ್ಲಿಗೆ ಕರೆತಂದು ನನಗೆ ತೋರಿಸಬೇಕು" ಎಂದಳು.

ಒಡನೆಯೇ ಆ ಸ್ತ್ರೀಯರು, ದ್ರೌಪದಿಯ ಬಳಿಗೆ ಬಂದು, ಅವಳನ್ನು ಆ ಜನರ ಗುಂಪಿನಿಂದ ಹೊರಕ್ಕೆ ಕರೆತಂದು, ಅವಳನ್ನು ಕುರಿತು ಮೃದುಮಧುರವಾದ ವಾಕ್ಯದಿಂದ "ಅಮ್ಮಾ! ನಮ್ಮ ಮಹಾರಾಣಿಯಾದ ಸುದೇಷ್ಣಾದೇವಿಯು ನಿನ್ನನ್ನು ನೋಡಬೇಕೆಂದು ಕೋರಿ, ನಿನ್ನನ್ನು ಕರೆತರುವುದಕ್ಕಾಗಿ ನಮ್ಮನ್ನು ಕಳುಹಿಸಿದಳು. ಅದೋ! ಅವಳು ಆ ಉಪ್ಪರಿಗೆಯ ಮೇಲೆ ನಿಂತು ನಿರೀಕ್ಷಿಸುತ್ತಿರುವಳು. ನಿನಗೆ ಇಷ್ಟವಿದ್ದರೆ ಈಗಲೇ ನಮ್ಮೊಡನೆ ಬರಬಹುದು. ನಿನ್ನನ್ನು ನಾವು ಆ ರಾಣಿಯ ಬಳಿಗೆ ಸುರಕ್ಷಿತವಾಗಿ ಕರೆದುಕೊಂಡು ಹೋಗುವೆವು" ಎಂದರು. ಈ ಮಾತನ್ನು ಕೇಳಿ ಚತುರೆಯಾದ ಆ ದ್ರೌಪದಿಯು, ತನ್ನ ಇಷ್ಟವು ಕೈಗೂಡಿತೆಂದು ತನ್ನೊಳಗೆ ತಾನು ಸಂತೋಷಪಡುತ್ತ, ಆಗಲೇ ಅರಮನೆಯಲ್ಲಿ ರಾಜಪತ್ನಿಯಾದ ಸುದೇಷ್ಣೆಯು ನಿಂತಿದ್ದ ಕಡೆಗೆ ಹೊರಟಳು. ಆಗ ದ್ರೌಪದಿಯು ಉದ್ದವಾಗಿಯೂ, ಮೃದುವಾಗಿಯೂ, ಅಂದವಾಗಿಯೂ, ತುದಿಯಲ್ಲಿ ಸೂಕ್ಷ್ಮವಾಗಿ ಬಾಗಿದಂತೆಯೂ, ಕಪ್ಪಾಗಿಯೂ ಇರುವ ತನ್ನ ತಲೆಕೂದಲುಗಳನ್ನು ಸೇರಿಸಿ, ಮುಡಿಸಿ, ತನ್ನ ಬಲಪಾರ್ಶ್ವಕ್ಕೆ ಬಿಟ್ಟುಕೊಂಡು, ನಡುಗುತ್ತಿರುವ ಕೋಮಲಲತೆಯಂತೆ ಲಜ್ಜಾನಮ್ರೆಯಾಗಿ, ವಿರಾಟನ ಅಂತಃ

ಪುರವನ್ನು ಪ್ರವೇಶಿಸಿದಳು. ಸರ್ವಲಕ್ಷಣ ಸಂಪನ್ನೆಯೂ, ಉಬ್ಬಿದ ನಿತಂಬವುಳ್ಳವಳೂ ಆದ ಆ ದ್ರೌಪದಿಯು ಮುಂದೆ ಹೋಗಿ, ಅಲ್ಲಿ ರತ್ನಾಸ್ತರಣದಿಂದ ಕೂಡಿದ ಚಿನ್ನದ ಪೀಠದಮೇಲೆ ಕುಳಿತಿದ್ದ ರಾಜಪತ್ನಿಯನ್ನು ಕಂಡಳು. ಆಗ ವಿರಾಟನ ರಾಣಿಯಾದ ಸುಧೇಷ್ಣೆಯಾದರೋ, ಕೆಂಪಾದ ನವಿರು ಸೀರೆಯನ್ನುಟ್ಟು, ಮೇಘದೊಳಗಿನ ಮಿಂಚಿನಂತೆ ಬೆಳಗುತ್ತಿರುವಳು. ನವರತ್ನಖಚಿತಗಳಾದ ಅನೇಕಾಭರಣಗಳಿಂದ ಅಲಂಕೃತೆಯಾಗಿ, ಅನೇಕ ವರ್ಣಶೋಭೆಗಳಿಂದ ವಿಚಿತ್ರವಾಗಿ ತೋರುವಳು. ಅಂದವಾದ ಹುಬ್ಬು! ನುಣುಪಾದ ತಲೆಕೂದಲು! ಉಬ್ಬಿದ ನಿತಂಬಗಳು! ಇವುಗಳಿಂದ ಸೊಗಸುಬೀರುತ್ತಿರುವಳು. ಹಲವು ಮಂದಿ ಕುಳ್ಳರೂ, ಗುಜ್ಜಾರಿಗಳೂ, ಅವಳ ಸುತ್ತಲೂ ಸೇವೆಗಾಗಿ ಸಿದ್ಧರಾಗಿ ನೆರೆದು ನಿಂತಿರುವರು. ಅನೇಕ ವಿಧ ಪುಷ್ಪೋಪಹಾರಗಳಿಂದ ಶೋಭಿತವಾದ ಯಜ್ಞವೇದಿಕೆಯಂತೆ, ಸರ್ವಾಲಂಕಾರಭೂಷಿತೆಯಾಗಿ, ಅನೇಕ ರಾಜಕುಮಾರಿಯರಿಂದ ಪರಿವೇಷ್ಟಿತೆಯಾಗಿರುವಳು. ದ್ರೌಪದಿಯು ಅಲ್ಲಿಗೆ ಬಂದೊಡನೆ, ಅಲ್ಲಿದ್ದ ಸ್ತ್ರೀಯರೆಲ್ಲರೂ ಅವಳ ಸ್ಥಿತಿಯನ್ನು ಕಂಡು ಕನಿಕರಗೊಂಡು, ತಟ್ಟನೆ ತಮ್ಮತಮ್ಮ ಆಸನಗಳಿಂದ ಮೇಲೆದ್ದುಬಂದು, ನಾಲ್ಕು ಕಡೆಗಳಲ್ಲಿಯೂ ಆಕೆಯನ್ನು ಸುತ್ತಿಮುತ್ತಿ ನಿಂತು, ದೇವಲೋಕದಿಂದಿಳಿದು ಬಂದ ದೇವೇಂದ್ರಪತ್ನಿಯಂತೆ ರೂಪಾತಿಶಯದಿಂದ ಬೆಳಗುತಿದ್ದ ಆಕೆಯನ್ನು ವಿಸ್ಮಯದಿಂದ ನೋಡುತಿದ್ದರು. ಆಗ ದ್ರೌಪದಿಯ ರೂಪಾತಿಶಯವನ್ನು ಕೇಳಬೇಕೆ? ಉಳ್ಳಡಗಿದಂತಿರುವ ಕಣಕಾಲುಗಳು! ಅಂದವಾಗಿ ಉಬ್ಬಿದ ತೊಡೆ! ಶ್ಯಾಮಲವರ್ಣದ ದೇಹಕಾಂತಿ! ಕೆಂಪಗೆ ವಿಶಾಲವಾದ ಕಣ್ಣು! ಅತ್ಯಂತ ನಿರ್ದುಷ್ಟವಾದ ಎಲ್ಲಾ ದೇಹಾವಯವಗಳು! ಸ್ವಲ್ಪ ಬಾಗಿದಂತಿರುವ ಮೈ! ಅಂದವಾದ ನಡು! ಬಹಳ ಕುಳ್ಳೂ ಅಲ್ಲದೆ, ಬಹಳ ಎತ್ತರವೂ ಅಲ್ಲದೆ, ನಡುತರವಾದ ಆಕೃತಿ, ದಟ್ಟವಾಗಿ ಬೆಳೆದ ಹಸುರುಹುಲ್ಲಿನ ಮೈದಾನದಲ್ಲಿರುವ ಹೆಣ್ಣುಜಿಂಕೆಯಂತೆ ಕಾಣುವಳು. ಅಂದವಾದ ಕುರುಳುಗಳಿಂದಲೂ, ಜಿಂಕೆಯ ಕಣ್ಣಿನಂತಿರುವ ಕಣ್ಣುಗಳಿಂದಲೂ ಕೂಡಿದ ಆ ಸುಂದರಿಯು, ಬೆದರಿದ ಹುಲ್ಲೆಯಂತೆಯೂ, ತನ್ನ ಗುಂಪಿನಿಂದ ತಪ್ಪಿಬಂದ ಹೆಣ್ಣಾನೆಯಂತೆಯೂ ಕಾಣಿಸುವಳು. ಸಾಕ್ಷಾಲ್ಲಕ್ಷ್ಮೀದೇವಿಯಂತೆಯೂ,

ಯಶಸ್ವಿನಿಯಾದ ವಿದ್ಯಾದೇವತೆಯಂತೆಯೂ, ನಕ್ಷತ್ರಗಳಲ್ಲಿ ರೋಹಿಣಿಯಂತೆಯೂ, ಜ್ವಲಿಸುವ ಅಗ್ನಿಶಿಖೆಯಂತೆಯೂ, ರುದ್ರಪತ್ನಿಯರಲ್ಲಿ ಪಾರ್ವತಿಯಂತೆಯೂ, ಸಮುದ್ರವೇಲೆಯಂತೆಯೂ, ನಾಗಕನ್ಯೆಯರಲ್ಲಿ ಸುಲಭೆಯಂತೆಯೂ, ಮೃಗಿಗಳಲ್ಲಿ ಕಿನ್ನರಿಯಂತೆಯೂ ಶೋಭಿಸುವಳು. ಗಂಗೆಯಂತೆ ಶುದ್ಧಾತ್ಮಳೂ, ಶರತ್ಕಾಲದ ರಾತ್ರಿಯಂತೆ ಪ್ರಸನ್ನಳೂ, ಅನಿರ್ವರ್ಣ್ಯವಾದ ಗುಣರೂಪವುಳ್ಳವಳೂ, ಇಲಾದೇವಿಯಂತೆ ಕೀರ್ತಿಮತಿಯೂ, ಸಾವಿತ್ರಿಯಂತೆ ಬೇರೊಬ್ಬರಿಗೆ ತಿರಸ್ಕರಿಸಲು ಸಾಧ್ಯವಿಲ್ಲದವಳೂ, ಮುಖದಲ್ಲಿ ಬ್ರಹ್ಮತೇಜಸ್ಸಿನಿಂದ ಬೆಳಗುವವಳೂ, ಸೀತೆಯಂತೆ ಸತೀಮಣಿಯೂ, ಅರುಂಧತಿಯಂತೆ ಶುದ್ಧೆಯೂ ಆದ ಆ ದ್ರೌಪದಿಯನ್ನು ಕಂಡು ಸುದೇಷ್ಣೆಯು ಆಶ್ಚರ್ಯದಿಂದ ಅರಳಿದ ಮುಖವುಳ್ಳವಳಾಗಿ ಹೀಗೆಂದು ಪ್ರಶ್ನೆಮಾಡುವಳು. "ನಿರ್ದುಷ್ಟವಾದ ಆಕಾರವುಳ್ಳ ಎಲೆ ಭದ್ರೆ! ನೀನು ಯಾರು? ಎಲ್ಲಿಂದ ಬಂದವಳು? ನೀನು ಯಾರಿಗೆ ಸಂಬಂಧಪಟ್ಟವಳು? ನಿನಗೆ ನನ್ನಿಂದ ಆಗಬೇಕಾದ ಕಾರ್ಯವೇನು? ಉಳ್ಳಡಗಿದಂತೆ ಗೂಢವಾದ ಕಣಕಾಲುಗಳೂ, ಒಂದಕ್ಕೊಂದು ಹೆಚ್ಚುಕಡಿಮೆಯಿಲ್ಲದೆ ಸಮವಾದ ತೊಡೆಗಳೂ, (ಹೊಕ್ಕಳು, ಕಂಠಧ್ವನಿ, ಬುದ್ಧಿಯೆಂಬೀ) ಮೂರರಲ್ಲಿ ಗಾಂಭೀರ್ಯವೂ, (ನಿತಂಬ, ಜಘನ, ಸ್ತನಗಳೆಂಬೀ) ಆರರಲ್ಲಿ ಔನ್ನತ್ಯವೂ, ಕೆಂಪಾದ ಅಂಗೈ, ಅಂಗಾಲು, ಕಡೆಗಣ್ಣು, ಉಗುರು, ಕಪೋಲಗಳೆಂಬೀ ಐದರಲ್ಲಿ ನುಣುಪೂ ಉಳ್ಳವಳಾಗಿ, ಹಂಸದಂತೆ ಗದ್ಗದಸ್ವರದಿಂದ ಮಾತಾಡುತ್ತಿರುವೆ. ಅಂದವಾದ ಮುಂಗುರುಳುಗಳು! ಇಂಪಾದ ಕಂಠಧ್ವನಿ! ಶ್ಯಾಮಲವಾದ ದೇಹಕಾಂತಿ, ಉಬ್ಬಿದ ಸ್ತನನಿತಂಬಗಳು, ತುಂಬಿದ ರೆಪ್ಪೆಗಳುಳ್ಳ ಕಣ್ಣುಗಳು! ತೊಂಡೆಯ ಹಣ್ಣಿನಂತಿರುವ ತುಟಿ! ಸಣ್ಣ ನಡು! ಶಂಖದಂತಿರುವ ಕೊರಲು! ಉಳ್ಳಡಗಿದ ನರಗಳು! ಪೂರ್ಣಚಂದ್ರನನ್ನು ಹೋಲುವ ಮುಖದ ಸೊಗಸು! ಇವುಗಳಿಂದ ಶೋಭಿಸುವ ನೀನು ದಾನವಸ್ತ್ರೀಯೆ? ಕಿನ್ನರಿಯೆ? ಗಂಧರ್ವಸ್ತ್ರೀಯೆ? ವನದೇವತೆಯೋ? ಅಪ್ಸರಸಿಯೋ? ನಾಗಕನ್ಯಕೆಯೋ? ಇಪ್ಪತ್ತೇಳು ತಾರೆಗಳಲ್ಲಿ ನೀನೊಬ್ಬಳೇ? ನೀನು ಯಾರೆಂಬುದನ್ನು ತಿಳಿಸು. ಅಥವಾ ನೀನು ಅಲಂಬುಸೆಯೋ? ಮಿಶ್ರಕೇಶಿಯೋ? ಪುಂಡರೀಕೆಯೋ? ಮಾಲಿನಿಯೋ? ಯಾರೆಂಬುದನ್ನು ಹೇಳು. ಶುಭಲಕ್ಷಣಗಳಿಂದ ಕೂಡಿದ

ಗೆ ಇಲ್ಲಿಗೆ ಬಂದೆನು. ನಿನ್ನ ಸೇವೆಯಲ್ಲಿರಬೇಕೆಂಬುದು ನನ್ನ ಕೋರಿಕೆ! ಯಮಧರ್ಮರಾಜನೂ, ವಾಯುವೂ, ಇಂದ್ರನೂ, ಇಬ್ಬರು ಅಶ್ವಿನೀದೇವತೆಗಳೂ ನನ್ನ ಗುರುಗಳು. ಅವರ ಅನುಗ್ರಹಬಲದಿಂದ ಲೋಕದಲ್ಲಿ ಬೇರೆ ಯಾವ ಪುರುಷನೂ ನನ್ನನ್ನು ಅವಮಾನಿಸಲು ಶಕ್ತನಾಗಲಾರನು'' ಎಂದು ಹೇಳಿ, ದ್ರೌಪದಿಯು ಸುದೇಷ್ಣೆಯ ಮುಂದೆ ಕೈ ಜೋಡಿಸಿ ನಿಂತಿದ್ದಳು. ಆಗ ಸುದೇಷ್ಣೆಯು ನಾರೀಶಿರೋಮಣಿಯಾದ ದ್ರೌಪದಿಯನ್ನು ನೋಡಿ ಆಶ್ಚರ್ಯಪರವಶಳಾಗಿ, ಆಕೆಯನ್ನು ಕುರಿತು "ಭದ್ರೆ! ನಾನು ನಿನ್ನನ್ನು ನನ್ನಲ್ಲಿಟ್ಟುಕೊಂಡು ಪೋಷಿಸಲಾರೆನು. ರಾಜನು ನಿನ್ನನ್ನು ನೋಡಿದಪಕ್ಷದಲ್ಲಿ, ಖಂಡಿತವಾಗಿಯೂ ನಿನ್ನ ರೂಪಕ್ಕೆ ಮರುಳಾಗಿ, ಪಾಪಬುದ್ಧಿಯನ್ನು ಮಾಡುವನೆಂದು ನನಗೆ ದೊಡ್ಡ ಸಂದೇಹವುಂಟಾಗಿದೆ. ಆದುದರಿಂದ, ನನ್ನ ಅಂತಃಪುರದಲ್ಲಿರುವುದಕ್ಕೆ ನೀನು ತಕ್ಕವಳಲ್ಲವೆಂದು ನನಗೆ ತೋರಿದೆ. ಎಲೆ ಸುಶ್ರೋಣಿ! ನಿನ್ನನ್ನು ಅಂಗೀಕರಿಸುವುದರಲ್ಲಿ ಇಂತಹ ದೋಷವಿದೆ. ಇದರಮೇಲೆ ನಿನ್ನ ಅಭಿಪ್ರಾಯವೇನು ಹೇಳು! ಅರಮನೆಯಲ್ಲಿ, ಮತ್ತು ನನ್ನ ರಾಣಿವಾಸದಲ್ಲಿರತಕ್ಕ ಎಲ್ಲಾ ಸ್ತ್ರೀಯರೂ ನಿನ್ನೊಬ್ಬಳನ್ನೇ ಅತ್ಯಾಶ್ಚರ್ಯದಿಂದ ನೋಡುತ್ತಿರುವರು. ಅಷ್ಟೇಕೆ? ಈ ನಮ್ಮ ಮನೆಯ ಸಮೀಪದಲ್ಲಿರುವ ವೃಕ್ಷಗಳೂ ಕೂಡ ನಿನ್ನನ್ನು ನೋಡಿ ಮರುಳಾದಂತೆ ತಲೆಬಗ್ಗಿಸುತ್ತಿರುವುವು. ಹೀಗಿರುವಾಗ ನಿನ್ನ ರೂಪವು ಯಾವ ಪುರುಷನನ್ನುತಾನೇ ಮೋಹಗೊಳಿಸದಿರುವುದು? ನಿನ್ನ ರೂಪವು ಅತಿಮಾನುಷವಾದುದು! ಆಶ್ಚರ್ಯಕರವಾದುದು! ತಿರ್ಯಗ್ಜಂತುಗಳು ಕೂಡ ಆಶ್ಚರ್ಯಪಡುವಂತಿರುವ ನಿನ್ನ ರೂಪಕ್ಕೆ ಲೋಕದ ಮನುಷ್ಯರು ಮರಳಾಗುವುದೇನಾಶ್ಚರ್ಯವು? ಎಲೆ ಸುಂದರಾಂಗಿ! ದಿವ್ಯವಾದ ಈ ನಿನ್ನ ದೇಹಸೌಂದರ್ಯವನ್ನು ನೋಡಿದೊಡನೆ ನನ್ನ ಪತಿಯು ನನ್ನನ್ನು ದ್ವೇಷಿಸಿ ಪೂರ್ಣಮನಸ್ಸಿನಿಂದ ನಿನ್ನನ್ನೇ ಬಯಸುವನು. ಓ ವಿಶಾಲಾಕ್ಷಿ! ಯಾವ ಮನುಷ್ಯನನ್ನು ನೀನು ಸ್ವಲ್ಪ ಪ್ರಸನ್ನದೃಷ್ಟಿಯಿಂದ ನೋಡುವೆಯೋ, ಅವನು ಕಾಮವಶನಾಗುವುದೇ ನಿಶ್ಚಯವು. ನೀನು ಮಂಗಳಸ್ನಾನವನ್ನು ಮಾಡಿ, ಅಲಂಕಾರಗಳನ್ನು ಧರಿಸಿ, ಯಾವನನ್ನು ನೋಡುವೆಯೋ, ಅವನಿಗೆ ಬೇಸರವಾಗಲಿ, ದುಃಖವಾಗಲಿ, ಆಲಸ್ಯವಾಗಲಿ, ಪರ್ಯಾ

ಕೂಡ, ಅವನಿಗೆ ನೂರಾರುಮಂದಿ ನಂಟರಿದ್ದರೂ, ಸಾವಿರಬಂಧುಗಳಿದ್ದರೂ ಸಾವಿರಾರು ಕೋಟಿ ಬಂಧುಮಿತ್ರಸಹಾಯಕರಿದ್ದರೂ, ಅವನು ನಿನ್ನ ಕಣ್ಣಿದಿರಾಗಿಯೇ ಸಾಯುವುದನ್ನು ನೀನು ನೋಡುವೆ. ಅಂತವನನ್ನು ದೇವ ದಾನವ ಪನ್ನಗರಲ್ಲಿ ಯಾರೇ ಆದರೂ ನನ್ನ ಪತಿಗಳಾದ ಗಂಧರ್ವರಾಜರಿಂದ ತಪ್ಪಿಸಿ ಕಾಪಾಡಲಾರರು. ಇದಕ್ಕೆ ಸಂದೇಹವಿಲ್ಲ. ಓ ಸುದೇಷ್ಣೆ! ನನ್ನ ಮಾತಿನಲ್ಲಿ ನಂಬಿಕೆಯನ್ನಿಡು. ನಿನ್ನ ಸ್ವಂತ ಜನದಲ್ಲಿಯಾಗಲಿ, ಬಂಧುಜನದಲ್ಲಿಯಾಗಲಿ ನನ್ನನ್ನು ಯಾರೂ ಕಣ್ಣೆತ್ತಿ ನೋಡುವುದಕ್ಕೆ ಶಕ್ತರಲ್ಲ. ನನ್ನ ನಡತೆಯೂ ಅಂತದಲ್ಲ. ಯಾವನು ನನಗೆ ತನ್ನ ಎಂಜಲನ್ನು ಕೊಡುವುದಕ್ಕಾಗಲಿ, ನನ್ನಿಂದ ತನ್ನ ಕಾಲುಗಳನ್ನು ತೊಳೆಸುವುದಕ್ಕಾಗಲಿ ಆಶೆಪಡುವುದಿಲ್ಲವೋ, ಅಂತವನ ಸಮೀಪದಲ್ಲಿ ನಾನಿದ್ದರೆಮಾತ್ರ ನನ್ನ ಪತಿಗಳಾದ ಗಂಧರ್ವರು ಅದನ್ನೊಪ್ಪುವರು. ಬೇರೆ ಸಾಮಾನ್ಯವಾದ ಪ್ರಾಕೃತಸ್ತ್ರೀಯರನ್ನು ಹೇಗೋ ಹಾಗೆ ನನ್ನನ್ನು ಯಾವ ಪುರುಷನು ಕೈಯಿಂದ ಮುಟ್ಟುವನೋ, ಅವನಿಗೆ ಆ ರಾತ್ರಿಯೇ ಈ ಶರೀರವು ಹೋಗಿ ಅವನು ಬೇರೆ ಶರೀರದಲ್ಲಿ ಪ್ರವೇಶಿಸಬೇಕಾಗುವುದೆಂದು ತಿಳಿ. ಅಂಗನಾಮಣಿ! ನನ್ನನ್ನು ನನ್ನ ಪಾತಿವ್ರತ್ಯದಿಂದ ತಪ್ಪಿಸುವುದಕ್ಕೆ ಯಾರಿಗೂ ಸಾಧ್ಯವಲ್ಲ. ದುಷ್ಟನಿಗ್ರಹಸಮರ್ಥರಾದ ಐದು ಮಂದಿ ಗಂಧರ್ವರು ನನಗೆ ಪತಿಗಳು. ಅವರಿಂದ ರಕ್ಷಿತಳಾದ ನಾನು ನಿನ್ನಲ್ಲಿದ್ದರೂ ನಿನಗೆ ಯಾವ ಭಯಕ್ಕೂ ಅವಕಾಶವಿಲ್ಲ'' ಎಂದಳು.

ಆಗ ಸುದೇಷ್ಣೆಯು ಸೈರಂಧ್ರಿಯನ್ನು ಕುರಿತು "ಎಲೆ ಭದ್ರೆ! ನಿನ್ನ ಶೀಲವು ಈ ವಿಧವಾಗಿದ್ದಪಕ್ಷದಲ್ಲಿ ನೀನು ನನ್ನಲ್ಲಿರಬಹುದು. ಇಂತಹ ಶೀಲವತಿಯಾದ ನಿನಗೆ ಯಾವನುತಾನೇ ತನ್ನ ಎಂಜಲನ್ನು ಕೊಡುವನು! ವಿವೇಕಿಯಾದ ಯಾವನುತಾನೇ ಲಕ್ಷ್ಮೀದೇವಿಯಂತಿರುವ ನಿನ್ನ ಕಡೆಗೆ ಕಾಲನ್ನು ನೀಡಬಲ್ಲನು! ಇಂತಹ ಸದಾಚಾರಸಂಪನ್ನೆಯಾಗಿ, ದೇವತೆಗಳ ರಕ್ಷಣೆಯಲ್ಲಿರುವ ನಿನ್ನನ್ನು ಸಮಸ್ತ ಪ್ರಾಣಿಗಳೂ ಕೂಡ, ಬ್ರಾಹ್ಮಣರು ಸಾವಿತ್ರಿಯನ್ನು ಹೇಗೋ ಹಾಗೆ ಗೌರವದಿಂದ ರಕ್ಷಿಸಬೇಕಾಗಿದೆ. ದೇವತೆಯಂತೆ ಪೂಜ್ಯಳಾಗಿ, ಉತ್ತಮ ತೇಜಸ್ಸಿನಿಂದ ಕೂಡಿದ ನೀನು ನನ್ನಲ್ಲಿ

ಸಂತೋಷದಿಂದಿರಬಹುದು. ನನಗೆ ನಿನ್ನಲ್ಲಿ ಅಸಾಧಾರಣಪ್ರೀತಿಯುಂಟಾಗಿದೆ. ಇಲ್ಲಿ ನಿನಗೆ ಬೇಕಾದ ಅಭೀಷ್ಟಗಳನ್ನು ಪಡೆಯುತ್ತ, ನಿಶ್ಚಿಂತೆಯಾಗಿ ವಾಸಮಾಡುತ್ತಿರು" ಎಂದಳು. ಸುದೇಷ್ಣೆಯ ಈ ಮಾತನ್ನು ಕೇಳಿದಮೇಲೆ ದ್ರೌಪದಿಯು ಸಂತೋಷದಿಂದ ನಗುಮುಖವುಳ್ಳವಳಾಗಿ, ಮನಸ್ಸಿನಲ್ಲಿ ಶಂಕೆಯನ್ನು ಬಿಟ್ಟು ಅಂತಃಪುರವನ್ನು ಪ್ರವೇಶಿಸಿ ಸುಖದಿಂದಿದ್ದಳು.

ಓ ಜನಮೇಜಯರಾಜನೆ! ಅನೇಕ ಪರಿಚಾರಕಿಯರಿಂದ ಸೇವೆಮಾಡಿಸಿಕೊಳ್ಳತಕ್ಕ ದ್ರೌಪದಿಯು, ಸುದೇಷ್ಣೆಗೆ ಸೇವೆಮಾಡುತ್ತ ಕಷ್ಟದಿಂದ ಕಾಲವನ್ನು ಕಳೆಯುತ್ತಿದ್ದಳು. ಹೀಗೆ ಪಂಚಪಾಂಡವರೂ, ದ್ರೌಪದಿಯೂ ಬೂದಿಮುಚ್ಚಿದ ಕೆಂಡದಂತೆ ತಮ್ಮ ತೇಜಸ್ಸನ್ನು ಮರೆಸಿಕೊಂಡು, ವಿರಾಟನಗರದಲ್ಲಿ ಸೇರಿ ತಾಳ್ಮೆಯಿಂದ ತಮ್ಮ ಅಜ್ಞಾತವಾಸವನ್ನು ಕಳೆಯತೊಡಗಿದರು.

ಇದು ಹದಿನಾಲ್ಕನೆಯ ಅಧ್ಯಾಯವು.

**ಇಲ್ಲಿಗೆ ಪಾಂಡವಪ್ರವೇಶಪರ್ವವು ಸಮಾಪ್ತವು.**

# ಸಮಯಪಾಲನಪರ್ವವು.

ಪಾಂಡವರು ತಮ್ಮ ತಮ್ಮ ಕಾರ್ಯಗಳಿಂದ ವಿರಾಟನನ್ನು ಸಂತೋಷಗೊಳಿಸಿದುದು. ಭೀಮನು ಮಹಾಮಲ್ಲನೆಂಬ ಜಟ್ಟಿಯನ್ನು ಕೊಂದುದು.

ಜನಮೇಜಯನು ವೈಶಂಪಾಯನನ್ನು ಕುರಿತು "ಓ ಮಹರ್ಷೀ! ಸತ್ಯಪರಾಕ್ರಮಿಗಳೂ, ಪುರುಷಶ್ರೇಷ್ಠರೂ ಆದ ಪಾಂಡವರು ವಿರಾಟನಗರದಲ್ಲಿದ್ದಾಗ ನಡೆಸುತ್ತಿದ್ದ ಕಾರ್ಯಕ್ರಮವೇನು?" ಎಂದು ಕೇಳಲು, ವೈಶಂಪಾಯನನು ಆ ರಾಜನನ್ನು ಕುರಿತು "ರಾಜೇಂದ್ರಾ! ಕುರುವಂಶಜರಾದ ಪಾಂಡವರು, ತಮ್ಮ ರೂಪವನ್ನು ಮರೆಸಿಕೊಂಡು, ವಿರಾಟರಾಜನಲ್ಲಿ ಸೇವೆಮಾಡುತ್ತಿದ್ದಾಗ ನಡೆಸಿದ ಕಾರ್ಯಗಳಾವುವೆಂಬುದನ್ನು ತಿಳಿಸುವೆನು

ರ್ಯವನ್ನು ತೋರಿಸುವುದು, ಈ ಮುಂತಾದ ವಿದ್ಯೆಗಳಿಂದ ನಕುಲನು ವಿರಾಟನನ್ನು ಸಂತೋಷಗೊಳಿಸುತಿದ್ದನು. ಇದನ್ನು ನೋಡಿ ಪ್ರೀತನಾದ ರಾಜನು ಆಗಾಗ ನಕುಲನಿಗೆ ಬೇಕಾದ ವಸ್ತುಗಳನ್ನು ಸಮೃದ್ಧಿಯಾಗಿ ಕೊಡುತ್ತಿದ್ದನು. ಹಾಗೆಯೇ ಸಹದೇವನೂಕೂಡ ತನ್ನಿಂದ ಶಿಕ್ಷಿತಗಳಾದ ಎತ್ತುಗಳನ್ನು ತಂದು ವಿರಾಟನಿಗೆ ತೋರಿಸಿ, ಅವನಿಂದ ಹೆಚ್ಚು ಧನವನ್ನು ಪಡೆಯುತ್ತಿದ್ದನು. ಮಹಾರಥರಾದ ಆ ಐದುಮಂದಿ ವೀರರೂ ಹೀಗೆ ಕಷ್ಟದಿಂದ ಪರಸೇವೆಯಲ್ಲಿದ್ದುದನ್ನು ನೋಡಿ, ದ್ರೌಪದಿಯು ಸಂಕಟದಿಂದ ಆಗಾಗ ನಿಟ್ಟುಸಿರನ್ನು ಬಿಡುವಳು. ಪುರುಷಶ್ರೇಷ್ಠರಾದ ಆ ಐದುಮಂದಿ ಪಾಂಡವರೂ ಹೀಗೆ ತಮ್ಮ ಸ್ವರೂಪವನ್ನು ಮರೆಸಿಟ್ಟುಕೊಂಡು, ವಿರಾಟರಾಜನ ಸೇವೆಯಲ್ಲಿರುತ್ತಿದ್ದರು.

ಇದು ಹದಿನೈದನೆಯ ಅಧ್ಯಾಯವು.

**ಇಲ್ಲಿಗೆ ಸಮಯಪಾಲನ ಪರ್ವವು ಸಮಾಪ್ತವು.**



## ಕೀಚಕವಧ ಪರ್ವವು.

ದ್ರೌಪದಿಯು ತನ್ನನ್ನು ಕಾಮಿಸಿದ ಕೀಚಕನನ್ನು ಕ್ರೂರವಾಕ್ಯಗಳಿಂದ ಧಿಕ್ಕರಿಸಿದುದು.

ಜನಮೇಜಯರಾಜೇಂದ್ರನೇ ಕೇಳು! ಮಹಾರಥರಾದ ಪಾಂಡವರು ಹೀಗೆ ವಿರಾಟನಗರನಲ್ಲಿ ಅಜ್ಞಾತವಾಸವನ್ನಾರಂಭಿಸಿ ಹತ್ತು ತಿಂಗಳು ಕಳೆದುಹೋದುವು. ಅನೇಕಪರಿಚಾರಕರಿಂದ ಉಪಚಾರಮಾಡಿಸಿಕೊಳ್ಳುವುದಕ್ಕೆ ಅರ್ಹಳಾದ ದ್ರೌಪದಿಯು, ಸುದೇಷ್ಣೆಯ ಸೇವೆಮಾಡುತ್ತ ಬಹಳ ಕಷ್ಟದಿಂದ ಕಾಲವನ್ನು ಕಳೆಯುತ್ತಿದ್ದಳು. ಅಲ್ಲಿ ಪಾಂಚಾಲಿಯು ಸುದೇಷ್ಣೆಯನ್ನೂ, ಇತರ ರಾಜಸ್ತ್ರೀಯರನ್ನೂ ತನ್ನ ಪರಿಚರ್ಯೆಯಿಂದ ಸಂತೋಷಗೊಳಿಸುತ್ತ, ಆ ರಾಣಿವಾಸದಲ್ಲಿಯೇ ವಾಸಿಸುತ್ತಿದ್ದಳು. ಅವಳು ಅಜ್ಞಾತವಾಸದಲ್ಲಿರಬೇಕಾದ ಒಂದು ವರ್ಷದ ಕಾಲವು ಬಹಳ ಮಟ್ಟಿಗೆ

ಕಳೆಯುತ್ತ ಬಂದಿತು. ಇಷ್ಟರಲ್ಲಿಯೇ ಅಲ್ಲಿ ಒಂದು ವಿಶೇಷವು ನಡೆಯಿತು. ವಿರಾಟನಿಗೆ ಕೀಚಕನೆಂಬೊಬ್ಬ ಸೇನಾಪತಿಯಿದ್ದನು. (ಇವನು ಸುದೇಷ್ಣೆಯ ತಮ್ಮನು.) ಮಹಾಬಲಾಢ್ಯನು. ಈ ಕೀಚಕನು ಒಮ್ಮೆ ಅಕಸ್ಮಾತ್ತಾಗಿ ದ್ರೌಪದಿಯನ್ನು ನೋಡಿಬಿಟ್ಟನು. ದೇವಕನ್ಯೆಯಂತೆಯೂ, ಭೂಮಿಯಲ್ಲಿ ಸಂಚರಿಸುವ ಅಪ್ಸರಸಿಯಂತೆಯೂ ಪರಮ ಸುಂದರಿಯಾದ ಆ ದ್ರೌಪದಿಯನ್ನು ನೋಡಿದೊಡನೆ ಆ ಕೀಚಕನು ಕಾಮಬಾಣಪೀಡಿತನಾಗಿ ಅವಳಮೇಲೆ ಕಣ್ಣಿಟ್ಟನು. ದುರಾತ್ಮನಾದ ಆ ಕೀಚಕನು ದ್ರೌಪದಿಯನ್ನು ಕಂಡುದುಮೊದಲು ಕಾಮತಾಪದಿಂದ ಬೆಂದು ಕೃಶನಾಗಿ, ಸುದೇಷ್ಣೆಯಬಳಿಗೆ ಬಂದು ಹೆಮ್ಮೆಯಿಂದ ನಗುತ್ತ ಹೀಗೆಂದು ಹೇಳುವನು :—“ಈ ಅಂತಃಪುರದಲ್ಲಿ ಇದಕ್ಕೆ ಮೊದಲು ಈ ಸ್ತ್ರೀವ್ಯಕ್ತಿಯನ್ನು ನಾನು ನೋಡಿದುದಿಲ್ಲ. ಈ ಶುಭಾಂಗಿಯಾವಳೋ ತಿಳಿಯದು! ಒಳ್ಳೇ ಸುಗಂಧವುಳ್ಳ ಮದ್ಯವು ತನ್ನ ವಾಸನೆಯಿಂದ ಮನುಷ್ಯನ ಬುದ್ಧಿಗೆ ಮತ್ತುಹಿಡಿಸುವಂತೆ, ಇವಳು ತನ್ನ ರೂಪದಿಂದ ನನ್ನ ಮನಸ್ಸನ್ನು ಬಹಳವಾಗಿ ಮರುಳುಗೊಳಿಸುತ್ತಿರುವಳು. ದೇವಸ್ವರೂಪಿಣಿಯಾಗಿದ್ದು, ನನ್ನ ಮನಸ್ಸನ್ನು ಹೀಗೆ ಆಕರ್ಷಿಸುತ್ತಿರುವ ಈಕೆ ಯಾವಳು? ಯಾರ ಹೆಂಡತಿ? ಎಲ್ಲಿಂದ ಬಂದಿರುವಳು? ಈ ಸಂಗತಿಯನ್ನು ನನಗೆ ತಿಳಿಸಬೇಕು. ಇವಳು ನನ್ನ ಮನಸ್ಸನ್ನು ಕಲಗಿಸಿ, ನನ್ನನ್ನು ತನ್ನ ವಶಮಾಡಿಕೊಂಡಿರುವಳು. ಈ ಮೋಹವನ್ನು ತಪ್ಪಿಸುವುದಕ್ಕೆ ನನಗೆ ಬೇಕಾದ ಔಷಧವೇನೂ ಇಲ್ಲ. ಅಕ್ಕಾ! ಈ ನಿನ್ನ ಪರಿಚಾರಿಕೆಯು ಅಪೂರ್ವ ಸೌಂದರ್ಯವುಳ್ಳವಳು. ಇವಳು ತನ್ನ ಸ್ಥಿತಿಗೆ ಯೋಗ್ಯವಲ್ಲದ ವೃತ್ತಿಯಿಂದ ನಿನ್ನಲ್ಲಿ ಸೇರಿರುವಳು. ಇವಳು ಈ ವೃತ್ತಿಯನ್ನು ಬಿಟ್ಟು ನನ್ನನ್ನೂ, ನನ್ನ ಕಡೆಯ ಸಮಸ್ತಜನರನ್ನೂ ಆಳುತ್ತಿರಲಿ! ಮತ್ತು ಇವಳು, ಅನೇಕ ಗಜಾಶ್ವರಥಗಳಿಂದಲೂ, ಜನಸಮೂಹಗಳಿಂದಲೂ ಸಕಲೈಶ್ವರ್ಯದಿಂದಲೂ, ಪಾನ ಭೋಜನಾದಿ ಸಕಲಸೌಕರ್ಯಗಳಿಂದಲೂ, ತುಂಬಿ ಸುವರ್ಣಮಯವಾದ ಬಹುವಿಧ ಭೂಷಣಗಳಿಂದ ಅಲಂಕೃತವಾದ ನನ್ನ ಗೃಹವನ್ನು ಅಲಂಕರಿಸಲಿ” ಎಂದನು. ಆಮೇಲೆ ಕೀಚಕನು ತನ್ನ ದುರಭಿಪ್ರಾಯಕ್ಕೆ ಸುದೇಷ್ಣೆಯನ್ನು ಹೇಗೋ ಒಪ್ಪಿಸಿ, ಅವಳ

ರುವ ಈ ನಿನ್ನ ಸುಂದರಜಘನವನ್ನು ನೋಡಿ, ಅಸಾಧ್ಯವಾದ ಕಾಮ ಜ್ವರವು ನನ್ನನ್ನು ಬಾಧಿಸುತ್ತಿರುವುದು. ಎಲೆ ಭಾಮಿನಿ! ನಿನ್ನನ್ನು ಸೇರ ಬೇಕೆಂಬ ಮನಸ್ಸಂಕಲ್ಪದಿಂದ ನನ್ನ ದೇಹದಲ್ಲಿ ಹೆಚ್ಚಿದ ಕಾಮಾಗ್ನಿಯು ಕಾಡುಗಿಚ್ಚಿನಂತೆ ನಿರ್ದಯವಾಗಿ ನನ್ನನ್ನು ಸುಡುತ್ತಿರುವುದು. ನಿನ್ನ ಸಮಾಗಮವೆಂಬ ಮೇಘದಿಂದ, ನಿನ್ನ ಶರೀರಪ್ರದಾನವೆಂಬ ಮಳೆಯನ್ನು ಸುರಿಸಿ, ಉರಿಯುತ್ತಿರುವ ಈ ಅಗ್ನಿಯನ್ನು ನಂದಿಸು. ಎಲೆ ಚಂದ್ರ ಮುಖಿ! ನಿನ್ನ ಸಂಗಮಾಭಿಲಾಷೆಯೆಂಬ ತೀಕ್ಷ್ಣಧಾರೆಗಳಿಂದ ತೀವ್ರವಾದ ಮನ್ಮಥಬಾಣಗಳು ನನ್ನ ಮನಸ್ಸಿಗೆ ಉನ್ಮಾದವನ್ನು ಹುಟ್ಟಿಸಿ, ನಿರ್ದ ಯವಾಗಿ ನನ್ನ ಹೃದಯವನ್ನು ಭೇದಿಸಿಕೊಂಡು ಒಳಹುಗುತ್ತಿರುವುವು. ಅತಿ ಪ್ರಚಂಡಗಳಾದ ಆ ಉಗ್ರಬಾಣಗಳು ನನಗೆ ಮಿತಿಯಿಲ್ಲದ ಚಿತ್ತ ಭ್ರಮವನ್ನೂ, ಮೋಹವನ್ನೂ ಹೆಚ್ಚಿಸುತ್ತಿರುವುವು. ಆದುದರಿಂದ, ನೀನು ಈಗಲೇ ನಿನ್ನ ದೇಹವನ್ನು ನನಗೊಪ್ಪಿಸಿ, ನಿನ್ನ ಸಮಾಗಮ ಸೌಖ್ಯವನ್ನು ಕೊಟ್ಟು, ನನ್ನನ್ನು ಉದ್ಧರಿಸಬೇಕು. ನೀನು ವಿಚಿತ್ರಪುಷ್ಪ ಮಾಲಿಕೆಗಳಿಂದಲೂ, ವಸ್ತ್ರಗಳಿಂದಲೂ, ಆಭರಣಗಳಿಂದಲೂ ಅಲಂಕೃತೆ ಯಾಗಿ, ನನ್ನನ್ನು ಸೇರಿ ನಿನಗೆ ಬೇಕಾದ ಸುಖಗಳನ್ನನುಭವಿಸು. ಯಾ ವಾಗಲೂ ಸುಖಾರ್ಹಳಾದ ನೀನು, ಆ ಸುಖೋಪಭೋಗಗಳನ್ನೆಲ್ಲ ಬಿಟ್ಟು, ಇಲ್ಲಿ ಕಷ್ಟದಿಂದ ವಾಸಮಾಡುವುದು ಸರಿಯಲ್ಲ. ಅಮೃತಕ್ಕೆ ಸಮಾನ ವಾದ ಹಲವು ಬಗೆಯ ಪಾನೀಯವಸ್ತುಗಳನ್ನು ಸೇವಿಸುತ್ತ, ನನ್ನೊಡನೆ ರಮಿಸು; ಎಲೆ ಭಾಮಿನಿ! ಲೋಕಾತಿಶಯವಾದ ಈ ನಿನ್ನ ರೂಪವು ಅದನ್ನು ಅನುಭವಿಸತಕ್ಕ ನಾಯಕನಿಲ್ಲದುದರಿಂದ ಕಳೆಗೆಟ್ಟು, ಉತ್ತಮ ಪುಷ್ಪಮಾಲಿಕೆಯು ಆಶೆಯಿಂದ ಮುಡಿಯತಕ್ಕವರಿಲ್ಲದಿದ್ದಾಗ, ವ್ಯರ್ಥವಾಗಿ ಬಾಡಿಹೋಗುವಂತೆ ನಿರರ್ಥಕವಾಗಿರುವುದು. ಎಲೆ ಶೋಭನೆ! ಇದು ವರೆಗೆ ನಾನು ವರಿಸಿದ ಪತ್ನಿಯರೆಲ್ಲರನ್ನೂ ತೊರೆದುಬಿಡುವೆನು. ಅವ ರೆಲ್ಲರನ್ನೂ ನಿನಗೆ ದಾಸಿಯರನ್ನಾಗಿ ಮಾಡುವೆನು. ಹೆಚ್ಚೇಕೆ? ನಾನೂ ನಿನಗೆ ದಾಸನಾಗಿ, ನಿನ್ನ ಆಜ್ಞೆಗೆ ಆಧೀನನಾಗಿರುವೆನು,'' ಎಂದನು.

ಇದು ಹದಿನಾರನೆಯ ಅಧ್ಯಾಯವು.



ದ್ರೌಪದಿಯು ಕೀಚಕನನ್ನು ಕಠಿನವಾಕ್ಯಗಳಿಂದ ನಿಂದಿಸಿ ನಿರಾಕರಿಸಿದುದು.

ದುರಾತ್ಮನಾದ ಕೀಚಕನು ಹೇಳಿದ ವಾಕ್ಯಗಳನ್ನು ಕೇಳಿ ನಿರ್ದುಷ್ಟೆಯಾದ ದ್ರೌಪದಿಯು, ಆ ಕೀಚಕನನ್ನು ನೋಡಿ, ಮೊದಮೊದಲು ಮೃದುವಾಕ್ಯದಿಂದ "ಎಲೈ ಸೂತಪುತ್ರನೆ! ನಾನು ಹೀನಜಾತಿಯಲ್ಲಿ ಹುಟ್ಟಿದ ಊಳಿಗದವಳು. ಉತ್ತಮಕುಲದಲ್ಲಿ ಹುಟ್ಟಿದ ನೀನು ನನ್ನಲ್ಲಿ ಆಶೆಪಡಬಹುದೆ? ನನ್ನ ಸ್ಥಿತಿಯನ್ನು ನೋಡಿ ನಿನ್ನಂಥವರು ಕನಿಕರಪಡಬೇಕು. ನೋಡುವುದಕ್ಕೆ ಅಸಹ್ಯವಾದ ಗೌಡಿಯ ವೇಷದಲ್ಲಿದ್ದುಕೊಂಡು, ಇತರ ಸ್ತ್ರೀಯರಿಗೆ ಜಡೆಹಾಕಿ ಅದರಿಂದ ಬದುಕುತ್ತಿರುವ ನನ್ನಂತವಳನ್ನು ನೀನು ಕಾಮಿಸಬಹುದೆ? ಅಲ್ಲದೆ ನಾನು ವಿವಾಹಿತಳಾಗಿ ಇನ್ನೊಬ್ಬ ಪುರುಷನ ಪತ್ನಿಯಾಗಿರುವೆನು. ನಿನಗೆ ಈ ದುರುದ್ದೇಶವು ತಕ್ಕುದಲ್ಲ. ನಿನಗೆ ಶುಭವಾಗಲಿ. ಮನುಷ್ಯರಿಗೆ ಅವರವರ ಸ್ವಪತ್ನಿಯರಲ್ಲಿ ಪ್ರೀತಿಯಿರಬೇಕಾದುದು ಸಹಜವು. ಧರ್ಮವನ್ನಾಲೋಚಿಸು. ಪರಸ್ತ್ರೀಯರಲ್ಲಿ ನಿನಗೆ ಯಾವಾಗಲೂ, ಯಾವ ಕಾರಣದಿಂದಲೂ, ಇಂತಹ ದುರಭಿಲಾಷೆಯು ಹುಟ್ಟಬಾರದು. ಅಕಾರ್ಯಗಳಿಗೆ ಹೆದರುವುದೇ ಸತ್ಪುರುಷರ ಧರ್ಮವು. ಇಲ್ಲದ ದುರಾಶೆಗೆ ಒಳಗಾಗಿ, ಪಾಪಕಾರ್ಯದಲ್ಲಿ ಮನಸ್ಸಿಟ್ಟು, ಬುದ್ಧಿಮೋಹದಿಂದ ಪ್ರವರ್ತಿಸುವವನು ಘೋರವಾದ ಭೀತಿಗೂ, ಅಪಕೀರ್ತಿಗೂ ಗುರಿಯಾಗುವನು," ಎಂದಳು. ಇಷ್ಟು ಬುದ್ಧಿವಾದಗಳನ್ನು ಹೇಳಿದರೂ ಕಾಮಮೋಹಿತನಾದ ಆ ಕೀಚಕನು, ಸೈರಂಧ್ರಿಯ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಆ ಕೀಚಕನಾದರೋ ಇಂದ್ರಿಯಗಳನ್ನು ಜಯಿಸಲಾರದವನು. ಪರಸ್ತ್ರೀಯರ ಸಂಸರ್ಗವು ಕೇವಲ ನಿಂದ್ಯವೆಂದೂ, ಅದರಿಂದ ಪ್ರಾಣಾಂತಕರಗಳಾದ ಮಹಾವಿಪತ್ತುಗಳು ಸಂಭವಿಸದೆ ಬಿಡವೆಂದೂ, ಅವನ ಮನಸ್ಸಿಗೆ ತಿಳಿದಿದ್ದರೂ, ದುರ್ಬುದ್ಧಿಯಿಂದ ಆ ಸೈರಂಧ್ರಿಯನ್ನು ನೋಡಿ, "ಎಲೆ ಸುಮುಖೀ! ಎಲೆ ಸುಮಧ್ಯಮೆ! ಎಲೆ ಸುಸ್ಮಿತೇ! ನಿನಗಾಗಿ ಮನ್ಮಥಾವೇಶದಿಂದ ಪೀಡಿತನಾದ ನನ್ನನ್ನು ನಿರಾಕರಿಸುವುದು ಎಷ್ಟುಮಾತ್ರವೂ ನಿನಗೆ ನ್ಯಾಯವಲ್ಲ. ಸರ್ವವಿಧದಲ್ಲಿಯೂ ನಿನಗೆ ವಶ

ಹೇಳುವನು. "ಸುದೇಷ್ಣೇ! ಆ ಸೈರಂಧ್ರಿಯು ನನ್ನಲ್ಲಿ ಅನುರಾಗ ವಿಟ್ಟು ನನ್ನನ್ನು ಸೇರುವಂತೆ ಮಾಡಬೇಕಾದ ಭಾರವು ನಿನ್ನದು. ಆ ಕೆಲಸವನ್ನು ಶೀಘ್ರದಲ್ಲಿ ಮಾಡಿದರೆಮಾತ್ರ ನನ್ನ ಪ್ರಾಣವು ಉಳಿಯು ವುದು. ಆ ಸುಂದರಿಯು ನನ್ನಲ್ಲಿ ಪ್ರಸನ್ನಚಿತ್ತಳಾಗಿ, ನನ್ನನ್ನು ಸೇರ ದಿದ್ದರೆ ನಾನು ಯಮಪುರಿಗೆ ಹೋಗುವುದೇ ನಿಶ್ಚಯವು" ಎಂದನು. ಇದನ್ನು ಕೇಳಿ ಸುದೇಷ್ಣೆಯು, ತನ್ನ ಪ್ರಿಯ ಸಹೋದರನಾದ ಕೀಚಕ ನನ್ನು ಕೈನೀಡಿ ಸಮೀಪಕ್ಕೆ ಕರೆದು, ಅವನ ಪ್ರಾಣರಕ್ಷಣೆಗಾಗಿ ತಕ್ಕ ಸಮಾಧಾನವಾಕ್ಯಗಳನ್ನು ಹೇಳುತ್ತ "ಕೀಚಕಾ! ಆ ಸೈರಂಧ್ರಿಯು ನಮ್ಮಲ್ಲಿ ಮರೆಹೊಕ್ಕು ಬಂದವಳು. ಅವಳನ್ನು ನಿರಪಾಯವಾಗಿ ರಕ್ಷಿಸು ವುದಾಗಿ ನಾನೂ ಅಭಯವನ್ನು ಕೊಟ್ಟಿರುವೆನು. ಅಲ್ಲದೆ ಅವಳು ಬಹಳ ಶುದ್ಧವಾದ ನಡತೆಯುಳ್ಳವಳು. ನಿನಗೆ ಮಂಗಳವಾಗಲಿ! ನಾನು ಅವ ಳೊಡನೆ ಅಂತಹ ಅನುಚಿತವಾದ ಮಾತುಗಳನ್ನಾಡಲಾರೆನು. ಆಕೆಯನ್ನು ಬೇರೊಬ್ಬ ಪುರುಷನು ಪಾಪಬುದ್ಧಿಯಿಂದ ಕೈಯಲ್ಲಿ ಮುಟ್ಟುವುದಕ್ಕೂ ಸಾಧ್ಯವಿಲ್ಲ. ಐದುಮಂದಿ ಗಂಧರ್ವರು ಅವಳನ್ನು ಸಂತೋಷಗೊಳಿ ಸುತ್ತ, ಅವಳಿಗೆ ಅಪಾಯವೇನೂ ಬಾರದಂತೆ ರಕ್ಷಿಸುತ್ತಿರುವರಂತೆ. ಅವಳು ನನ್ನಲ್ಲಿಗೆ ಬಂದಾಗ, ಮೊಟ್ಟಮೊದಲು ಅವಳೇ ನನಗೆ ಈ ಸಂಗತಿ ಯನ್ನು ತಿಳಿಸಿದಳು. ಆನೆಯ ಸುಂಡಿಲಂತೆ ಅಂದವಾದ ತೊಡೆಯುಳ್ಳ ಆ ಸೈರಂಧ್ರಿಯು ವಾಸ್ತವಾಂಶವನ್ನೇ ನನಗೆ ತಿಳಿಸಿರಬೇಕು. ಮಹಾಪ್ರ ಭಾವವುಳ್ಳ ಆ ಗಂಧರ್ವರು ಕೋಪಗೊಂಡರೆ, ಪ್ರಾಣವನ್ನೇ ತೆಗೆದುಬಿಡು ವರು. ಸಹೋದರಾ! ಅಷ್ಟೇಕೆ? ಒಮ್ಮೆ ಮಹಾರಾಜನೂ ಕೂಡ ಅವ ಳನ್ನು ನೋಡಿ ಮೋಹಗೊಂಡು ಅವಳಲ್ಲಿ ಆಸೆಪಟ್ಟನು. ನಾನು ಅವನಿಗೆ ಸತ್ಯವಚನಗಳಿಂದ ಸಮಾಧಾನ ಹೇಳಿ, ಅವನ ಪಾಪಬುದ್ಧಿಯನ್ನು ನೀಗಿ ಸಿದೆನು. ನನ್ನ ಪತಿಯಾದ ರಾಜನು ಇವಳ ರೂಪವನ್ನು ನೋಡಿದುದು ಮೊದಲು, ಅನವರತವೂ ಮನಸ್ಸಿನಲ್ಲಿ ಅವಳನ್ನೇ ಚಿಂತಿಸಿ ಹೊಗಳುತ್ತಿ ದ್ದನು. ಆದರೆ, ಆಕೆಯ ಪತಿಗಳಾದ ಗಂಧರ್ವರು, ವೈರಿಗಳ ಪ್ರಾಣವನ್ನೇ ತೆಗೆಯತಕ್ಕ ಮಹಾ ಶೂರರೆಂಬುದನ್ನು ಕೇಳಿದಮೇಲೆ, ಅವನು ಈಗ ಆ ಗಂಧರ್ವರ ಭಯದಿಂದ ಅವಳನ್ನು ಮನಸ್ಸಿನಲ್ಲಿಯಾದರೂ ನೆನೆಸುವುದಿಲ್ಲ.

ಆ ಗಂಧರ್ವರಾದರೋ ಮಹಾಪ್ರಭಾವವುಳ್ಳವರು. ಗರುಡನಂತೆಯೂ, ವಾಯುವಿನಂತೆಯೂ ತೇಜೋಬಲವುಳ್ಳವರು. ಅವರು ಕೋಪಗೊಂಡರೆ ಪ್ರಳಯಕಾಲದ ಸೂರ್ಯನಂತೆ, ಮೂರು ಲೋಕಗಳನ್ನೂ ದಹಿಸಿಬಿಡುವರು. ಅವರ ಮಹಾಮಹಿಮೆಯನ್ನೂ, ಬಲವನ್ನೂ ಕುರಿತು ಸೈರಂಧ್ರಿಯು ನನಗೆ ವಿವರವಾಗಿ ಹೇಳಿರುವಳು. ನಿನ್ನಲ್ಲಿ ನನಗಿರುವ ಬಂಧುಸ್ನೇಹದಿಂದ, ನಿನ್ನ ಹಿತಕ್ಕಾಗಿ ಆ ರಹಸ್ಯವನ್ನು ನಿನಗೆ ಈಗ ತಿಳಿಸಬೇಕಾಯಿತು. ಆದುದರಿಂದ ಎಲೈ ಪ್ರಿಯಸಹೋದರನೆ! ನೀನು ಹೊಂದಬಾರದ ದುರ್ಗತಿಗೆ ನನ್ನನ್ನು ಗುರಿಮಾಡಬೇಡ! ಬಲಾಢ್ಯರಾದ ಗಂಧರ್ವರು, ನಿನ್ನ ಕುಲಕ್ಕೂ, ನಿನ್ನ ಐಶ್ವರ್ಯಕ್ಕೂ ದೊಡ್ಡ ಹಾನಿಯನ್ನುಂಟುಮಾಡುವರು. ಆದುದರಿಂದ ನಿನಗೆ ನಿನ್ನ ಪ್ರಾಣಗಳಲ್ಲಿ ಆಸೆಯಿದ್ದರೆ, ನನಗೂ ನೀನು ಪ್ರಿಯವನ್ನುಂಟುಮಾಡುವನಾಗಿದ್ದರೆ, ಅವಳಲ್ಲಿ ಮನಸ್ಸನ್ನಿಡಬೇಡ! ಆ ವಿಚಾರವನ್ನು ಸ್ಮರಿಸಲೂ ಬಾರದು" ಎಂದಳು.

ಈ ಮಾತನ್ನು ಕೇಳಿ ದುಷ್ಟಸ್ವಭಾವವುಳ್ಳ ಆ ಕೀಚಕನು ತಿರುಗಿ ಅವಳನ್ನು ಕುರಿತು "ಅಕ್ಕಾ! ಆ ಸೈರಂಧ್ರಿಗೆ ಬೆಂಬಲವಾಗಿ ನೂರು ಮಂದಿ ಗಂಧರ್ವರಿರಲಿ! ಸಾವಿರ ಮಂದಿಯಿರಲಿ! ಕೊನೆಗೆ ಲಕ್ಷ ಗಂಧರ್ವರಿದ್ದರೂ ನಾನೊಬ್ಬನೇ ಅವರೆಲ್ಲರನ್ನೂ ವಧಿಸಬಲ್ಲೆನು. ಐದುಮಂದಿ ಗಂಧರ್ವರು ನನಗಿದಿರೆ? ಸ್ತ್ರೀಯರಲ್ಲಿರುವ ಒಂದು ಪರಮ ರಹಸ್ಯವನ್ನು ನೀನರಿಯೆ ಅವರು ಹೊರಕ್ಕೆ ಪಾತಿವ್ರತ್ಯ ನಟನವನ್ನು ಮಾಡಬಹುದು. ಒಬ್ಬ ಪುರುಷನು ಒಳ್ಳೇ ಗಂಧವಸ್ತ್ರಾದಿಗಳಿಂದಲಂಕೃತನಾಗಿ ಏಕಾಂತದಲ್ಲಿ ಅವರ ಕಣ್ಣಿಗೆ ಬಿದ್ದರೆ, ಅವನು ಸ್ವಂತಪುತ್ರನಾಗಿರಲಿ, ಪೌತ್ರನಾಗಿರಲಿ, ಸಹೋದರನಾಗಿರಲಿ, ಅವನನ್ನು ಏಕಾಂತದಲ್ಲಿ ಕಂಡಾಗ ಒಳ್ಳೇ ಪತಿವ್ರತೆಯಾಗಿದ್ದ ಸ್ತ್ರೀಯಾಗಿದ್ದರೂ ಅವಳಿಗೆ, ಮನಸ್ಸು ಕದಲಿ, ಕಾಮರಸವು ಸ್ರವಿಸುವುದೆಂದು ನಾನು ಕೇಳಿರುವನು. ಹೀಗಿರುವಾಗ, ಲೋಕಸುಂದರನಾಗಿ, ಒಳ್ಳೇ ತರುಣವಯಸ್ಸುಳ್ಳ ನಾನು, ಸರ್ವಾಭರಣಗಳಿಂದಲಂಕೃತನಾಗಿ, ಮೈತುಂಬ ಗಂಧವನ್ನು ಪೂಸಿಕೊಂಡು, ಮುಂದೆ ನಿಂತರೆ, ಆ ಸೈರಂಧ್ರಿಯು ಕಾಮಪೀಡಿತೆಯಾಗಿ ನನಗೆ ವಶವಾಗುವುದರಲ್ಲಿ

ದಿಂದ ಅವಳನ್ನು ನಿನ್ನಲ್ಲಿಗೆ ಕಳುಹಿಸುವೆನು. ಆಗ ನೀನು ಏಕಾಂತವಾದ ಸ್ಥಳದಲ್ಲಿ, ಒಳ್ಳೇ ಮಾತುಗಳಿಂದ ಅವಳನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಯತ್ನಿಸಬಹುದು. ನಿನ್ನ ಮಾತುಗಳನ್ನು ಅವಳು ಸಹನದಿಂದ ಕೇಳುವುದಾದರೆ, ನ್ಯಾಯವಾದ ಮಧುರವಾಕ್ಯಗಳಿಂದಲೇ ಅವಳ ಮನಸ್ಸನ್ನು ನಿನ್ನಕಡೆಗೆ ತಿರುಗಿಸುವ ಪ್ರಯತ್ನವನ್ನು ಮಾಡು. ಸದ್ಯಕ್ಕೆ ನಡೆಸಬಹುದಾದ ಉಪಾಯವೇನೋ ಇಷ್ಟೇ! ಅದರ ಮುಂದಿನ ಸಂಭವಗಳನ್ನುಕುರಿತು, ನಿನ್ನಲ್ಲಿ ನೀನೇ ಕ್ರಮವಾಗಿ ಆಲೋಚಿಸು" ಎಂದಳು.

ಕಾಲಚೋದಿತನಾದ ಆ ಕೀಚಕನು, ಸುದೇಷ್ಣೆಯು ಈ ಮಾತನ್ನು ಹೇಳಿದೊಡನೆ ತನ್ನಮನೆಗೆ ಹೊರಟು ಬಂದು, ಅಲ್ಲಿ ವಿಧವಿಧವಾದ ಭೋಜನವಸ್ತುಗಳನ್ನೂ, ಮದ್ಯವನ್ನೂ ಅತ್ಯಾತುರದಿಂದ ಸಿದ್ಧಪಡಿಸಿದನು. ಆಡು, ಕುರಿ, ಮೊದಲಾಗಿ ನಾನಾತರದ ಸಣ್ಣ ದೊಡ್ಡ ಮೃಗಗಳ ಮಾಂಸಗಳನ್ನು ಪಕ್ವಮಾಡಿಸಿಟ್ಟನು ಕುಶಲರಾದ ಅಡಿಗೆಯವರಿಂದ ನಾನಾತರದ ಭಕ್ಷ್ಯಗಳನ್ನು ಬೇಯಿಸಿಟ್ಟನು ಅನ್ನಪಾನಗಳನ್ನೆಲ್ಲ ಸಿದ್ಧಗೊಳಿಸಿದನು. ಆ ಮೂಢಾತ್ಮನು ಪಶುವಿನಂತೆ, ತನ್ನ ಕುತ್ತಿಗೆಗೆ ಕಾಲಪಾಶವು ಸುತ್ತಿಕೊಂಡಿರಲು, ತನ್ನ ಮುಂದಿನ ಮೃತ್ಯುವನ್ನು ತಿಳಿಯದೆ, ಸಂಸ್ಕಾರಗಳಿಂದ ಮದ್ಯಗಳನ್ನೂ, ಭಕ್ಷ್ಯಭೋಜ್ಯಗಳನ್ನೂ ಸಿದ್ಧಪಡಿಸಿಟ್ಟು, ಒಡನೆಯೇ ತನ್ನ ಸಹೋದರಿಯಾದ ಸುದೇಷ್ಣೆಯುಮನೆಗೆ ಹೊರಟುಬಂದನು. ಅಲ್ಲಿ ಆಕೆಯನ್ನು ಕುರಿತು "ಸುದೇಷ್ಣೆ! ಬಗೆಬಗೆಯ ಮದ್ಯಮಾಂಸಗಳನ್ನೂ, ಭಕ್ಷಣಗಳನ್ನೂ ಸಿದ್ಧಪಡಿಸಿರುವೆನು. ಏನಾದರೂ ನೆವದಿಂದ ಆ ಸೈರಂಧ್ರಿಯನ್ನು ನನ್ನ ಮನೆಯಕಡೆಗೆ ಬರುವಂತೆ ಮಾಡು. ಅವಳನ್ನು ತ್ವರೆಗೊಳಿಸಿ ಬೇಗನೆ ಕಳುಹಿಸು! ನಾನೂ ಈಗಾಗಲೇ ವೃಷಧ್ವಜನಾದ ಮಹಾದೇವನಿಗೆ ಹರಕೆಯನ್ನು ಕಟ್ಟಿ, 'ನನಗೆ ಆ ಸೈರಂಧ್ರಿಯೊಡನೆ ರತಿಯನ್ನಾಗಲಿ, ಅಥವಾ ಮೃತಿಯನ್ನಾಗಲಿ ಕರುಣಿಸಬೇಕೆ'ಂದು ಪ್ರಾರ್ಥಿಸಿಕೊಂಡಿರುವೆನು," ಎಂದನು. ಈ ಮಾತನ್ನು ಕೇಳಿ ಸುದೇಷ್ಣೆಯು ಮನಸ್ಸಂಕಟದಿಂದ ಆ ಕೀಚಕನನ್ನು ದುರದುರನೆ ನೋಡಿ, ನಿಟ್ಟುಸಿರನ್ನು ಬಿಡುತ್ತ "ಕೀಚಕಾ! ನೀನು ಹಿಂತಿರುಗು! ಮನೆಗೆ ಹೋಗು. ನಾನು

ಸೈರಂಧ್ರಿಗೆ, ನಿನ್ನ ಮನೆಯಿಂದ ಮದ್ಯವನ್ನು ತರುವಂತೆ ಹೇಳಿ ಈಗಲೇ ಅಲ್ಲಿಗೆ ಕಳುಹಿಸಿಕೊಡುವೆನು" ಎಂದಳು. ಪಾಪಾತ್ಮನಾದ ಕೀಚಕನು, ಆ ಮಾತನ್ನು ಕೇಳಿ ಅತಿಸಂಭ್ರಮದಿಂದ ಮನಸ್ಸಿನಲ್ಲಿ ಆ ಸೈರಂಧ್ರಿಯನ್ನೇ ಸ್ಮರಿಸುತ್ತಾ ಮನೆಗೆ ಹೊರಟುಬಂದನು.

ಇತ್ತಲಾಗಿ ಸುದೇಷ್ಣೆಯು ಸೈರಂಧ್ರಿಯನ್ನು ಕರೆದು "ಓ ಸೈರಂಧ್ರೀ! ನನ್ನ ಪ್ರಿಯಕ್ಕಾಗಿ ನೀನೊಂದು ಕೆಲಸವನ್ನು ಮಾಡಬೇಕಾಗಿದೆ. ಈಗ ನನಗೆ ಬಹಳ ದಾಹವಾಗಿದೆ. ಈಗಲೇ ನೀನು ನನ್ನ ತಮ್ಮನ ಮನೆಗೆ ಹೋಗಿ ಅಲ್ಲಿಂದ ಮಧುವನ್ನು ತೆಗೆದುಕೊಂಡು ಬಾ!" ಎಂದಳು. ಈ ಮಾತು ಕಿವಿಗೆ ಬಿದ್ದೊಡನೆ ದ್ರೌಪದಿಯು ಭಯದಿಂದ ಬೆಜ್ಜರಬಿದ್ದು, ಮನಸ್ಸಿನಲ್ಲಿ ಕೊರಗುತ್ತಾ, ದೀರ್ಘವಾಗಿ ನಿಟ್ಟುಸಿರನ್ನು ಬಿಟ್ಟು, ರಾಣಿಯನ್ನು ನೋಡಿ "ಅಮ್ಮಾ! ನಾನು ಅಲ್ಲಿಗೆ ಹೋಗಲಾರೆನು. ಕಾಮಾಸಕ್ತನಾದ ಆ ಸೂತಪುತ್ರನು ಇದಕ್ಕೆ ಮೊದಲೇ ನನ್ನನ್ನು ಕಾಮಿಸಿ, ಮಾತಾಡಿಸತೊಡಗಿದನು. ನಾನು ಆತನ ಮನೆಗೆ ಹೋಗಲಾರೆನು. ಅವನು ಲಜ್ಜೆಯಿಲ್ಲದವನು! ನೀನೂ ಇದನ್ನು ತಿಳಿಯದವಳಲ್ಲ. ರಾಜಪುತ್ರೀ! ನಾನು ಮೊದಲು ನಿನ್ನಲ್ಲಿಗೆ ಜೀವನಕ್ಕಾಗಿ ಬಂದಾಗಲೇ, ನನಗೆ ಇತರ ಪುರುಷರ ಸಂದರ್ಶನವು ಕೂಡದೆಂದು ಮೊದಲೇ ನಿನ್ನಿಂದ ಶಪಥಮಾಡಿಸಿಕೊಂಡಿರುವೆನಲ್ಲವೆ? ನಿನ್ನ ತಮ್ಮನಾದ ಕೀಚಕನಾದರೋ ಮಹಾಮೂರ್ಖನು. ಕಾಮಾತುರದಿಂದ ಹುಚ್ಚು ಹಿಡಿದಂತಿರುವನು. ನಾನು ಇಲ್ಲದ್ದಾಗಲೇ ಅವನು ನನ್ನನ್ನು ಅವಮಾನಗೊಳಿಸಲು ಯತ್ನಿಸಿದವನು. ಹೀಗಿರುವಾಗ ನಾನು ಬಂಧುಗಳಾರೂ ಸಹಾಯಕ್ಕಿಲ್ಲದಂತೆ ಏಕಾಕಿನಿಯಾಗಿ ಅವನ ಮನೆಗೆ ಹೋದರೆ, ಅವನು ನನ್ನನ್ನು ನೋಡಿ ಸುಮ್ಮನೆ ಬಿಡುವನೆ? ಮಹಾರಾಜ್ಞೀ? ನಿನ್ನ ಕೈಕೆಳಗೆ ಇನ್ನೂ ಎಷ್ಟೋ ಮಂದಿ ಗೌಡಿಯರಿರುವರು. ಅವರಲ್ಲಿ ಯಾವಳೊಬ್ಬಳನ್ನಾದರೂ ಈ ಕಾರ್ಯಕ್ಕೆ ನಿಯಮಿಸು. ನನ್ನನ್ನು ಮಾನದಿಂದ ನಿನ್ನಲ್ಲಿಟ್ಟುಕೊಂಡು ಕಾಪಾಡಬೇಕಾದ ಕರ್ತವ್ಯವು ನಿನ್ನದು! ದೇವಿ! ಆ ಕೀಚಕನ ಹೆಸರನ್ನೆತ್ತಿದರೂ ನನ್ನ ಮೈ ನಡುಗುವುದು! ನಾನು ಅಲ್ಲಿಗೆ ಸರ್ವಥಾ ಹೋಗಲಾರೆನು. ಬೇರೆ



೯೭. ವಿರಾಟಸಭೆಗೆ ಓಡಿಬಂದ ದ್ರೌಪದಿಯನ್ನು ಬೆನ್ನಟ್ಟಿ ಬಂದು ಕೀಚಕನು ಕಾಲಿಂದೊದೆಯುತಿದ್ದಾಗ, ಸೂರ್ಯದೂತನು ಹಿಂದಿನಿಂದ ಕೀಚಕನನ್ನೆಳೆದುಹಾಕಿದುದು. ಆಗಲೇ ಕೀಚಕನನ್ನು ಕೊಲ್ಲುವುದಕ್ಕೆ ಯತ್ನಿಸಿದ ಭೀಮನಿಗೆ ಧರ್ಮರಾಜನು ಸನ್ನೆಮಾಡಿ ತಡೆದುದು.

ದಿಗೆ ಉಂಟಾದ ಈ ಅವಮಾನವನ್ನು ನೋಡಿ ಅವರು ಸಹಿಸಲಾರದೆ ಹೋದರು. ಅದರಲ್ಲಿಯೂ ಭೀಮನಿಗೆ ತನ್ನ ಪತ್ನಿಯಾದ ದ್ರೌಪದಿಯನ್ನು ಕೀಚಕನು ನೆಲಕ್ಕೆ ಕೆಡಹಿ ಕಾಲಿಂದೊದೆದುದನ್ನು ಕಣ್ಣಾರೆನೋಡಿದಾಗ ದುಃಖಾವೇಶದಿಂದ ಕಣ್ಣುಗಳಲ್ಲಿ ಫಳಫಳನೆ ನೀರು ಹೊರಟಿತು. ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಟ್ಟನು. ಅವನ ಕಣ್ಣಿನ ರೆಪ್ಪೆಗಳೆರಡೂ ಉಬ್ಬಿದುವು. ಮುಖದಲ್ಲಿ ಬೆವರಿನಿಂದ ಕೂಡಿದ ಭಯಂಕರ ಭ್ರುಕುಟಿಗಳು (ಹುಬ್ಬುಗಂಟುಗಳು) ಉಬ್ಬಿ ಕಾಣಿಸಿದುವು. ದುರಾತ್ಮನಾದ ಕೀಚಕನನ್ನು ಆ ಕ್ಷಣವೇ ಕೊಂದುಬಿಡಬೇಕೆಂದು ನಿಶ್ಚಯಿಸಿ, ಕೋಪದಿಂದ ಕಟಕಟನೆ ಹಲ್ಲುಗಳನ್ನು ಕಡಿಯುತ್ತ, ತಾನು ಕುಳಿತಿದ್ದ ಆಸನದಿಂದ ಥಟ್ಟನೆ ಮೇಲೆದ್ದು, ಸಮೀಪದಲ್ಲಿದ್ದ ಒಂದು ಮರವನ್ನು ದೃಷ್ಟಿಸಿ, ಅತ್ತಲಾಗಿ ವಿರಾಟನನ್ನೂ ತನ್ನ ಕಡೆಗಣ್ಣಿನಿಂದ ನೋಡಿದನು. ಆಗ ಇವೆಲ್ಲವನ್ನೂ ನೋಡುತ್ತಿದ್ದ ಯುಧಿಷ್ಠಿರನು, ದುರಾತ್ಮನಾದ ಕೀಚಕನನ್ನು ಕೊಲ್ಲುವುದಕ್ಕಾಗಿ ಭೀಮನು ಸಿದ್ಧನಾಗಿರುವುದನ್ನು ತಿಳಿದು, ಬೇರೆ ಯಾರಿಗೂ ತಿಳಿಯದಂತೆ ಮುಖಸಂಜ್ಞೆಯಿಂದ ಭೀಮನನ್ನು ನಿವಾರಿಸುತ್ತ, ಅವನನ್ನು ಕುರಿತು, “ಎಲೈ ಅಡಿಗೆಯವನೇ! ನೀನು ಈ ಸಾಹಸಕಾರ್ಯವನ್ನು ಮಾಡಬೇಡ. ಈ ಮರವು ಚೆನ್ನಾಗಿ ಫಲಿಸಿದೆ! ಇದರಲ್ಲಿ ಒಣಗಿದ ಕಟ್ಟಿಗೆಗಳೇನೂ ಸಿಕ್ಕುವಹಾಗಿಲ್ಲ. ಹಾಗೆ ನಿನಗೆ ಅಡಿಗೆಗಾಗಿ ಕಟ್ಟಿಗೆಗಳನ್ನು ಸಂಪಾದಿಸಬೇಕೆಂಬ ಆಸೆಯಿದ್ದರೆ, ಈ ಪಟ್ಟಣದ ಹೊರಗಿನ ಬಯಲಿಗೆ ಹೋಗಿ, ಅಲ್ಲಿ ಬೇಕಾದಷ್ಟು ಗಿಡಗಳನ್ನು ನೀನು ಬುಡಸಹಿತವಾಗಿ ಕಿತ್ತುಹಾಕಬಹುದು. ನಿನ್ನ ಸಾಹಸಕ್ಕೆ ಇದು ಸ್ಥಳವಲ್ಲ. ಅದು ನಿನಗೇನೂ ಕಷ್ಟವಾಗಲಾರದು. ಹಸಿಯಾದ ಒಂದು ಮರದ ನೆರಳನ್ನಾಶ್ರಯಿಸಿ, ಅದರಿಂದ ಉಪಕಾರವನ್ನು ಪಡೆದ ಮನುಷ್ಯನು ತಾನು ಪಡೆದ ೩ ಉಪಕಾರವನ್ನು ಮರೆಯಬಾರದು. ಅದರ ಒಂದು ಎಲೆಯನ್ನಾದರೂ ಕಿತ್ತು ಹಾಕಬಾರದು. ಎಲೆ ಪಾಚಕಾ! ನಿನ್ನ ಕೋಪಕ್ಕೆ ಇದು ಸಮಯವಲ್ಲ. ಈ ಚಪಲಬುದ್ಧಿಯನ್ನು ಬಿಡು. ಬಲಾಢ್ಯರಿಗೆ ಇದು (ಮರವನ್ನು ಮುರಿಯುವುದು) ಏನೂ ಒಂದು ದೊಡ್ಡ ಕಾರ್ಯವಲ್ಲ. ಆದರೂ ಈ ಮರವು ಇನ್ನೂ ಪೂರ್ಣವಾಗಿ ಬೆಳೆದಿಲ್ಲ. ಎರಡುಪಕ್ಷಗಳು ಇನ್ನೂ ಇದಕ್ಕೆ ಕಡಿಮೆ

ಯಾಗಿವೆ,” ಎಂದು ಸಂಕೇತವಾಕ್ಯದಿಂದ ಆ ಭೀಮನನ್ನು ನಿವಾರಿಸಿದನು. ಹೀಗೆ ಧರ್ಮರಾಜನು ತನ್ನ ಸಂಕೇತವಾಕ್ಯವು ಎಲ್ಲಿ ತಿಳಿದುಬಿಡುವುದೋ, ಎಂದು ಭಯಪಟ್ಟು, ತನ್ನ ಕೈಯ ಹೆಬ್ಬೆರಳಿನಿಂದ ತನ್ನ ಕಾಲಿನ ಹೆಬ್ಬೆರಳನ್ನು ಅಮುಕಿ ಸಂಜ್ಞೆಯನ್ನು ಮಾಡಲು, ಧೀರನಾದ ಭೀಮನು ಧರ್ಮರಾಜನ ಮಾತುಗಳಿಂದಲೂ, ಅವನ ಚೇಷ್ಟೆಗಳಿಂದಲೂ ಅವನ ಅಭಿಪ್ರಾಯವನ್ನು ತಿಳಿದುಕೊಂಡು, ಬಲಾತ್ಕಾರದಿಂದ ತನ್ನ ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡು ಸುಮ್ಮನಾದನು. ಆದರೆ, ಇತ್ತಲಾಗಿ ಭೀಮನ ಆರ್ಭಟವನ್ನೂ, ಅತ್ತಲಾಗಿ ಧರ್ಮರಾಜನ ಸಂಜ್ಞೆಗಳನ್ನೂ ನೋಡಿದಾಗ ದ್ರೌಪದಿಗೆ ದುಸ್ಸಹವಾದ ಕೋಪವೂ, ದುಃಖವೂ ಉಂಟಾಗಿ, ಮೇಲೆಮೇಲೆ ರೋದಿಸತೊಡಗಿದಳು. ಬೆನ್ನಟ್ಟಿಬಂದ ಕೀಚಕನಿಂದ ರಕ್ಷಣೆಯನ್ನು ಬೇಡುವುದಕ್ಕಾಗಿ ಸಭಾಮುಖಕ್ಕೆ ಬಂದು ನಿಂತಿದ್ದ ಆ ದ್ರೌಪದಿಯು, ದುಃಖದಿಂದಳುತ್ತ, ತಮ್ಮನ್ನೇ ತಾವು ದಹಿಸುವಂತೆ ಕೋಪದಿಂದ ಕೆಂಪೇರಿ ಕೆಂಡದಂತಿರುವ ಕಣ್ಣುಗಳಿಂದ ಕೇವಲ ಅಲ್ಲಿ ದೀನಮನಸ್ಕರಾಗಿದ್ದ ತನ್ನ ಪತಿಗಳನ್ನು ದುರದುರನೆ ನೋಡಿದಳು. ಹೇಗೆ ನೋಡಿದರೇನು? ಧರ್ಮಯುಕ್ತವಾದ ಪ್ರತಿಜ್ಞೆಯನ್ನು ಕಾಪಾಡುವುದಕ್ಕಾಗಿ, ತನ್ನ ನಿಜಸ್ಥಿತಿಯನ್ನು ಮರೆಸಿಟ್ಟುಕೊಂಡು, ಆ ಸಭಾಜನರೆಲ್ಲರ ಮುಂದೆ ಹೀಗೆಂದು ಹೇಳುವಳು. “ಯಾವ ರಾಜರು ಪ್ರಜಾರಕ್ಷಣಶೀಲರಾಗಿ, ಎಣೆಯಿಲ್ಲದ ಪರಾಕ್ರಮವುಳ್ಳವರಾಗಿ, ಸತ್ಯಧರ್ಮಗಳಲ್ಲಿ ನಿರತರಾಗಿ, ತಮ್ಮ ರಾಜಕಾರ್ಯಗಳನ್ನು ಪಾಲಿಸುತ್ತ, ಸ್ವಜನರಲ್ಲಿಯೂ ಇತರ ಪ್ರಜೆಗಳಲ್ಲಿಯೂ ಭೇದಬುದ್ಧಿಯಿಲ್ಲದಿರುವರೋ, ಪ್ರಿಯಜನರಲ್ಲಿಯೂ, ವಧಾರ್ಹರಲ್ಲಿಯೂ ಯಾರು ಸಮತ್ವದಿಂದ ವರ್ತಿಸುವರೋ, ಮತ್ತು ಇಬ್ಬರಿಗೆ ವಿವಾದಗಳು ಬಂದಾಗ, ಧರ್ಮಾಸನದಲ್ಲಿರುವ ಯಾವ ರಾಜರು ನಿಷ್ಪಕ್ಷಪಾತವಾಗಿ ಕಾರ್ಯಗಳನ್ನು ಪರಿಶೀಲಿಸುವರೋ, ಅಂತವರು ಇಹ ಪರ ಲೋಕಗಳೆರಡನ್ನೂ ಜಯಿಸುವರು. ಎಲೈ ಮಹಾರಾಜನೆ! ಈಗ ಧರ್ಮಾಸನದಲ್ಲಿ ಕುಳಿತಿರುವ ನಿನಗೆ ನಿರಪರಾಧಿಯಾದ ನನ್ನನ್ನು ರಕ್ಷಿಸಬೇಕಾದುದು ಧರ್ಮವು. ದುರಾತ್ಮನಾದ ಕೀಚಕನು ನಿಮ್ಮೆಲ್ಲರ ಕಣ್ಣೆದಿರಿಗಾಗಿಯೇ, ನಿರಪರಾಧೆಯಾದ ನನ್ನನ್ನು ತನ್ನ ಕೈಕೆಳಗಿನ ದಾಸಿಯನ್ನು ಹೇಗೋ ಹಾಗೆ ಕಾಲಿಂದೊದೆ

ದಾಗ, ತಾನು ಅವರಿಗೆ "ಓ ಪ್ರಜೆಗಳಿ! ಕಾರ್ಯಾಕಾರ್ಯಗಳು, ಧರ್ಮಾಧರ್ಮಗಳು, ಕ್ರಿಯಾಕ್ರಿಯೆಗಳೆಂಬೀ ಮೂರು ದ್ವಂದ್ವಗಳನ್ನೂ ನೀವು ಚೆನ್ನಾಗಿ ಪರಿಶೀಲಿಸಬೇಕು. ಇಂತಹ ದ್ವಂದ್ವಗಳಿಗೆ ಸಂಬಂಧಪಟ್ಟ ಸದಾಚಾರ ದುರಾಚಾರಗಳಿಂದ, ಮನುಷ್ಯನು ಆಯಾ ಕರ್ಮಕ್ಕೆ ತಕ್ಕ ಫಲವನ್ನು ಪಡೆಯುವನು. ಇವುಗಳಿಂದಲೇ ಸ್ವರ್ಗನರಕಗಳು ಪ್ರಾಪ್ತವಾಗುವುವು. ಮನುಷ್ಯನು ಮೋಹವಶನಾಗಿ, ಸತ್ಕಾರ್ಯವನ್ನೋ, ದುಷ್ಕಾರ್ಯವನ್ನೋ ಮಾಡಿ, ಮರಣವನ್ನು ಹೊಂದಿದಮೇಲೆ, ಫಲಾನುಭವದಲ್ಲಿ ತನ್ನ ಸ್ವಬುದ್ಧಿಯಿಂದ ಪಶ್ಚಾತ್ತಾಪಪಟ್ಟು ಕೊರಗಬೇಕಾಗುವುದು" ಎಂದು ಎಚ್ಚರಿಸಿದ ಸಂಗತಿಯನ್ನು ಇಂದ್ರನಿಗೆ ತಿಳಿಸಿದಮೇಲೆ ಇಂದ್ರನು, ಬ್ರಹ್ಮನ ಬುದ್ಧಿವಾದವನ್ನು ಪಡೆದು, ಅದರಂತೆ ಸ್ವರ್ಗರಾಜ್ಯವನ್ನು ಪಾಲಿಸುತ್ತಿದ್ದನು. ಆದುದರಿಂದ ರಾಜೇಂದ್ರಾ! ದೇವರಾಜನಾದ ಬ್ರಹ್ಮನು ಹೇಳಿದ ನೀತಿಯನ್ನನುಸರಿಸಿ, ಕಾರ್ಯಾಕಾರ್ಯ ವಿವೇಚನೆಗಳಲ್ಲಿ ಸ್ಥಿರಬುದ್ಧಿಯುಳ್ಳವನಾಗಿರು" ಎಂದು ಹೇಳಿದಳು.

ಇಲ್ಲಿಗೆ ಹತ್ತೊಂಭತ್ತನೆಯ ಅಧ್ಯಾಯವು.

---

ಕೀಚಕನನ್ನು ದಂಡಿಸದಿದ್ದುದಕ್ಕಾಗಿ ವಿರಾಟನನ್ನು ದ್ರೌಪದಿಯು ನಿಂದಿಸಿದುದು. ವಿರಾಟನು ಸಮಾಧಾನವನ್ನು ಹೇಳಿದುದು. ಯುಧಿಷ್ಠಿರನು (ಕಂಕಸನ್ಯಾಸಿಯು) ದ್ರೌಪದಿಯನ್ನು ಸಮಾಧಾನಿಸಿದುದು.

ದ್ರೌಪದಿಯು ಹೀಗೆ ಅಳುತ್ತಿದ್ದರೂ, ಬಲದಿಂದ ಕೊಬ್ಬಿದ ಕೀಚಕನನ್ನು ಶಿಕ್ಷಿಸುವುದಕ್ಕೆ ವಿರಾಟನು ಅಶಕ್ತನಾದುದರಿಂದ, ಒಳ್ಳೇ ಮಾತುಗಳಿಂದಲೇ ಆ ಕೀಚಕನನ್ನು ನಿವಾರಿಸಿದನು. ಅಂತಹ ಮಹಾಪರಾಧಿಯಾದ ಕೀಚಕನನ್ನು, ಅವನ ಅಪರಾಧಕ್ಕೆ ತಕ್ಕಂತೆ ದಂಡಿಸದೆ ಬಿಟ್ಟುದಕ್ಕಾಗಿ, ವಿರಾಟನಮೇಲೆ ದ್ರೌಪದಿಗೆ ಮಹತ್ತಾದ ಕೋಪವುಂಟಾಯಿತು. ದ್ರೌಪದಿಯಾದರೋ, ಅಂತಹ ಅಪರಾಧಿಯಾದ ಕೀಚಕನ ವಿಷಯದಲ್ಲಿ

ಹೇಗೆ ನಡೆಯಬೇಕೆಂಬ ವ್ಯವಹಾರ ಧರ್ಮಗಳನ್ನು ಚೆನ್ನಾಗಿ ಬಲ್ಲವಳು. ಅಂತವನ ವಿಷಯದಲ್ಲಿಯೂ ರಾಜನು ದಂಡಿಸದೆ ಸುಮ್ಮನಿರುವುದನ್ನು ಕಂಡು, ಆಕೆಯು ಉತ್ತಮವಾದ ರಾಜಧರ್ಮವನ್ನು ಪರ್ಯಾಲೋಚಿಸಿ, ಆ ಸಭೆಯಲ್ಲಿ ರಾಜನನ್ನೂ, ರಾಜನ ಮನೋನುವರ್ತಿಗಳಾದ ಸಭಾಸದರನ್ನೂ, ಅಪರಾಧಿಯಾದ ಕೀಚಕನನ್ನೂ ನೋಡಿ, ದುಃಖದಿಂದ ವಿರಾಟನನ್ನು ನಿರ್ದೇಶಿಸಿ ತಿರುಗಿ ಹೀಗೆಂದು ಹೇಳುವಳು, "ಓ ರಾಜಾ! ನೀನು ರಾಜನೆನಿಸಿಕೊಂಡಿದ್ದರೂ, ದುರಾತ್ಮನಾದ ಈ ಕೀಚಕನ ವಿಷಯದಲ್ಲಿ ನೀನು ನಿಜವಾಗಿ ರಾಜನಂತೆ ನಡೆದುಕೊಳ್ಳಲಿಲ್ಲ. ನಿನ್ನ ನೀತಿಯು ಕೇವಲ ಚೋರರ ಸ್ವಭಾವವನ್ನು ಹೋಲುವುದು. ಸಜ್ಜನರಲ್ಲಿ ಇಂತಹ ಸ್ವಭಾವವಿರದು. ಓ ಸದಸ್ಯರೆ! ಕೇಳಿರಿ! ಧರ್ಮವನ್ನು ಮೀರಿ ನಡೆದವನು ಈ ಕೀಚಕನು ಮಾತ್ರವೇ ಅಲ್ಲ. ಈ ಮತ್ಸ್ಯರಾಜನೂ ತನಗೆ ಯೋಗ್ಯವಾದ ಧರ್ಮದಲ್ಲಿ ನಡೆಯಲಿಲ್ಲ. ಅವನ ಆಶ್ರಿತರಾಗಿ ಈ ಸಭೆಯಲ್ಲಿರುವವರೂ ಧರ್ಮವನ್ನು ತಿಳಿದು ನಡೆಯಲಿಲ್ಲ. ಕೀಚಕನಿಗೇನೋ ಧರ್ಮಲೇಶವೂ ತಿಳಿಯದು. ಅವನಂತೆಯೇ ಇಲ್ಲಿರುವ ರಾಜಭೃತ್ಯರೂ ಧರ್ಮವನ್ನು ತಿಳಿದವರಲ್ಲ. ಈ ರಾಜನೂ ನ್ಯಾಯಮಾರ್ಗವನ್ನು ಹಿಡಿದು ನುಡಿಯಲಿಲ್ಲ. ಅವನ ಮಂತ್ರಿಗಳೂ ನ್ಯಾಯವನ್ನು ತಿಳಿಯದೆ ಹೋದರು. ಓ ರಾಜಾ! ರಾಜಸಭೆಯಲ್ಲಿ ನಾನು ವಿರಾಟರಾಜನಾದ ನಿನ್ನನ್ನು ನಿಂದಿಸುವೆನೆಂದು ತಿಳಿಯಬೇಡ! ನಿನ್ನಿದಿರಾಗಿಯೇ ನಾನು ಈ ಕೀಚಕನಿಂದ ಹೀಗೆ ಕಾಲಿನಿಂದ ಒದೆಯಲ್ಪಡುವುದು ಅನ್ಯಾಯವಲ್ಲವೆ? ಧರ್ಮವನ್ನತಿಕ್ರಮಿಸಿ ನಡೆದ ಈ ಕೀಚಕನ ದೌರಾತ್ಮ್ಯವನ್ನು ಸಭಾಸದರೆಲ್ಲರೂ ನೋಡಲಿ! ಎಲೈ ವಿರಾಟರಾಜನೆ! ನಾನು ನಿರಪರಾಧಿನಿ! ದಿಕ್ಕಿಲ್ಲದವಳು! ನನ್ನ ಸ್ಥಿತಿಯನ್ನು ನೋಡು. ದುಷ್ಟಜನರಲ್ಲಿ ಇಂಪಾದ ಬುದ್ಧಿವಾದಗಳಾವುವೂ ಕೆಲಸಕ್ಕೆ ಬಾರವು. ದುಷ್ಟರಿಗೆ ದಂಡನವನ್ನೇ ವಿಧಿಸಬೇಕಾದುದು ರಾಜಧರ್ಮವು. ಯಾವ ರಾಜನು ದಂಡಕ್ಕೆ ಅರ್ಹರಲ್ಲದವರನ್ನು ದಂಡಿಸುವನೋ, ಯಾವನು ದಂಡಿಸಬೇಕಾದವರನ್ನು ದಂಡಿಸದೆ ಬಿಡುವನೋ, ಅಂತವನು ಲೋಕದಲ್ಲಿ ರಾಜಶಬ್ದಕ್ಕೇ ಅರ್ಹನಲ್ಲ. ಕುಂಟರು, ಕುರುಡರು, ಬಡವರು, ಅಶಕ್ತರು, ಕೃಪಣರು, ಗುಜ್ಜಾರಿಗಳು, ಮಂಕರು,

ಮಹಾತೇಜಸ್ವಿಗಳೂ, ಬಲವಂತರೂ, ಕ್ಷಮಾವಂತರೂ, ಮಾನವಂತರೂ ಮಹಾಧನುರ್ಧಾರಿಗಳೂ, ಯುದ್ಧವೀರರೂ, ಬಲಗರ್ವಿತರೂ ಆಗಿ, ಪೌರುಷಪ್ರಧಾನರಾಗಿರುವರೋ, ಅಂತವರ ಮಾನಿನೀಮಣಿಯೆನಿಸಿದ ನನ್ನನ್ನು ಸೂತಪುತ್ರನು ಕಾಲಿಂದೊದೆದಿರುವನು. ಮಹಾಬಲವುಳ್ಳ ಯಾರು ಕೋಪಿಸಿದ ಮಾತ್ರಕ್ಕೆ ಈ ಸಮಸ್ತ ಲೋಕಗಳನ್ನೂ ನಾಶಮಾಡುವರೋ ಅಂತವರ ಪ್ರಿಯೆಯಾದ ನನ್ನನ್ನು ಸೂತಪುತ್ರನು ಕಾಲಿಂದೊದೆದನು! ವೀರ್ಯದಲ್ಲಿಯಾಗಲಿ, ಸತ್ಯದಲ್ಲಿಯಾಗಲಿ, ಬಲದಲ್ಲಿಯಾಗಲಿ, ಇಂದ್ರಿಯನಿಗ್ರಹದಲ್ಲಿಯಾಗಲಿ, ಯಾರಿಗೆ ಸಮಾನನಾದವನು ಬೇರೊಬ್ಬನಿಲ್ಲವೋ, ಅಂತಹ ಮಹಾತ್ಮರ ಮನೋಹಾರಿಣಿಯಾದ ನನ್ನನ್ನು ಸೂತಪುತ್ರನು ಕಾಲಿಂದ ಒದೆದನು! ಸೌಭಾಗ್ಯಗಳಿಂದಾಗಲಿ ಯಾರಿಗೆ ಸಮಾನನಾದವನು ಲೋಕದಲ್ಲಿ ಬೇರೊಬ್ಬನಿಲ್ಲವೋ ಅಂತವರ ಮನೋಹಾರಿಣಿಯಾದ ನನ್ನನ್ನು ಸೂತಪುತ್ರನು ಕಾಲಿಂದೊದೆದಿರುವನು. ಅದರಲ್ಲಿಯೂ, ಈಗ, ಎಲೈ ರಾಜನೆ! ಪ್ರಜೆಗಳಿಗೆ ಹಿತೈಷಿಯೆಂದು ಹೇಳಿಸಿಕೊಳ್ಳುವ ನಿನ್ನ ಕಣ್ಣೆದಿರಾಗಿಯೇ, ಆ ಕೀಚಕನು ನನ್ನನ್ನು ಹೀಗೆ ನಿರ್ದಯವಾಗಿ ಹೊಡೆದನಲ್ಲವೆ? ಅಯ್ಯೋ! ಈ ಮಹಾಸಭೆಯಲ್ಲಿ ಆ ದುರಾತ್ಮನನ್ನು ದಂಡಿಸುವರೊಬ್ಬರೂ ಇಲ್ಲವೆ? ಆಹಾ! ಮರೆಹೊಕ್ಕವರಿಗೆ ಬೆಂಬಲವಾಗಿ ಕಾಪಾಡತಕ್ಕ ಮಹಾಬಲವುಳ್ಳ ನನ್ನ ಪತಿಗಳು ಈಗ ಈ ಲೋಕದಲ್ಲಿ ಎಲ್ಲಿ ತಲೆಮರೆಸಿಕೊಂಡು ತಿರುಗುತ್ತಿರುವರೋ? ಮಹಾಬಲಾಢ್ಯರೂ ತೇಜಸ್ವಿಗಳೂ, ಆದ ಆ ನನ್ನ ಪತಿಗಳು, ಸೂತಪುತ್ರನಿಂದ ಹೀಗೆ ಅವಮಾನಿತಳಾದ ನನ್ನನ್ನು ನೋಡಿಯೂ, ಶಕ್ತಿಹೀನರಂತೆ ಹೇಗೆ ಸೈರಿಸುತ್ತಿರುವರೋ? ಈಗ ಅವರ ಆ ಕೋಪವೆಲ್ಲಿ ಹೋಯಿತು? ಅವರ ವೀರ್ಯವೆಲ್ಲಿ ಹೋಯಿತು? ಅವರ ಬಲವೆಲ್ಲಿ ಹೋಯಿತು? ಅಯ್ಯೋ! ಅವರು ಹೀಗೆ ದುರಾತ್ಮನಾದ ಕೀಚಕನಿಂದ ಹಿಂಸಿಸಲ್ಪಡುವ ತಮ್ಮ ಪ್ರಿಯಪತ್ನಿಯಾದ ನನ್ನನ್ನು ಈ ವಿಪತ್ತಿನಿಂದ ತಪ್ಪಿಸಿ ಕಾಪಾಡುವುದಕ್ಕೆ ಇಷ್ಟಪಡದಿರುವರಲ್ಲ! ಅಯ್ಯೋ! ಈಗ ನಾನೇನುಮಾಡಲಿ? ನನ್ನ ಪತಿಗಳೂ ನನ್ನನ್ನು ಕೈಬಿಟ್ಟು, ಈ ವಿರಾಟರಾಜನೂ ಧರ್ಮದೂಷಕನಾಗಿ, ನಿರಪರಾಧಿಯಾದ ನನ್ನನ್ನು ಬೇರೊಬ್ಬರು ಹೊಡೆದುಕೊಲ್ಲುತ್ತಿರುವಾಗಲೂ ಕಣ್ಣಾರೆ ನೋಡುತ್ತ ಸುಮ್ಮನಿದ್ದಪಕ್ಷದಲ್ಲಿ,

ಅಬಲೆಯಾದ ನಾನು ಏನನ್ನು ತಾನೇ ಮಾಡಬಲ್ಲೆನು? ಯಾವ ಸಭೆಯಲ್ಲಿ ಧರ್ಮವನ್ನು ಮೆಟ್ಟಿ ಅಧರ್ಮವು ಮೇಲೆನಿಸುವುದೋ, ಅಧರ್ಮದಿಂದ ಧರ್ಮವನ್ನು ಕಾಪಾಡತಕ್ಕವರು ಯಾವ ಸಭೆಯಲ್ಲಿರುವುದಿಲ್ಲವೋ ಅಲ್ಲಿರತಕ್ಕ ಸಭಾಸದರೆಲ್ಲರೂ ಹತಪ್ರಾಯರೇ! ಯಾವ ಸಭೆಯಲ್ಲಿ ಎಲ್ಲರ ಕಣ್ಣ ಮುಂದೆ ಧರ್ಮವು ಅಧರ್ಮದಿಂದಲೂ, ಸತ್ಯವು ಅಸತ್ಯದಿಂದಲೂ ಪರಾಭವಿಸಲ್ಪಡುವುದೋ ಆ ಸಭೆಯಲ್ಲಿದ್ದವರೆಲ್ಲರೂ ಹತಪ್ರಾಯರೇ" ಎಂದಳು.

ಹೀಗೆ ದೈನ್ಯದಿಂದ ಕೂಗಿ ರೋದಿಸುತ್ತಿರುವ ಸೈರಂಧ್ರಿಯ ಮಾತನ್ನು ಕೇಳಿ, ಆ ಸಭೆಯಲ್ಲಿದ್ದವರೆಲ್ಲರೂ ಅವಳ ಧೈರ್ಯಕ್ಕೂ, ನ್ಯಾಯವಾದಕ್ಕೂ ಮೆಚ್ಚಿ "ಭಲೆ! ಶಹಬಾಸ್!" ಎಂದು ಅವಳನ್ನು ಕೊಂಡಾಡಿದರು. ಅನೇಕರು ಕೀಚಕನನ್ನು ನಿಂದಿಸಿದರು! ಕೆಲವರು ವಿರಾಟನನ್ನು ನಿಂದಿಸಿದರು! ಕೆಲವರು ಸುದೇಷ್ಣೆಯನ್ನು ಬೈಯುತ್ತಿದ್ದರು. ಹೀಗೆ ಆ ಸೈರಂಧ್ರಿಯಲ್ಲಿ ಕನಿಕರಗೊಂಡಿದ್ದ ಆ ಸಭಾಸದರು, ತಮ್ಮೊಳಗೆ ತಾವು ಒಬ್ಬರಿಗೊಬ್ಬರು ಹೀಗೆಂದು ಹೇಳತೊಡಗಿದರು. "ಆಹಾ! ಸರ್ವಾಂಗಸುಂದರಿಯೂ, ವಿಶಾಲಲೋಚನೆಯೂ ಆದ ಈಕೆಯು ಯಾವನಿಗೆ ಪತ್ನಿಯೆನಿಸಿರುವಳೋ, ಅವನೇ ಮಹಾಭಾಗ್ಯಶಾಲಿಯು. ಅವನು ಎಂದಿಗೂ ದುಃಖಭಾಗಿಯಾಗಲಾರನು. ಯಾವಳ ಶರೀರವು ಮಂಗಳಕರವಾಗಿ ಪುಷ್ಟಿಹೊಂದಿರುವುದೋ, ಯಾವಳು ತನ್ನ ಮುಖದಿಂದ ತಾವರೆಯನ್ನೂ, ತನ್ನ ನಡೆಯಿಂದ ಹಂಸವನ್ನೂ, ತನ್ನ ಮಂದಹಾಸದಿಂದ ಮೊಲ್ಲೆಯ ಹೂವನ್ನೂ ಜಯಿಸುತ್ತಿರುವಳೋ, ಅಂತಹ ಸುಂದರಾಂಗಿಯಾದ ಆಕೆಯನ್ನು ಕಾಲಿಂದೊದೆದುದು ಸರ್ವಥಾ ಉಚಿತವಲ್ಲ! ಯಾವಳ ಮೂವತ್ತೆರಡು ಹಲ್ಲುಗಳೂ ಅತಿ ಸ್ವಚ್ಛವಾಗಿ ಬೆಳಗುತ್ತಿರುವುವೋ, ಯಾವಳ ಸರ್ವಾವಯವಗಳೂ ಶರೀರಕ್ಕೆ ತಕ್ಕಂತೆ ಸಮಪ್ರಮಾಣವುಳ್ಳವುಗಳಾಗಿ, ಲಾವಣ್ಯಮಯವಾಗಿ ಥಳಥಳಿಸುತ್ತಿರುವುವೋ, ಅಂತಹ ಸ್ತ್ರೀರತ್ನಕ್ಕೆ ಈ ವಿಧವಾದ ಪಾದತಾಡನವು ಸರ್ವಥಾ ಯೋಗ್ಯವಲ್ಲ. ಯಾವಳ ತಲೆಕೂದಲುಗಳು ಅತ್ಯಂತ ಮೃದುವಾಗಿ, ನುಣುಪಾಗಿ, ಥಳಥಳಿಸುತ್ತಿರುವುವೋ, ಅಂತಹ ತರುಣೀಮಣಿಗೆ ಈ ವಿಧವಾದ ಪಾದತಾಡನವು ಸರ್ವಥಾ ಉಚಿತವಲ್ಲ. ಯಾವಳ ಅಂಗೈಯಲ್ಲಿ

ಶಂಖ, ಚಕ್ರ, ಧ್ವಜ, ಪದ್ಮ, ಪ್ರಾಸಾದಗಳೇ ಮೊದಲಾದ ಶುಭರೇಖೆಗಳೆಲ್ಲವೂ ಕಾಣುತ್ತಿರುವುವೋ, ಅಂತಹ ಮಹಾಭಾಗ್ಯವತಿಯಾದ ಈಕೆಯನ್ನು ಕಾಲಿಂದೊದೆಯುವುದು ಸರ್ವಥಾ ಉಚಿತವಲ್ಲ. ಯಾವಳ ದೇಹದಲ್ಲಿ ಪ್ರದಕ್ಷಿಣಾಕಾರವಾದ ನಾಲ್ಕು ಸುಳಿಗಳೂ ಶೋಭಿಸುತ್ತಿರುವುವೋ, ಅಂತಹ ಶುಭಲಕ್ಷಣವುಳ್ಳ ಈಕೆಗೆ, ಈ ತಿರಸ್ಕಾರವು ಎಂದಿಗೂ ಯೋಗ್ಯವಲ್ಲ. ಎಡೆಯಿಲ್ಲದೆ ಒತ್ತಾದ ಕೈಕಾಲುಗಳಿಂದಲೂ, ಒತ್ತಾದ ಹಲ್ಲುಗಳಿಂದಲೂ, ಕಮಲದಳದಂತಿರುವ ಕಣ್ಣುಗಳಿಂದಲೂ ಶೋಭಿಸುತ್ತಿರುವ ಈ ಕನ್ಯೆಯನ್ನು ಮತ್ತೊಬ್ಬ ಪುರುಷನು ಕಾಲಿಂದೊದೆಯುವುದೆಂದರೇನು? ಅನೇಕ ಶುಭಲಕ್ಷಣಗಳಿಂದ ಕೂಡಿ, ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳವಳಾಗಿ, ದಿವ್ಯಸೌಂದರ್ಯವತಿಯಾದ ಇಂತಹ ಕನ್ಯೆಯನ್ನು ಕಾಲಿಂದೊದೆದುದು ಎಷ್ಟುಮಾತ್ರವೂ ಉಚಿತವಲ್ಲ. ದೇವತೆಯಂತೆ ಸುಂದರಿಯೂ, ಇಂದ್ರಪತ್ನಿಯಂತೆ ಮಂಗಳಸ್ವರೂಪಿಣಿಯೂ, ಅಪ್ಸರಸಿಯಂತೆ ರೂಪವತಿಯೂ ಆದ ಈಕೆಯನ್ನು ಕಾಲಿಂದೊದೆದುದು ಸರ್ವಥಾ ಉಚಿತಕಾರ್ಯವಲ್ಲ,'' ಎಂದು ಅಲ್ಲಿದ್ದ ಸಭಾಸದರೆಲ್ಲರೂ ದ್ರೌಪದಿಯನ್ನು ಪ್ರಶಂಸೆಮಾಡುತ್ತಿದ್ದರು. ಇಷ್ಟರಲ್ಲಿ ಆ ವಿರಾಟನ ಸಮೀಪದಲ್ಲಿ ಸನ್ಯಾಸಿವೇಷದಿಂದಿದ್ದ ಯುಧಿಷ್ಠಿರನು ಏನೋ ಒಂದು ವಿಷಯವನ್ನು ಕುರಿತು ಮಾತಾಡುವ ಪ್ರಯತ್ನದಲ್ಲಿರುವುದನ್ನು ತಿಳಿದುಕೊಂಡು ದ್ರೌಪದಿಯು ದುಃಖದಿಂದ ನಿಟ್ಟುಸಿರನ್ನು ಬಿಟ್ಟು ತಲೆಯನ್ನು ಬಗ್ಗಿಸಿ, ನೆಲವನ್ನು ನೋಡುತ್ತ ಸುಮ್ಮನೆ ನಿಂತುಬಿಟ್ಟಳು. ಯುಧಿಷ್ಠಿರನಿಗಾದರೋ ಕೋಪದಿಂದ ಹಣೆಯಲ್ಲಿ ಬೆವರಿನ ಹನಿಗಳು ಸುರಿಯುತ್ತಿದ್ದುವು. ಆಗ ರಾಜನ ಸಮೀಪದಲ್ಲಿ ಸನ್ಯಾಸಿವೇಷದಿಂದಿದ್ದ ಆ ಧರ್ಮಪುತ್ರನು, ಸೈರಂಧ್ರಿಯಾಗಿದ್ದ ತನ್ನ ಆ ಪ್ರಿಯಮಹಿಷಿಯನ್ನು ನೋಡಿ ವ್ಯಾಜಾಂತರದಿಂದ ಹೀಗೆಂದು ಹೇಳುವನು. ''ಎಲೆ ಸೈರಂಧ್ರಿ! ಭಯಪಡಬೇಡ! ನೀನು ಈಗಲೇ ಈ ಸ್ಥಳವನ್ನು ಬಿಟ್ಟು, ಸುದೇಷ್ಣೆಯ ಅಂತಃಪುರಕ್ಕೆ ಹೊರಟುಹೋಗು. ಈ ರಾಜನು ಧರ್ಮಶೀಲನು. ಮತ್ತು ಪರಲೋಕಭಯವುಳ್ಳವನು. ಸತ್ಯದಲ್ಲಿಯೂ, ಧರ್ಮಮಾರ್ಗದಲ್ಲಿಯೂ ನೆಲೆಗೊಂಡವನು. ಹಾಗಿದ್ದರೂ ನಿನ್ನನ್ನು ರಕ್ಷಿಸದೆ ಹೋದನು. ಆದುದರಿಂದ ನೀನು ರಾಣಿಯ ಬಳಿಗೆ ಹೋಗುವುದುತ್ತಮವು. ನಿನ್ನಂತಹ

ವೀರಪತ್ನಿಗಳು ತಮ್ಮ ಪತಿಯನ್ನು ಅನುಸರಿಸಿ ನಡೆಯುವ ಸಂದರ್ಭದಲ್ಲಿ, ಇಂತಹ ಕಷ್ಟಗಳಿಗೆ ಗುರಿಯಾಗುವುದೇನೋ ಸಹಜವೇ. ಹಾಗೆ ದುಃಖಕ್ಕೆ ಗುರಿಯಾಗಿಯೂ, ಪತಿಶುಶ್ರೂಷೆಯ ಬಲದಿಂದ ಅವರು ತಮ್ಮ ಪತಿಲೋಕವನ್ನು ಜಯಿಸುವರು. ನಿನ್ನ ಪತಿಗಳಾದರೂ ತಮ್ಮ ಕೋಪಕ್ಕೆ ಇದು ಕಾಲವಲ್ಲವೆಂಬುದಕ್ಕಾಗಿಯೇ ಸುಮ್ಮನಿರುವರೆಂದು ನನಗೆ ತೋರಿದೆ. ಅದರಿಂದಲೇ ನಿನ್ನ ಪತಿಗಳಾದ ಗಂಧರ್ವರು ಸೂರ್ಯತೇಜಸ್ಸುಳ್ಳವರಾದರೂ ನಿನ್ನನ್ನು ರಕ್ಷಿಸುವುದಕ್ಕಾಗಿ ಈಗ ಮುಂದೆ ಬಾರದಿರುವರು. ಎಲೆ ನೀಲವೇಣಿ! ಧರ್ಮಶಾಸ್ತ್ರವನ್ನನುಸರಿಸಿ, ಕುಲಸ್ತ್ರೀಯರ ಧರ್ಮಗಳೆಂತವೆಂಬುದನ್ನೂ, ಮೋಕ್ಷಧರ್ಮಗಳನ್ನೊಳಕೊಂಡ ಕಥೆಗಳನ್ನೂ ನೀನು ಕೇಳಿರಬಹುದು. ಸ್ತ್ರೀಯರಿಗೆ ಪತಿಯವಿಷಯದಲ್ಲಿ ಮಾಡುವ ಶುಶ್ರೂಷೆಯೊಂದೇ ಸದ್ಗತಿಗೆ ಕಾರಣವೇ ಹೊರತು, ಅವರಿಗೆ ಬೇರೆ ಯಜ್ಞವಾಗಲಿ, ಶ್ರಾದ್ಧವಾಗಲಿ, ಉಪವಾಸಾದಿ ವ್ರತಗಳಾಗಲಿ ಇರುವುದಿಲ್ಲ. ಸ್ತ್ರೀಯರನ್ನು ಬಾಲ್ಯದಲ್ಲಿ ತಂದೆಯೂ, ಯೌವನಕಾಲದಲ್ಲಿ ಪತಿಯೂ, ವಾರ್ಧಕದಲ್ಲಿ ಮಗನೂ ರಕ್ಷಿಸತಕ್ಕವನು. ಆದುದರಿಂದ ಸ್ತ್ರೀಯರು ಯಾವಾಗಲೂ ಸ್ವತಂತ್ರವಾಗಿರುವುದಕ್ಕೆ ಅರ್ಹರಲ್ಲ. ಎಲೆ ಭೀರು! ಸ್ತ್ರೀಯರು ಶತ್ರುಗಳಿಂದ ಅನೇಕ ಕಷ್ಟಗಳಿಗೆ ಗುರಿಯಾಗಿ ಅವಮಾನಪಡಿಸಲ್ಪಟ್ಟರೂ, ಅವರು ತಮ್ಮ ಪತಿಯಲ್ಲಿ ತಮಗಿರುವ ಭಯಕ್ಕಾಗಿ ಎಂದಿಗೂ ಕೋಪವನ್ನು ಹೊರಪಡಿಸಲಾರರು. ಎಂತಹ ಕಷ್ಟಗಳು ಬಂದರೂ, ತಮ್ಮ ಪತಿಯನ್ನು ಬಿಟ್ಟು ಬೇರೊಂದುವಿಷಯದಲ್ಲಿ ಮನಸ್ಸನ್ನಿಡದೆ, ಶುದ್ಧಾತ್ಮರೆನಿಸಿಕೊಂಡ ಸ್ತ್ರೀಯರೇ ನಿಜವಾಗಿಯೂ ಪುಣ್ಯಲೋಕಗಳನ್ನು ಜಯಿಸುವರು. ಇದು ತಮ್ಮ ಕೋಪಕ್ಕೆ ಕಾಲವಲ್ಲವೆಂದೇ ಸಹಿಸಿಕೊಂಡು ನಿನ್ನ ಪತಿಗಳು ಸುಮ್ಮನಿರುವರು. ಕಾಮರೂಪಿಗಳಾದ ಆ ಗಂಧರ್ವರುಮಾತ್ರ ಕೋಪಗೊಂಡರೆ ವೃತ್ರಾಸುರನನ್ನು ಕೊಂದ ಆ ಮಹೇಂದ್ರನಾದರೂ ಅವರನ್ನಿದಿರಿಸಿ ನಿಲ್ಲಲಾರನು. ಕಾಲನಿರೀಕ್ಷಣೆಗಾಗಿಯೇ ಅವರು ಈಗ ನಿನಗೆ ಬೆಂಬಲವಾಗಿ ಬರಲಿಲ್ಲವೆಂದು ತೋರುವುದು. ಎಲೆ ವಿಶಾಲಾಕ್ಷಿ! ನಿನ್ನ ಪತಿಗಳ ವಿಚಾರವು ಹಾಗಿರಲಿ. ಇದಕ್ಕೆ ಮೊದಲು ನೀನು ಏನಾದರೂ ಸಮಯವನ್ನು (ಪ್ರತಿಜ್ಞೆಯನ್ನು) ಮಾಡಿಕೊಂಡಿರುವೆಯೋ ಎಂಬುದನ್ನು ಜ್ಞಾಪಿಸಿಕೊಂಡು

ಆ ಸಭೆಯಿಂದ ಹಿಂತಿರುಗಿದಳು. ಆನೆಯ ಸುಂಡಿಲಿನಂತೆ ಅಂದವಾದ ತೊಡೆಗಳಿಂದಲೂ, ಜಿಂಕೆಯ ಕಣ್ಣುಗಳಂತಿರುವ ಕಣ್ಣುಗಳಿಂದಲೂ, ನಡುವೆ ಅವಕಾಶವಿಲ್ಲದೆ ಒತ್ತಾಗಿರುವ ಸ್ತನಗಳಿಂದಲೂ ಶೋಭಿಸುವ ಆ ಸುಂದರಾಂಗಿಯು, ನೆಲದ ಧೂಳಿನಿಂದ ತುಂಬಿದ ಮೈಯುಳ್ಳವಳಾಗಿ, ಮೇಘದಿಂದ ಮರೆಸಲ್ಪಟ್ಟ ಚಂದ್ರನ ಕಾಂತಿಯಂತೆ ಕಾಣುತ್ತಿದ್ದಳು. ಯಾವಳಿಗಾಗಿ ಪಾಂಡವರು ತಮ್ಮ ಪ್ರಾಣವನ್ನಾದರೂ ಬಿಡುವರೋ, ಅಂತಹ ದ್ರೌಪದಿಯು ಆ ದುಸ್ಥಿತಿಗೆ ಗುರಿಯಾದುದನ್ನು ನೋಡಿಯೂ ಅವರು ಧರ್ಮನಿರತರಾದುದರಿಂದ, ಸಮುದ್ರವು ತನ್ನ ವೇಲೆಯನ್ನು ಮೀರದಂತೆ ತಮ್ಮ ಪ್ರತಿಜ್ಞೆಯನ್ನು ಮೀರಲಾರದೆ ಸುಮ್ಮನಿದ್ದರು. ಇತ್ತಲಾಗಿ ದ್ರೌಪದಿಯು ದುಃಖದಿಂದ ನಡುಗುವ ಮೈಯುಳ್ಳವಳಾಗಿ, ದೀನಧ್ವನಿಯಿಂದ ರೋದಿಸುತ್ತ, ಸುದೇಷ್ಣೆಯ ಮನೆಗೆ ಬಂದು ಅವಳ ಮುಂದೆ ನಿಂತಳು. ಆಗ ವಿರಾಟಪತ್ನಿಯು ತನಗೇನೂ ತಿಳಿಯದಂತೆ ಕಪಟವನ್ನು ನಟಿಸುತ್ತ ದ್ರೌಪದಿಯನ್ನು ಕುರಿತು “ ಎಲೆ ಸೈರಂಧ್ರಿ! ಏನಿದು? ಕಮಲಕ್ಕೆ ಸಮಾನವಾಗಿ, ಅಂದವಾದ ಹಲ್ಲು, ತುಟಿ, ಕಣ್ಣು, ಮೂಗು, ಇವುಗಳಿಂದ ಶೋಭಿತವಾಗಿ, ಪೂರ್ಣಚಂದ್ರನಿಗೆ ಸಮಾನವಾದ ಕಾಂತಿಯುಳ್ಳ ನಿನ್ನ ಮುಖವು ಕುಂದಿರುವುದೇಕೆ? ಏತಕ್ಕಾಗಿ ನೀನು ಹೀಗೆ ಕಣ್ಣೀರನ್ನು ಒರೆಸಿಕೊಳ್ಳುತ್ತಿರುವೆ? ತೊಂಡೆಯ ಹಣ್ಣನ್ನು ಹೋಲುವ ತುಟಿಯಿಂದಲೂ, ಅಂದವಾದ ಕರಿಯಾಲೆಗಳಿಂದಲೂ ಸೊಗಸುಬೀರುವ ನಿನ್ನ ಮುಖವು ಬಾಷ್ಪಪೂರ್ಣವಾಗಿರುವುದೇಕೆ? ನಿನಗೆ ಯಾರು ಯಾವ ಅಪರಾಧವನ್ನು ಮಾಡಿದರು? ನೀನೇಕೆ ಹೀಗೆ ಅಳುತ್ತಿರುವೆ? ನಿನ್ನಲ್ಲಿ ಅಪರಾಧಿಯಾದ ಯಾವನು ತನ್ನ ಪುತ್ರಕಳತ್ರ ಬಂಧು ಜನಗಳಿಂದ ಅಗಲಿಸಲ್ಪಡಬೇಕಾಗಿದೆ? ನಿನ್ನಲ್ಲಿ ಅಪರಾಧಿಯಾದ ಯಾವನು, ರಾಜನ ಕೋಪಕ್ಕೆ ಪಾತ್ರನಾಗಿ ಮರಣಶಿಕ್ಷೆಗೆ ಗುರಿಯಾಗಬೇಕು? ಬೇಗನೆ ಹೇಳು. ನಿನಗೆ ಹೇಗೆ ಮಾಡಿದರೆ ಪ್ರಿಯವೋ, ಅದನ್ನು ಬೇಗನೆ ತಿಳಿಸು. ಯಾರನ್ನು ನಾವು ತೊರೆದುಬಿಡಬೇಕು? ಯಾವನನ್ನು ವಧಿಸಬೇಕು? ನಿನ್ನಿಷ್ಟದಂತೆಯೇ ಮಾಡುವೆವು ” ಎಂದಳು. ಆಗ ದ್ರೌಪದಿಯು ನಿಟ್ಟುಸಿರನ್ನು ಬಿಡುತ್ತ “ ದೇವೀ! ತಿಳಿದುತಿಳಿದೂ ನನ್ನನ್ನೇಕೆ ಕೇಳುವೆ! ನಿನ್ನ ಸಹೋದರನಾದ ಕೀಚಕನ

ಬಳಿಗೆ ನನ್ನನ್ನು ನಿರ್ಬಂಧಿಸಿ ಕಳುಹಿಸಿದವಳು ನೀನೆಯಲ್ಲವೇ? ತಿರುಗಿ ನೀನು ನನ್ನ ದುಃಖಕಾರಣವನ್ನು ಕೇಳುವೆಯಾ? ನಿನ್ನ ನಿರ್ಬಂಧದಂತೆ ಮಧುವನ್ನು ತರುವುದಕ್ಕಾಗಿ ಇಲ್ಲಿಂದ ಹೋದೊಡನೆ, ಕೀಚಕನು ನನ್ನನ್ನು ನಿರ್ಬಂಧಿಸಿ ರಾಜಸಭೆಯಲ್ಲಿ ರಾಜನ ಕಣ್ಣೆದಿರಾಗಿಯೇ, ನಿರ್ಜನವಾದ ಅಡವಿಯಲ್ಲಿ ಹೇಗೋ ಹಾಗೆ ಹೊಡೆದನು'' ಎಂದಳು. ಆಗ ಸುದೇಷ್ಣೆಯು, "ಎಲೆ ಸುದತಿ! ಕೀಚಕನು ಅಂತಹ ಘಾತುಕಕೃತ್ಯವನ್ನು ನಡೆಸಿದನೆ? ಈಗ ನೀನು ಕೋರಿದಪಕ್ಷದಲ್ಲಿ ಅವನನ್ನು ಈಗಲೇ ಕೊಲ್ಲಿಸುವೆನು. ಅವನು ನನ್ನ ಒಡಹುಟ್ಟಿದವನಾದರೂ ಚಿಂತೆಯಿಲ್ಲ! ಧರ್ಮನಿರತಳಾದ ನಿನ್ನಲ್ಲಿ ಅತಿಕ್ರಮಿಸಿ ನಡೆದು, ಕಾಮಾಂಧನಾಗಿ ನಿನ್ನನ್ನು ಅವಮಾನಪಡಿಸಿದನಲ್ಲವೇ?'' ಎಂದಳು. ಆಗ ದ್ರೌಪದಿಯು "ಸುದೇಷ್ಣೆ! ಆ ಕಷ್ಟವು ನಿನಗೇಕೆ? ದುರಾತ್ಮನಾದ ಆ ಕೀಚಕನು ಯಾರಲ್ಲಿ ಅಪರಾಧವನ್ನು ಮಾಡಿದನೋ, ಅವರೇ ಅವನನ್ನು ಈ ಕ್ಷಣದಲ್ಲಿ ಕೊಲ್ಲುವರೆಂದು ತಿಳಿ. ನಿನ್ನ ಸಹೋದರನು ತನ್ನ ತಪ್ಪಿಗಾಗಿ ಈಗಲೋ, ನಾಳೆಯೋ ಪರಲೋಕವನ್ನು ಹೊಂದುವುದು ನಿಶ್ಚಯವೆಂದು ನನಗೆ ತೋರುವುದು. ನೀನು ಶೀಘ್ರದಲ್ಲಿಯೇ ನಿನ್ನ ಒಡಹುಟ್ಟಿದ ಆ ಕೀಚಕನಿಗೆ ಜೀವಶ್ರಾದ್ಧವನ್ನು ಮಾಡಿಬಿಡಬಹುದು. ಅವನನ್ನು ಈಗಲೇ ಬೇಕಾದ ವಸ್ತುಗಳನ್ನು ಕೊಟ್ಟು ಸಂತೋಷಪಡಿಸು. ಇನ್ನುಮೇಲೆ ಅವನು ಪ್ರಾಣದಿಂದುಳಿಯಲಾರನು. ನನ್ನ ಐದುಮಂದಿ ಪತಿಗಳು ಧರ್ಮಾತ್ಮರು. ಅವರಲ್ಲಿ ಯಾವನೊಬ್ಬನನ್ನಾದರೂ ಜಯಿಸುವುದಕ್ಕೆ ಬೇರೊಬ್ಬರಿಗೂ ಶಕ್ತಿಯಿಲ್ಲ. ಅವರಲ್ಲಿ ಯಾರೊಬ್ಬರಿಗೂ ಬಲದಲ್ಲಿ ಸಾಟಿಯಾದವನು ಬೇರೊಬ್ಬನಿಲ್ಲ. ಅದರಲ್ಲಿಯೂ ಒಬ್ಬನು ಲೋಕಾತಿಶಯವಾದ ಬಲವುಳ್ಳವನು. ಎಂತವರಿಗೂ ದುರ್ಜಯನು. ಅವನುಮಾತ್ರ ಕೋಪಿಸಿಕೊಂಡರೆ, ಈ ಒಂದೇ ರಾತ್ರಿಯಲ್ಲಿ ಈ ಲೋಕವನ್ನೆಲ್ಲ ನಿರ್ಮಾನುಷ್ಯವನ್ನಾಗಿ ಮಾಡಬಲ್ಲನು. ಕಾಮರೂಪಿಯಾದ ಆಗಂಧರ್ವನು ಇದುವರೆಗೂ ತನ್ನ ಕೋಪವನ್ನು ಪ್ರಯತ್ನದಿಂದ ಅಡಗಿಸಿಕೊಂಡೇ ಇದ್ದನು. ಈಗ ಕೀಚಕನು ನನ್ನನ್ನು ಕಾಲಿಂದೊದೆದ ಸಂಗತಿಯು ಆತನಿಗೆ ತಿಳಿದುಹೋಯಿತು. ಇನ್ನುಮೇಲೆ ಪಾಪಿಯಾದ ಆ ಕೀಚಕನು ಪುತ್ರ ಮಿತ್ರ ಬಂಧುಸಹೋದರರೊಡನೆ ಅವನ ಕೈಯಿಂದ

ದಿಂದ ಹಿಡಿದುಕೊಂಡು ಹೋದಾಗ, ತನ್ನ ಪತಿಗಳಿಗೆ ಸಹೋದರಿಯಾದ ದುಶ್ಶಲೆಯನ್ನು ನೋಡಿ, ಅವಳಲ್ಲಿ ಕನಿಕರದಿಂದ ಆ ಸಿಂಧುರಾಜನನ್ನು ಶಪಿಸದೆ ಬಿಟ್ಟುಬಿಟ್ಟಳು. ಇದೇನೋ ನ್ಯಾಯವೇ! ಆದರೆ, ಈಗ ದುರಾತ್ಮನಾದ ಕೀಚಕನು, ತನ್ನನ್ನು ಕಾಲಿಂದ ಒದೆದಾಗಲೂ, ಅವನನ್ನು ಶಪಿಸದಿದ್ದುದೇಕೆ? ಪತಿವ್ರತಾಶಿರೋಮಣಿಯಾದ ಆ ದ್ರೌಪದಿಯು ತೇಜೋರಾಶಿಯೆನಿಸಿರುವಳು. ಧರ್ಮಜ್ಞಳು. ಸತ್ಯವನ್ನೇ ನುಡಿಯತಕ್ಕವಳು. ಅಂತಹ ಆ ದೇವಿಯು, ಪರಪುರುಷನು ತನ್ನ ತುರುಬನ್ನು ಹಿಡಿದು ಎಳೆಯುತ್ತಿರುವಾಗಲೂ, ಶಕ್ತಿಯಿಲ್ಲದ ಸಾಧಾರಣ ಸ್ತ್ರೀಯಂತೆ ಏತಕ್ಕೆ ಸಹಿಸಿಕೊಂಡು ಸುಮ್ಮನಿದ್ದಳು? ಇದಕ್ಕೇನೋ ಪ್ರಬಲ ಕಾರಣವಿರಬೇಕು. ಅದರ ನಿಜಾಂಶವನ್ನು ನಾನು ತಿಳಿಯಬೇಕೆಂದಿರುವೆನು. ದ್ರೌಪದಿಯ ದುಃಖವು ನನ್ನ ಮನಸ್ಸಿಗೆ ಮಹತ್ತಾದ ಸಂಕಟವನ್ನುಂಟುಮಾಡುತ್ತಿದೆ. ಮುನೀಂದ್ರಾ! ದುಷ್ಟನಾದ ಆ ಕೀಚಕನು ಹುಟ್ಟಿದ ವಂಶವಾವುದು? ವಿರಾಟನ ಬಾವಮೈದುನನಾದ ಆತನು ಹಾಗೆ ಬಲಗರ್ವಿತನಾಗಿರುವುದಕ್ಕೆ ಕಾರಣವೇನು? ಆ ನೀಚನು ತಮ್ಮ ಪ್ರಿಯಪತ್ನಿಯನ್ನು ಕಾಲಿಂದೊದುದನ್ನು ಕಣ್ಣಾರೆ ನೋಡಿಯೂ ವೀರರಾದ ಪಾಂಡವರು ಕೋಪವನ್ನಡಗಿಸಿಕೊಂಡಿದ್ದರಲ್ಲವೆ? ಆಮೇಲೆ ಅವರು ಅವನನ್ನು ಏನುಮಾಡಿದರು? ಈ ಅಂಶಗಳೆಲ್ಲವನ್ನೂ ತಿಳಿಸಬೇಕು'' ಎಂದನು. ಅದಕ್ಕಾ ವೈಶಂಪಾಯನ ಮುನಿಯು ಜನಮೇಜಯನನ್ನು ಕುರಿತು ''ರಾಜೇಂದ್ರಾ! ಕೇಳು. ಈಗ ನೀನು ಕೇಳಿದ ಪ್ರಶ್ನೆಯು ಕುರುವಂಶಕ್ಕೆ ಕೀರ್ತಿಕರವಾದುದು. ಅವೆಲ್ಲವನ್ನೂ ವಿವರವಾಗಿ ತಿಳಿಸುವೆನು. ಬ್ರಾಹ್ಮಣ ಸ್ತ್ರೀಯರಲ್ಲಿ ಕ್ಷತ್ರಿಯನಿಗೆ ಹುಟ್ಟಿದವನು ಸೂತನೆನಿಸುವನು. *ಪ್ರತಿಲೋಮ ಸಾಂಕರ್ಯದಿಂದ ಹುಟ್ಟಿದವರಲ್ಲಿ ಆತನುಮಾತ್ರವೇ ದ್ವಿಜನೆನಿಸುವನು. ಹೀಗೆ ಎರಡು ವರ್ಣಗಳ ಸಾಂಕರ್ಯದಿಂದ ಹುಟ್ಟಿದವರಿಗೆ ರಥಕಾರರೆಂದೂ ಹೆಸರು. ಇವರು ಕ್ಷತ್ರಿಯರಿಗಿಂತಲೂ ಸ್ವಲ್ಪ ಕಡಿಮೆಯೆಂದೂ, ವೈಶ್ಯರಿಗಿಂತಲೂ ಮೇಲೆಂದೂ ಹೇಳುವರು. ಪೂರ್ವಕಾಲದ ರಾಜರು ಸೂತರೊಡನೆ ಸಂಬಂಧವನ್ನು

* ಪ್ರತಿಲೋಮಸಾಂಕರ್ಯವೆಂದರೆ ಉತ್ತಮವರ್ಣದ ಸ್ತ್ರೀಯಲ್ಲಿ ಅದಕ್ಕಿಂತ ಕೀಳು ವರ್ಣದ ಪುರುಷನ ಸಂಬಂಧವೆಂದರ್ಥವು.

ಮಾಡಿರುವರು. ಆದರೆ, ಈ ಪ್ರತಿಲೋಮ ಸಾಂಕರ್ಯದಿಂದ ಸೂತಜಾತಿಯವರಿಗೆ ರಾಜರೆಂಬ ಹೆಸರುಮಾತ್ರ ಬರಲಿಲ್ಲ. ಈ ಸೂತರೆಂಬ ಹೆಸರಿನಿಂದಲೇ ಅವರ ದೇಶವು ಸೂತದೇಶವೆನಿಸಿತು. ಆ ಸೂತದೇಶದಲ್ಲಿ ಕೇಕಯನೆಂಬ ರಾಜನು ಪ್ರಸಿದ್ಧನಾಗಿದ್ದನು. ಅವನು ರಾಜಕನ್ಯೆಯಲ್ಲಿ ಹುಟ್ಟಿದವನು. ಸಾರಥ್ಯದಲ್ಲಿ ಎಣೆಯಿಲ್ಲದ ನೈಪುಣ್ಯವುಳ್ಳವನು. ಅವಳಿಗೆ ಮಾಲವಿಯೆಂಬವಳಲ್ಲಿ ಕೀಚಕರೆಂಬ ಹೆಸರುಗೊಂಡ ನೂರಾರುಮಂದಿ ಪುತ್ರರು ಹುಟ್ಟಿದರು. ಅವರಲ್ಲಿ ಅತ್ಯಂತ ಬಲಾಢ್ಯನಾಗಿ, ಎಲ್ಲರನ್ನೂ ಜಯಿಸುವೆನೆಂಬ ದರ್ಪದಿಂದ ಕೊಬ್ಬಿದ ಕೀಚಕನೆಂಬವನೇ ಜ್ಯೇಷ್ಠನು. ಮಾಲವಿಗೆ ತಂಗಿಯೊಬ್ಬಳಿದ್ದಳು. ಅವಳಲ್ಲಿ ಅದೇ ಕೇಕಯರಾಜನಿಗೆ ಸುದೇಷ್ಣೆಯೆಂಬ ಕನ್ಯೆಯೊಬ್ಬಳು ಹುಟ್ಟಿದಳು. ಆಕೆಯನ್ನು ಕೇಕಯರಾಜನು ವಿರಾಟನಿಗೆ ಮದುವೆಮಾಡಿಕೊಟ್ಟನು. *ಕೋಸಲಪುತ್ರಿಯಾದ ಸುರಥೆಯೆಂಬವಳು ಮೃತಳಾಗಿ, ಅವಳ ಮಗನಾದ ಶ್ವೇತನೆಂಬವನು ಎಲ್ಲಿಯೋ ದೇಶಭ್ರಷ್ಟನಾಗಿ ಹೋಗಲು, ಶಂಖನೆಂಬವನೂ ತನ್ನ ಮಾವನ ಮನೆಯಲ್ಲಿ ಸೇರಿಬಿಟ್ಟಮೇಲೆ ವಿರಾಟನು ಸುದೇಷ್ಣೆಯನ್ನು ಕೈಹಿಡಿದು, ದುಃಖವನ್ನು ನೀಗಿದನು. ಸುದೇಷ್ಣೆಯಲ್ಲಿ ವಿರಾಟರಾಜನಿಂದ ವಂಶೋದ್ಧಾರಕನಾದ ಉತ್ತರನೆಂಬ ಕುಮಾರನೂ, ಉತ್ತರೆಯೆಂಬ ಕನ್ಯೆಯೂ ಹುಟ್ಟಿದರು. ಕೀಚಕನಾದರೋ ತನ್ನ ಚಿಕ್ಕಮ್ಮನ ಮಗಳಾದ ಸುದೇಷ್ಣೆಯನ್ನು ಬಹಳವಾಗಿ ಪ್ರೀತಿಸುತ್ತ, ಅವಳ ಪರಿಚರ್ಯೆಯನ್ನು ಮಾಡಿಕೊಂಡು ವಿರಾಟನಲ್ಲಿಯೇ ಸುಖವಾಗಿರುತ್ತಿದ್ದನು. ಮಹಾಪರಾಕ್ರಮಿಗಳಾದ ಕೀಚಕನ ಸಹೋದರರೆಲ್ಲರೂ ತಮ್ಮಣ್ಣನಾದ ಕೀಚಕನನ್ನೇ ಅನುವರ್ತಿಸುತ್ತ, ವಿರಾಟನ ಸೈನ್ಯಗಳನ್ನೂ, ಬೊಕ್ಕಸವನ್ನೂ ಅಭಿವೃದ್ಧಿಗೆ ತಂದರು.

ಎಲೈ ಜನಮೇಜಯರಾಜನೇ ! ಪೂರ್ವದಲ್ಲಿ ಕಾಲೇಯರೆಂಬ ದೈತ್ಯರು ಭೂಮಿಯಲ್ಲಿ ಬಹಳ ಪ್ರಸಿದ್ಧಿಗೊಂಡಿದ್ದರು. ಅವರಲ್ಲಿ ಬಾಣನೆಂಬವನು ಜ್ಯೇಷ್ಠನು. ಆ ಕಾಲೇಯರೇ ಕೀಚಕರಾಗಿ ಹುಟ್ಟಿದರು. ಸಕಲಶಾಸ್ತ್ರ ಸಂಪ

*ಇವಳು ವಿರಾಟನಿಗೆ ಮೊದಲನೆಯ ಹೆಂಡತಿ.

ನ್ನನೂ, ಬಲಾಢ್ಯನೂ, ಭಯಂಕರ ಪರಾಕ್ರಮವುಳ್ಳವನೂ, ನೀತಿಮರ್ಯಾದೆಗಳನ್ನು ಮೀರಿ ನಡೆಯುವ ದುಸ್ವಭಾವವುಳ್ಳವನೂ ಆಗಿದ್ದ ಬಾಣನೆಂಬ ದೈತ್ಯನೇ ಕೀಚಕನಾಗಿ ಹುಟ್ಟಿದನು. ಬಲದರ್ಪಿತನಾದ ಆ ಕೀಚಕನ ಸಹಾಯದಿಂದಲೇ ವಿರಾಟನು, ಪೂರ್ವದಲ್ಲಿ ಇಂದ್ರನು ದೈತ್ಯರನ್ನು ಹೇಗೋ ಹಾಗೆ ಶತ್ರುಗಳನ್ನೆಲ್ಲ ಜಯಿಸಬಲ್ಲವನಾದನು. ಈ ಕೀಚಕನ ಬಲದಿಂದಲೇ ವಿರಾಟನು ಮೇಖಲ, ತ್ರಿಗರ್ತ, ದಶಾರ್ಣ, ಕಶೇರುಕ, ಮಾಲವ, ಯವನ, ಸಿಲಿಂದ, ಕಾಶಿ, ಕೋಸಲ, ಕರದ, ನಿಷಿದ್ಧ, ಶಿವ, ಮುಚುಲಕ, ಪುಳಿಂದ, ಕಳಿಂಗ, ಕಂಕಣ, ಪರಕಂಕಣ ಮೊದಲಾದ ಅನೇಕದೇಶಗಳನ್ನು ಜಯಿಸಿ ವಶಪಡಿಸಿಕೊಂಡನು. ಇವಲ್ಲದೆ, ಶೂರರಾದ ಇನ್ನೂ ಅನೇಕ ದೇಶಾಧಿಗತಿಗಳು ಕೀಚಕನಿಂದ ಯುದ್ಧದಲ್ಲಿ ಪರಾಜಿತರಾಗಿ, ದಿಕ್ಕುದಿಕ್ಕಿಗೂ ಓಡಿಹೋದರು. ಹೀಗೆ ಮಹಾಪರಾಕ್ರಮಿಯಾಗಿ ಬಲದಲ್ಲಿ ಹತ್ತುಸಾವಿರ ಆನೆಗಳಿಗೆ ಸಾಟಿಯೆನಿಸಿಕೊಂಡ ಆ ಕೀಚಕನ ಸಾಹಸಕ್ಕೆ ಮೆಚ್ಚಿ ವಿರಾಟನು ಅವನನ್ನು ತನ್ನ ಸೇನಾಧಿಪತಿಯನ್ನಾಗಿ ನಿಯಮಿಸಿಕೊಂಡನು. ದಶರಥಪುತ್ರನಾದ ರಾಮನಂತೆ ಪರಾಕ್ರಮವುಳ್ಳ ಹತ್ತು ಮಂದಿ ವೀರರು ವಿರಾಟನಿಗೆ ಒಡಹುಟ್ಟಿದವರಾಗಿದ್ದರು. ಅವರೂ ಆ ಕೀಚಕನನ್ನೇ ಅನುಸರಿಸುತ್ತಿದ್ದರು. ಭಯಂಕರವಾದ ಆ ಕೀಚಕನ ಶಕ್ತಿಯು ಈ ವಿಧವಾದುದು. ಇತರಕೀಚಕರೂ ಬಲದಲ್ಲಿ ಅವನಿಗೆ ಸಮನಾಗಿಯೇ ಇದ್ದರು. ಇವರೆಲ್ಲರೂ ತಮ್ಮ ಭಾವನಾದ ವಿರಾಟನ ಮೇಲ್ಮೆಯನ್ನೇ ಮನಃಪೂರ್ವಕವಾಗಿ ಕೋರುತ್ತಿದ್ದರು. ಆ ಕೀಚಕನ ಪರಾಕ್ರಮಕ್ಕೆ ಹೆದರಿಯೇ ವಿರಾಟನು ಅವನು ಮಾಡಿದ ಅಪರಾಧಕ್ಕೆ ಅವನನ್ನು ದಂಡಿಸಲಾರದೆ ಸುಮ್ಮನಿದ್ದನು. ಇನ್ನು ದ್ರೌಪದಿಯು ಆ ಕೀಚಕನನ್ನು ಶಪಿಸದೆ ಬಿಟ್ಟುದಕ್ಕೆ ಕಾರಣವೇನೆಂಬುದನ್ನು ತಿಳಿಸುವೆನು ಕೇಳು. ಋಷಿಗಳು ಯಾವಾಗಲೂ ತಮ್ಮ ತಪಸ್ಸನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಕೋಪವನ್ನು ಅಡಗಿಸಿಕೊಳ್ಳುವರು. ಆದುದರಿಂದಲೇ, ಅವರು ಅಪರಾಧಿಗಳನ್ನು ಶಪಿಸುವುದಿಲ್ಲ. ಆ ತತ್ವವನ್ನು ದ್ರೌಪದಿಯು ತಿಳಿದಿದ್ದುದರಿಂದ, ಆ ಕೀಚಕನನ್ನು ಶಪಿಸದಿದ್ದಳು. ಕ್ಷಮೆಯೇ ಧರ್ಮವು. ಕ್ಷಮೆಯೇ ದಾನವು. ಕ್ಷಮೆಯೇ ಯಜ್ಞವು. ಕ್ಷಮೆಯೇ ತಪಸ್ಸು. ಸತ್ಯಶೀಲಾದಿಗಳೂ ಕ್ಷಮೆಯೇ ಎಂದು ಶ್ರುತಿಗಳು

ಉದ್ಘೋಷಿಸುವುವು. ಕ್ಷಮೆಯುಳ್ಳವರಿಗೆ ಇಹಪರಗಳೆರಡೂ ವಶವಾಗುವುವು. ಇವೆಲ್ಲವನ್ನೂ ತಿಳಿದೇ ದ್ರೌಪದಿಯು ತಾಳ್ಮೆಯನ್ನು ವಹಿಸಿದಳು. ಪಾತಿವ್ರತ್ಯಪ್ರಭಾವದಿಂದ ಆ ದ್ರೌಪದಿಗೆ ಕೀಚಕನನ್ನು ನಿಗ್ರಹಿಸುವ ಶಕ್ತಿಯಿದ್ದರೂ, ತನ್ನ ಪತಿಗಳ ಅಭಿಪ್ರಾಯವನ್ನು ತಿಳಿದು ಸುಮ್ಮನಿದ್ದಳು. ಪಾಂಡವರೂ ಕೂಡ ಆ ದ್ರೌಪದಿಯ ದುಃಖವನ್ನು ನೋಡಿಯೂ, ಲಜ್ಜಿತರಾಗಿ ಕೋಪಾಗ್ನಿಯಿಂದ ಒಳಗೊಳಗೆ ಕುದಿಯುತ್ತಿದ್ದರು. ಸಮುದ್ರವು ವೇಲೆಯಿಂದ ಹೇಗೋ ಹಾಗೆ ಧರ್ಮರಾಜನ ಆಜ್ಞೆಯಿಂದ ನಿವಾರಿತರಾಗಿ ಸುಮ್ಮನಾದರು. ಭೀಮನು ಕೀಚಕನನ್ನು ಆಗಲೇ ಕೊಲ್ಲುವುದಕ್ಕಿದ್ದರೂ ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡು, ಸಂಕಟದಿಂದ ಬಾರಿಬಾರಿಗೂ ನಿಟ್ಟುಸಿರನ್ನು ಬಿಡುತ್ತ, ಅಡಿಗೆಯ ಮನೆಗೆ ಹೋಗಿ, ಆ ರಾತ್ರಿಯೆಲ್ಲ ದುಸ್ಸಹವಾದ ವ್ಯಥೆಯಿಂದ ಹಾಸಿಗೆಯಮೇಲೆ ಹೊರಳಾಡುತ್ತಿದ್ದನು".

ಇದು ಇಪ್ಪತ್ತೊಂದನೆಯ ಅಧ್ಯಾಯವು.



ಕೀಚಕನನ್ನು ಕೊಲ್ಲಿಸಬೇಕೆಂದು ದ್ರೌಪದಿಯು ಅಡಿಗೆಯ ಮನೆಯಲ್ಲಿದ್ದ ಭೀಮಸೇನನ ಬಳಿಗೆ ಹೋಗಿ ತನ್ನ ದುಃಖವನ್ನು ಹೇಳಿಕೊಂಡುದು.

ಎಲೈ ಜನಮೇಜಯರಾಜನೇ! ಕೇಳು! ಆಮೇಲೆ ದ್ರೌಪದಿಯು ಕೀಚಕನಿಂದ ತನಗುಂಟಾದ ಅವಮಾನಕ್ಕಾಗಿ ದುಃಖವನ್ನು ಸಹಿಸಲಾರದೆ, ಅವನನ್ನು ಹೇಗಾದರೂ ಕೊಲ್ಲಿಸಬೇಕೆಂದು ನಿಶ್ಚಯಿಸಿ, ತನ್ನ ವಾಸಸ್ಥಾನಕ್ಕೆ ಬಂದು ಸೇರಿದಳು. ಅಲ್ಲಿ ವಿಧ್ಯುಕ್ತವಾಗಿ ಸ್ನಾನವನ್ನು ಮಾಡಿ, ತನ್ನ ಮೈಯನ್ನೂ, ತನ್ನ ಬಟ್ಟೆಗಳೆರಡನ್ನೂ ಚೆನ್ನಾಗಿ ಶುದ್ಧಿಮಾಡಿಕೊಂಡಳು. ತನಗುಂಟಾದ ಭಂಗವನ್ನು ನೆನೆಸಿಕೊಂಡು ಬಾರಿಬಾರಿಗೂ ಅಳುತ್ತ ಹೀಗೆಂದು ಚಿಂತಿಸುವಳು. "ಅಯ್ಯೋ! ಈಗ ನಾನೇನು ಮಾಡಲಿ! ಎಲ್ಲಿಗೆ ಹೋಗಲಿ? ನನ್ನ ಕಾರ್ಯವು ಹೇಗೆ ನೆರವೇರುವುದು?" ಎಂದು ಚಿಂತಿಸುತ್ತಿರುವಾಗಲೇ, ಅವಳ ಮನಸ್ಸಿಗೆ ಭೀಮನ ನೆನಪು ಬಂದಿತು. ಆಗ ಅವಳು

ಮನಸ್ಸಿನಲ್ಲಿ ಸ್ವಲ್ಪ ಸಮಾಧಾನಮಾಡಿಕೊಂಡು, "ಭೀಮಸೇನನು ಹೊರತು ಬೇರೆ ಯಾವನೂ ನನ್ನ ಉದ್ದೇಶವನ್ನು ನೆರವೇರಿಸುವಹಾಗಿಲ್ಲ. ಇರಲಿ! ಅಲ್ಲಿಯೇ ಹೋಗುವೆನು," ಎಂದು ನಿಶ್ಚಯಿಸಿದಳು. ರಾತ್ರಿಯಾಯಿತು. ಕತ್ತಲೆಯಲ್ಲಿ ಊರೆಲ್ಲವೂ ನಿಶ್ಶಬ್ದವಾಗಿದ್ದಾಗ, ತನ್ನ ಹಾಸಿಗೆಯನ್ನು ಬಿಟ್ಟು ಮೇಲೆದ್ದು, ದುಃಖೋದ್ರೇಕದಿಂದ ದಾರಿಸಾಗುವುದನ್ನೂ ತಿಳಿಯದೆ, ವೇಗದಿಂದ ನಡೆದು ಅಡಿಗೆಯ ಮನೆಗೆ ಬಂದು, ಭೀಮನು ಮಲಗಿದ್ದ ಸ್ಥಳಕ್ಕೆ ಬಂದಳು. ಶುಚಿಸ್ಮಿತೆಯಾದ ಆ ದ್ರೌಪದಿಯು ಒಂದು ದೊಡ್ಡ ಮದದಾನೆಯ ಬಳಿಗೆ ಬರುವ ಹೆಣ್ಣಾನೆಯಂತೆಯೂ, ಒಳ್ಳೆಯ ಬಿಳಿಯ ಬಣ್ಣವುಳ್ಳ ಮೂರು ವರ್ಷದ ಒಂದು ಕಡಸು, ಅರಣ್ಯದಲ್ಲಿ ಉಕ್ಕಿ ಹರಿಯುತ್ತಿರುವ ಒಂದು ನದಿಯ ಪಕ್ಕದಲ್ಲಿ ಮಲಗಿದ ಒಂದು ಮಹಾವೃಷಭವನ್ನು ಸಮೀಪಿಸುವಂತೆಯೂ, ಒಂದು ಹೆಣ್ಣುಸಿಂಹವು ಮಲಗಿದ ಒಂದು ಸಿಂಹದ ಬಳಿಗೆ ಬರುವಂತೆಯೂ, ಅವಳು ಭೀಮಸೇನನ ಹಾಸಿಗೆಯ ಬಳಿಗೆ ಬಂದು, ಮಲಗಿದ್ದ ಆ ತನ್ನ ಪತಿಯನ್ನು ಎಚ್ಚರಗೊಳಿಸುವುದಕ್ಕಾಗಿ ಎರಡು ತೋಳುಗಳನ್ನೂ ನೀಡಿ ಅಪ್ಪಿಕೊಂಡಳು. ಗೋಮತೀತೀರದಲ್ಲಿ ಹುಲುಸಾಗಿ ಬೆಳೆದ ಒಂದು ವೃಕ್ಷವನ್ನು, ಪುಷ್ಪಿತವಾದ ಒಂದು ಬಳ್ಳಿಯು ಹೆಣೆದುಕೊಂಡಂತೆ, ತನ್ನ ಎರಡು ತೋಳುಗಳಿಂದಲೂ ಪತಿಯ ದೇಹವನ್ನಪ್ಪಿ ಅವನನ್ನು ಎಚ್ಚರಿಸುವುದಕ್ಕೆ ಯತ್ನಿಸಿದಳು. ಬೇರೊಬ್ಬ ಮಹಾಲಕ್ಷ್ಮಿಯೋ ಎಂಬಂತಿರುವ ಆ ದ್ರೌಪದಿಯು, ಸಮುದ್ರಶಾಯಿಯಾದ ವಿಷ್ಣುವಿನಂತೆ ಬಿಳಿಯ ಹಾಸಿಗೆಯಮೇಲೆ ಮಲಗಿದ್ದ ಆ ಭೀಮನನ್ನು ತನ್ನ ಮೃದುವಾದ ಕೈಗಳಿಂದೊತ್ತಿ, ಇಂದ್ರನನ್ನು ಶಚಿಯೂ, ಶಿವನನ್ನು ಪಾರ್ವತಿಯೂ, ಬ್ರಹ್ಮನನ್ನು ಸಾವಿತ್ರಿಯೂ, ಷಣ್ಮುಖನನ್ನು ದೇವಸೇನೆಯೂ, ಮಹಾಗಜವನ್ನು ಹೆಣ್ಣಾನೆಯೂ, ಶ್ರೀಮಹಾವಿಷ್ಣುವನ್ನು ಲಕ್ಷ್ಮೀದೇವಿಯೂ ನಿದ್ರೆಯಿಂದೆಚ್ಚರಗೊಳಿಸುವಂತೆ ಎಚ್ಚರಗೊಳಿಸಿದಳು. ವೃಷಭದಂತೆ ಕಣ್ಣುಳ್ಳವನೂ, ದಿಗ್ಗಜದಂತೆ ಆಕಾರವುಳ್ಳವನೂ ಆದ ಆ ತನ್ನ ಪತಿಯನ್ನು ನೋಡಿ, ವೀಣೆಯಂತೆ ಇಂಪಾದ ಕಂಠವುಳ್ಳ ಆ ದ್ರೌಪದಿಯು ಗಾಂಧಾರಸ್ವರದಿಂದ ಹೀಗೆಂದು ಹೇಳುವಳು. "ಭೀಮಸೇನಾ! ಏಳು! ಏಳು! ಮೃತನಂತೆ ಹೀಗೆ ನೆಲದಮೇಲೆ ನಿದ್ರಿಸುತ್ತಿರುವೆ! ನಿನ್ನ

ನಾನು ಮಾಡಬೇಕಾದ ಪ್ರಿಯವೇನು? ತಿಳಿಸು” ಎನಲು ಆಗ ದ್ರೌಪದಿಯು “ಭೀಮಸೇನಾ! ಯುಧಿಷ್ಠಿರನ ಕೈಹಿಡಿದ ಹೆಂಗಸು ಹೇಗೆ ತಾನೇ ದುಃಖವಿಲ್ಲದೆ ಬದುಕುವಳು? ನಾಥಾ! ನೀನಾದರೋ ನನ್ನ ದುಃಖಗಳೆಲ್ಲವನ್ನೂ ತಿಳಿದೇ ಇರುವೆ. ಹಾಗಿದ್ದರೂ ತಿಳಿಯದವನಂತೆ ನನ್ನನ್ನೇಕೆ ಕೇಳುವೆ? ಹಿಂದೆ (ದ್ಯೂತಸಭೆಯಲ್ಲಿ) ಪ್ರಾತಿಕಾಮಿಯು ನನ್ನನ್ನು ದಾಸಿಯೆಂದು ಹೇಳಿ ಸಭೆಗೆ ಎಳೆದುಕೊಂಡುಬಂದುದು ಇನ್ನೂ ನನ್ನ ಮರ್ಮಗಳನ್ನು ಭೇದಿಸುತ್ತಿರುವುದು. ಅದರಮೇಲೆ ದುಶ್ಶಾಸನನು ಹಸ್ತಿನಾಪುರದಲ್ಲಿ ರಜಸ್ವಲೆಯಾಗಿದ್ದ ನನ್ನ ತಲೆಕೂದಲನ್ನು ಹಿಡಿದು, ರಾಜಸಭೆಯಲ್ಲಿ ಕರ್ಣಾದಿ ವೀರಕ್ಷತ್ರಿಯರೂ, ಆ ದುರ್ಯೋಧನನೂ ನನ್ನ ಅತ್ತೆಮಾವಂದಿರೂ, ಭೀಷ್ಮಾಚಾರ್ಯನೂ, ವಿದುರನೂ, ಕೃಪನೂ, ದ್ರೋಣನೂ ಕಣ್ಣಾರೆ ನೋಡುತ್ತಿದ್ದಾಗಲೇ ರಾಜಸಭೆಗೆ ಎಳೆದು ತಂದನು. ಓ ಪಾಂಡುಪುತ್ರಾ! ನೀನು ಜೀವಿಸಿರುವಾಗಲೇ ನನಗೆ ಈ ಅವಸ್ಥೆಯುಂಟಾಯಿತು. ನನ್ನ ಅತ್ತೆ ಮಾವಂದಿರ ಮುಂದೆಯೂ, ನಿನ್ನ ಸಹೋದರರ ಮುಂದೆಯೂ ಆ ಸಭಾಮಧ್ಯದಲ್ಲಿ ನಾನು ತುರುಬಿನಲ್ಲಿ ಹಿಡಿದು ಸೆಳೆಯಲ್ಪಟ್ಟೆನು. ಅದರಿಂದಾಚೆಗೆ ರಾಜ್ಯವನ್ನು ಬಿಟ್ಟು ಕಾಡಿನಲ್ಲಿ ನಿಮ್ಮೊಡನೆ ಅಲೆದಾಡಿದೆನು. ಅಲ್ಲಿ ಎಷ್ಟೋ ಕಷ್ಟಗಳನ್ನೆಲ್ಲ ಅನುಭವಿಸಿದೆನು. ಕಾಡುಗುಡ್ಡಗಳನ್ನೆಲ್ಲ ಸುತ್ತಿದೆನು. ಜಟಾಸುರನಿಂದ ಸಂಭವಿಸಿದ ಕಷ್ಟದಲ್ಲಿ ಮಹತ್ತಾದ ಭಯಕ್ಕೆ ಒಳಗಾದೆನು. ಓ ಪ್ರಭೂ! ದ್ರುಪದಪುತ್ರಿಯಾಗಿ ಜನಿಸಿ, ನಿಮ್ಮನ್ನು ಕೈಹಿಡಿದ ನಾನೊಬ್ಬಳು ಹೊರತು, ನನ್ನಂತಹ ಬೇರೆ ರಾಜಪುತ್ರಿಯು ಯಾವಳು ತಾನೇ ಇಂತಹ ಮಹಾದುಃಖವನ್ನನುಭವಿಸುತ್ತ ಪ್ರಾಣವನ್ನಿಟ್ಟುಕೊಂಡಿರಬಲ್ಲಳು? ಇದಲ್ಲದೆ ನಮ್ಮ ವನವಾಸಕಾಲದಲ್ಲಿ ದುರಾತ್ಮನಾದ ಸೈಂಧವನು ನನ್ನನ್ನು ಎತ್ತಿಕೊಂಡು ಹೋಗಲು ಯತ್ನಿಸಿದನು. ಈ ಎರಡನೆಯ ವಿಪತ್ತನ್ನು ಬೇರೆ ಯಾವಳು ತಾನೇ ಸಹಿಸಬಲ್ಲಳು? ನೀನು ಜೀವಿಸಿರುವಾಗಲೇ ನಾನು ದುರ್ಗಮವಾದ ಅರಣ್ಯಪ್ರದೇಶದಲ್ಲಿದ್ದು ಕಾಲವನ್ನು ಕಳೆಯಬೇಕಾಯಿತು. ಕಲ್ಲುಮುಳ್ಳುಗಳಿಂದ ಕಾಲಿಡಲು ಸಾಧ್ಯವಿಲ್ಲದೆಯೂ, ಅನೇಕ ದುಷ್ಟ ಮೃಗಗಳಿಂದ ನಿಬಿಡವಾಗಿಯೂ ಇದ್ದ ಕಾಡು ಗುಡ್ಡಗಳನ್ನೆಲ್ಲ

ರರು ನಿರ್ಭಯವಾಗಿ ನಿರಾಕರಿಸಿ, ಇತರರನ್ನು ಹಿಂಬಾಲಿಸಿ ನಡೆಯುವರು. ಲೋಕದಲ್ಲಿ ಯಾವನುತಾನೇ ಹೀಗೆ ಪುತ್ರಮಿತ್ರ ಪಶು ಬಂಧುವರ್ಗದೊಡಗೂಡಿದ ರಾಜ್ಯವನ್ನು ಬಿಟ್ಟು, ಕೃಷ್ಣಾಜಿನವನ್ನುಟ್ಟು ಮಹಾರಣ್ಯದಲ್ಲಿ ಜೀವಿಸುವನು? ಯಾವನಲ್ಲಿದ್ದ ಲಕ್ಷೋಪಲಕ್ಷ ನಾಣ್ಯಗಳೂ, ಇತರ ಧನಗಳೂ, ಚಿನ್ನ, ಬೆಳ್ಳಿ, ಬಂಗಾರ, ವಸ್ತ್ರ ವಾಹನಾದಿಗಳೂ, ಎತ್ತು, ಮೇಕೆ, ಕುದುರೆ, ಹೇಸರಗತ್ತೆ ಮುಂತಾದ ಪಶುಧನಗಳೂ, ಸಾವಿರಾರು ವರ್ಷಗಳವರೆಗೆ ಹಗಲು ರಾತ್ರಿ, ಎಡೆಬಿಡದೆ ಜೂಜಾಡಿ ಸೋತರೂ ಮುಗಿಯುವಂತಿರಲಿಲ್ಲವೋ, ಅಂತವನು ಅವೆಲ್ಲವನ್ನೂ ನಿಮಿಷಮಾತ್ರದಲ್ಲಿ ಕಳೆದುಕೊಂಡು, ಮುಂದಾಲೋಚನೆಯಿಲ್ಲದ ಮೂಢಜನದಂತೆ, ತಾನು ಮಾಡಿದ ಕಾರ್ಯಕ್ಕಾಗಿ ಪಶ್ಚಾತ್ತಾಪಪಡುತ್ತ ಈಗ ಬಾಯೆತ್ತಲಾರದಿರುವನು. ಪೂರ್ವದಲ್ಲಿ ಯಾವನು ಮನೆಯಿಂದ ಹೊರಟಾಗ, ಹತ್ತು ಸಾವಿರ ಆನೆಗಳೂ, ಹತ್ತು ಸಾವಿರ ಕುದುರೆಗಳೂ ಹಿಂಬಾಲಿಸಿ ಬರುತ್ತಿದ್ದುವೋ, ಅಂತವನು ಈಗ ಜೂಜಿನಿಂದ ಜೀವಿಸುತ್ತಿರುವನು. ಯಾವನು ಇಂದ್ರಪ್ರಸ್ಥದಲ್ಲಿದ್ದಾಗ, ಅಮಿತ ತೇಜಸ್ಸುಳ್ಳ ಲಕ್ಷಮಂದಿ ಸ್ತ್ರೀಯರು ಉಪಚರಿಸುತ್ತಿದ್ದರೋ, ಯಾವನ ಅಡಿಗೆಮನೆಯಲ್ಲಿ ಸಾವಿರಾರು ಮಂದಿ ದಾಸಿಯರು ಪ್ರತಿದಿನವೂ ಹಗಲು ರಾತ್ರಿ ಕೈಯಲ್ಲಿ ಪಾತ್ರಗಳನ್ನು ಸಿದ್ಧವಾಗಿ ಹಿಡಿದುಕೊಂಡು, ಅತಿಥಿಗಳಿಗೆ ಭೋಜನವನ್ನಿಕ್ಕುತಿದ್ದರೋ, ಯಾವನು ಪ್ರತಿದಿನವೂ ಪ್ರಾತಃಕಾಲದಲ್ಲಿ ಅರ್ಥಿಗಳಾಗಿ ಬಂದವರಿಗೆ ಸಾವಿರಾರು ನಾಣ್ಯಗಳನ್ನು ದಾನಮಾಡುತಿದ್ದನೋ, ಅಂತಹ ಯುಧಿಷ್ಠಿರನು ಈಗ ಜೂಜಾಟದಿಂದ ಸಂಭವಿಸಿದ ಮಹಾನರ್ಥಕ್ಕೆ ಗುರಿಯಾಗಿ ಸಂಕಟಪಡುತ್ತಿರುವನು. ಪೂರ್ವದಲ್ಲಿ ಈ ಯುಧಿಷ್ಠಿರನೇ ತನ್ನ ಅರಮನೆಯಲ್ಲಿ ನಿದ್ರಿಸುತ್ತಿದ್ದಾಗ ಬೆಳಗಾದೊಡನೆ ಇವನನ್ನು ಎಚ್ಚರಗೊಳಿಸುವುದಕ್ಕಾಗಿ ಅನೇಕ *ಸೂತ ಮಾಗಧ ವಂದಿಗಳು, ರತ್ನಕುಂಡಲಾಲಂಕೃತರಾಗಿ ಬಂದು, ಇಂಪಾದ ಕಂಠಸ್ವರದಿಂದ ಸುಪ್ರಭಾತಗಳನ್ನು ಹಾಡುತ್ತಿದ್ದರು. ಮತ್ತು ವಾಲಖಿಲ್ಯರೂ, (ಯಾವಾ

---

* ಸೂತ, ಮಾಗಧ. ವಂದಿಗಳೆಂದರೆ, ಕ್ರಮವಾಗಿ, ಪೌರಾಣಿಕರೆಂದೂ, ವಂಶಾವಳಿಯನ್ನು ಕೀರ್ತಿಸತಕ್ಕವರೆಂದೂ, ಹೊಗಳುಭಟ್ಟರೆಂದೂ ಭೇದವನ್ನು ಗ್ರಹಿಸಬೇಕು.

ಕೊಂಡು ಪ್ರಖ್ಯಾತನಾದ ಈ ಧರ್ಮಪುತ್ರನು ಹೊಟ್ಟೆಹೊರೆಯುವುದಕ್ಕಾಗಿ ತನ್ನ ಸ್ವರೂಪವನ್ನು ಮರೆಸಿಕೊಂಡಿರುವುದನ್ನು ನೋಡಿ ಯಾರಿಗೆ ತಾನೇ ದುಃಖವುಂಟಾಗದಿರುವುದು? ಯಾವನನ್ನು ಹಿಂದೆ ಸಭೆಯಲ್ಲಿ ಸಮಸ್ತ ಭೂಮಿಯೂ ಉಪಾಸಿಸುತ್ತಿದ್ದಿತೋ, ಭರತಕುಲತಿಲಕನಾದ ಆತನು ಈಗ ಮತ್ತೊಬ್ಬನನ್ನು ಉಪಾಸಿಸುತ್ತಿರುವನು ನೋಡು. ಭೀಮಸೇನಾ! ನಾನು ಹೀಗೆ ನಾನಾವಿಧ ಕಷ್ಟಗಳಿಗೀಡಾಗಿ ಅನಾಥೆಯಂತೆ ಶೋಕಸಾಗರ ದಲ್ಲಿ ಮುಳುಗಿಹೋಗುತ್ತಿರುವಾಗಲೂ ನೀನು ನನ್ನನ್ನು ಕಣ್ಣೆತ್ತಿ ನೋಡ ದಿರುವೆಯಲ್ಲಾ! ಈಗ ನಾನು ನಿನ್ನಲ್ಲಿ ತಿಳಿಸಬೇಕೆಂದಿರುವ ಒಂದು ವಿಷ ಯವು ನನಗೆ ಅತ್ಯಂತ ದುಃಖಕರವಾಗಿದೆ. ನಾನು ಹೀಗೆ ಹೇಳುವೆ ನೆಂದು ನೀನು ಅಸಮಾಧಾನಪಡಬಾರದು. ದುಸ್ಸಹವಾದ ದುಃಖದಿಂದ ನಾನು ಇದನ್ನು ನಿನಗೆ ತಿಳಿಸಬೇಕಾಗಿದೆ. ನೀನು ವಿರಾಟನಗರದಲ್ಲಿ ಸುದೇಷ್ಣೆಯನ್ನು ಮುಂದಿಟ್ಟುಕೊಂಡು ನಾವೆಲ್ಲರೂ ನೋಡುತ್ತಿರುವಾ ವಾಗಲೇ, ಹುಲಿ, ಕಾಡೆಮ್ಮೆ, ಸಿಂಹ ಮೊದಲಾದುವುಗಳೊಡನೆ ಹೋರಾಡು ವುದುಂಟಲ್ಲವೆ? ಆಗ ನಿನ್ನನ್ನು ನೋಡಿ ನನ್ನ ಮನಸ್ಸು ಕಲಗುವುದು. ಆಗ ನನ್ನ ಇಂಗಿತ ಚೇಷ್ಟಾದಿಗಳನ್ನು ಕಂಡು ಅಲ್ಲಿದ್ದ ಅಂತಃಪುರ ಸ್ತ್ರೀಯರೆಲ್ಲರೂ ನಗುವರು. ಆಗ ಪ್ರಜ್ಞೆತಪ್ಪಿದವಳಂತೆ ಸ್ತಬ್ಧಳಾಗಿದ್ದ ನನ್ನ ಸ್ಥಿತಿಯನ್ನು ಕಂಡು ಸುದೇಷ್ಣೆಯೂ ಮೇಲೆದ್ದು ಮುಗುಳ್ನಗೆ ಯೊಡನೆ, ಅಲ್ಲಿನ ಇತರ ಸ್ತ್ರೀಯರನ್ನು ಕುರಿತು ಹೀಗೆಂದು ಹೇಳುವಳು. "ಇವರಿಬ್ಬರೂ ನಮ್ಮಲ್ಲಿ ಸೇರಿ ಸೇವೆಮಾಡುತ್ತಿರುವರಲ್ಲವೆ? ಈ ಸಹ ವಾಸಜನ್ಯವಾದ ಸ್ನೇಹದಿಂದ, ಈ ವಲಲನು ಇಲ್ಲಿ ಸಿಂಹ ವ್ಯಾಘ್ರ ಗಳೊಡನೆ ಹೋರಾಡುವುದನ್ನು ಕಂಡು ಇವಳ ಮನಸ್ಸು ಕಲಗುವುದು ಸಹ ಜವೇ! ಆದರೆ ಈ ಸೈರಂಧ್ರಿಯು ಒಳ್ಳೇ ರೂಪವತಿ! ವಲಲನೂ ಸುಂದ ರನು! ಸ್ತ್ರೀಯರ ಮನಸ್ಸನ್ನು ಹೀಗೆಂದು ತಿಳಿಯುವುದೇನೋ ಕಷ್ಟವೇ! ಇವರಿಬ್ಬರೂ ಅನ್ಯೋನ್ಯಾನುರಾಗಕ್ಕೆ ತಕ್ಕವರೆಂದೇ ನನಗೆ ತೋರುವುದು. ಈ ಸೈರಂಧ್ರಿಯು ಸಹವಾಸಜನಿತಪ್ರೇಮದಿಂದ ಯಾವಾಗಲೂ ಆ ವಲಲನ ವಿಚಾರದಲ್ಲಿ ಕನಿಕರವನ್ನೇ ಸೂಚಿಸಿ ಮಾತಾಡುತ್ತಿರುವಳು. ಅಲ್ಲದೆ ಅವರಿಬ್ಬರೂ ಏಕಕಾಲದಲ್ಲಿ ಬಂದು ಸೇರಿ ಇಲ್ಲಿ ವಾಸಮಾಡುತ್ತಿರು

ಸ್ಥಿತಿಯು ಎಷ್ಟು ಶೋಚನೀಯವಾಗಿ ಮಾರ್ಪಟ್ಟಿರುವುದೋ ನೋಡು. ಆದರೂ ನಾನು ಕಾಲವನ್ನಿದಿರುನೋಡುತ್ತ ದುಸ್ಸಹವಾದ ದುಃಖಗಳನ್ನೆಲ್ಲ ಸಹಿಸಿಕೊಂಡಿರುವೆನು. ಮನುಷ್ಯರಿಗೆ ವಿಭವಗಳಾಗಲಿ, ದುಃಖಗಳಾಗಲಿ ಒಂದೇ ವಿಧವಾಗಿರಲಾರದೆಂಬುದನ್ನು ತಿಳಿದೇ ನಾನು, ತಿರುಗಿ ಪತಿಗಳಾದ ನಿಮ್ಮ ಅಭ್ಯುದಯಕಾಲವನ್ನು ನಿರೀಕ್ಷಿಸುತ್ತಿರುವೆನು. ಮತ್ತು ಮನುಷ್ಯನಿಗೆ ಯಾವುದು ಅಪಜಯಕ್ಕೆ ಅಥವಾ ಪರಾಭವಕ್ಕೆ ಕಾರಣವೋ ಅದೇ ಮುಂದೆ ಜಯಕ್ಕೂ ಕಾರಣವಾಗಬಹುದೆಂದು ತಿಳಿದು ನಾನು ಕಾಲವನ್ನು ನಿರೀಕ್ಷಿಸುತ್ತಿರುವೆನು. ಒಮ್ಮೆ ಒಬ್ಬರಿಗೆ ಕೈನೀಡಿ ಕೊಟ್ಟವರೇ ಮತ್ತೊಮ್ಮೆ ಇತರರ ಮುಂದೆ ಕೈನೀಡಿ ಯಾಚಿಸಬೇಕಾಗಿ ಬರುವುದು. ಒಮ್ಮೆ ಒಬ್ಬರನ್ನು ಹೊಡೆದವರು ಮತ್ತೊಮ್ಮೆ ಮತ್ತೊಬ್ಬರಿಂದ ಹೊಡೆಯಿಸಿಕೊಳ್ಳಬೇಕಾಗಿಯೂ ಬರುವುದು. ಒಮ್ಮೆ ಒಬ್ಬರನ್ನು ಕೆಳಕ್ಕೆ ಕೆಡಹಿದವರು, ಮತ್ತೊಮ್ಮೆ ಇತರರಿಂದ ಕೆಡಹಲ್ಪಡುವರು, ಎಂಬೀ ತತ್ವವನ್ನು ನಾನು ಕೇಳಿಬಲ್ಲೆನು. ಇದಲ್ಲದೆ, ದೈವಕ್ಕೆ ಅಸಾಧ್ಯವಾದುದೊಂದೂ ಇಲ್ಲವೆಂದೂ, ಆ ದೈವವನ್ನು ಮೀರಿಹೋಗುವುದು ಎಂಥವರಿಗೂ ಸಾಧ್ಯವಿಲ್ಲವೆಂದೂ ತಿಳಿದೇ ನಾನು, ಮುಂದೆ ನಮಗೂ ಒಳ್ಳೇ ಅದೃಷ್ಟಕಾಲವು ಬರಬಹುದೆಂದು ನಿರೀಕ್ಷಿಸುತ್ತಿರುವೆನು. ಮೊದಲು ಎಲ್ಲಿ ಸಮೃದ್ಧವಾಗಿ ನೀರಿದ್ದಿತೋ, ಮತ್ತೊಮ್ಮೆ ನೋಡುವಾಗ ಅದು ನಿರ್ಜಲಪ್ರದೇಶವಾಗಿ ಕಾಣುವುದುಂಟು. ಇಂತಹ ವಿಷಯಗಳನ್ನು ನೋಡಿಯೇ ನಾನೂ ಕೂಡ, ತಿರುಗಿ ನಮಗೆ ಅಭ್ಯುದಯಕಾಲವು ಬರಬಹುದೆಂದು ನಿರೀಕ್ಷಿಸುತ್ತಿರುವೆನು. ಒಬ್ಬನು ಎಷ್ಟೇ ಜಾಗರೂಕನಾಗಿ ನಡೆದುಕೊಂಡರೂ, ದೈವವಿಪರ್ಯಾಸದಿಂದ ಅವನ ಪ್ರಯೋಜನವು ಕೆಟ್ಟುಹೋಗುವುದುಂಟು. ಹಾಗಿದ್ದರೂ ವಿವೇಕಿಯಾದವನು, ದೈವವನ್ನು ಅನುಕೂಲಪಡಿಸಿಕೊಳ್ಳುವುದಕ್ಕಾಗಿ ತನ್ನ ಪ್ರಯತ್ನವನ್ನು ಬಿಡದೆ ಮಾಡುತ್ತಿರಬೇಕು. ನಾಥಾ! ಈಗ ನಾನು ಸುಮ್ಮನೆ ಈ ಮಾತುಗಳನ್ನಾಡಿದುದರಿಂದ ಪ್ರಯೋಜನವೇನು? ನನ್ನ ಈಗಿನ ದುಃಖವನ್ನು ಲಾಲಿಸಿ ಕೇಳು. ನೀನಾಗಿ ಪ್ರಶ್ನೆಮಾಡದಿದ್ದರೂ ನಾನು ನಿನ್ನಲ್ಲಿ ಹೇಳದೆ ಬಿಡಲಾರೆನು. ನಾನಾದರೋ ಐದು ಮಂದಿ ಪಾಂಡುಕುಮಾರರ ಪಟ್ಟದ ರಾಣಿಯೆನಿಸಿರುವೆನು. ದ್ರುಪದ ರಾಜನ

ಮಗಳು. ಹೀಗಿದ್ದರೂ ನನ್ನ ಸ್ಥಿತಿಯು ಹೀಗಾಗಿದೆ. ಇಂತಹ ದುಸ್ಥಿತಿಯಲ್ಲಿ ನಾನೊಬ್ಬಳುಹೊರತು ಬೇರೆ ಯಾವ ಸ್ತ್ರೀಯು ತಾನೇ ಪ್ರಾಣದಿಂದ ಬದುಕಿರಲು ಇಷ್ಟಪಡುವಳು? ಕೌರವರನ್ನೂ, ಪಾಂಚಾಲರನ್ನೂ, ಪಾಂಡುಪುತ್ರರಾದ ನಿಮ್ಮನ್ನೂ ಬಿಟ್ಟು, ಈ ಶೋಕವು ನನ್ನೊಬ್ಬಳಲ್ಲಿಯೇ ಬಂದು ಸೇರಿದೆ. ಅಷ್ಟು ಮಂದಿ ಸಹೋದರರು! ಅಷ್ಟು ಮಂದಿ ಮಾವಂದಿರು! ಅಷ್ಟು ಮಂದಿ ಮಕ್ಕಳು! ಇಂತಹ ಬಹುಜನ ಬಂಧುವರ್ಗದಿಂದ ಕೂಡಿದ್ದರೂ, ಬೇರೆ ಯಾವ ಹೆಂಗಸು ತಾನೇ ನನ್ನಂತೆ ದುಃಖಭಾಗಿನಿಯಾಗಿರುವಳು? ಭರತಕುಲೋತ್ತಮನೆ! ನಾನು ಬಾಲ್ಯದೋಷದಿಂದ ಬ್ರಹ್ಮದೇವನಿಗೆ ಅಪ್ರಿಯವಾದ ಯಾವುದೋ ಕಾರ್ಯವನ್ನು ನಡೆಸಿರಬೇಕು. ಆದುದರಿಂದಲೇ ಇಂತಹ ದುರವಸ್ಥೆಗೆ ಗುರಿಯಾಗಿರುವೆನು. ಪಾಂಡುಕುಮಾರಾ! ನನ್ನ ಬಣ್ಣವೂ, ನನ್ನ ವಿಕಾರವೇಷವೂ ಹೇಗಿದೆಯೋ ನೋಡು. ಇಂತಹ ವೈವರ್ಣ್ಯವೂ, ಇಂತಹ ವಿಕಾರವೂ, ನನಗೆ ಹಿಂದೆ ವನವಾಸದ ಕಷ್ಟದಶೆಯಲ್ಲಿಯೂ ಉಂಟಾಗಿರಲಿಲ್ಲ. ಭೀಮಸೇನಾ! ಹಿಂದೆ ನಾನು ಎಂತೆಂತಹ ಸುಖಭೋಗಗಳನ್ನು ಅನುಭವಿಸುತ್ತಿದ್ದೆನೋ ಅವೆಲ್ಲ ನಿನಗೂ ತಿಳಿದುದೇ! ಅಂತಹ ನಾನು ಈಗ ದಾಸಿಯಾಗಿರುವೆನು. ನನ್ನ ಮನಸ್ಸಿನಲ್ಲಿ ನೆಮ್ಮದಿಯೇ ಇಲ್ಲದಂತಾಗಿದೆ. ಭಯಂಕರ ಧನುರ್ಧಾರಿಯಾದ ಆ ಕುಂತೀಪುತ್ರನು, ಮಹಾಸಭೆಯಲ್ಲಿ ತಣ್ಣಗಾರಿದ ಬೆಂಕಿಯಂತೆ ನಿರ್ವೀರ್ಯನಾಗಿರುವನು. ಇವೆಲ್ಲ ದೈವಿಕವಾದ ಸಂಭವವೆಂದೇ ನನಗೆ ತೋರುತ್ತಿದೆ. ಪ್ರಾಣಿಗಳ ಗತಿಯನ್ನು ಹೀಗೆಂದು ತಿಳಿಯುವುದಕ್ಕೆ ಮನುಷ್ಯರಿಂದ ಸಾಧ್ಯವಲ್ಲ. ನಿಮಗೆ ಅಚಿಂತಿತವಾಗಿಯೇ ಎಂತಹ ಮಹಾ ಕಷ್ಟಗಳು ಬಂದಿವೆಯೋ ನೋಡು. ಇಂದ್ರಸಮಾನರಾದ ನೀವು ಯಾವ ನನ್ನ ಮುಖಭಾವವನ್ನು ಅತ್ಯಾದರದಿಂದ ನೋಡುತ್ತಿದ್ದಿರೋ, ಅಂತಹ ಉತ್ತಮಸ್ತ್ರೀಯಾದ ನಾನು, ನನಗಿಂತಲೂ ಹೀನರಾದ ಇತರಸ್ತ್ರೀಯರ ಮುಖೇಂಗಿತಗಳನ್ನು ನೋಡುತ್ತಿರಬೇಕಾಗಿದೆ. ಪಾಂಡುಕುಮಾರಾ! ನನ್ನ ಪತಿಗಳಾದ ನೀವೂ, ಪಾಂಚಾಲರೂ ಜೀವದಿಂದಿರುವಾಗಲೇ ನನಗೆ ಬರಬಾರದ ಈ ದುರವಸ್ಥೆಯು ಬಂದಿರುವುದನ್ನು ನೋಡು. ಸಮುದ್ರಾಂತವಾದ ಸಮಸ್ತಭೂಮಿಯೂ, ಹಿಂದೆ ಯಾವಳ ವಶವರ್ತಿಯಾಗಿದ್ದಿತೋ,

ಅಂತಹ ನಾನು ಈಗ ಸುದೇಷ್ಣೆಯ ಕೈಕೆಳಗಿನ ಸೇವಕಿಯಾಗಿರುವೆನು. ಯಾವ ನಾನು ಹೊರಟಾಗ, ಹಿಂದೆ ಮುಂದೆ ಹಲವು ಮಂದಿ ಅನುಚರರು ಬರುತ್ತಿದ್ದರೋ, ಅಂತಹ ನಾನು ಈಗ ಸುದೇಷ್ಣೆಯ ಹಿಂದೆಯೂ ಮುಂದೆಯೂ ತಿರುಗುತ್ತಿರುವೆನು. ಎಲೈ ಕುಂತೀಪುತ್ರನೆ! ಇವೆಲ್ಲಕ್ಕಿಂತಲೂ ದುಸ್ಸಹವಾದ ನನ್ನ ಮತ್ತೊಂದು ದುಃಖವನ್ನು ತಿಳಿಸುವೆನು ಕೇಳು. ಅತ್ತೆಯಾದ ಕುಂತೀದೇವಿಗೆ ಹೊರತು, ನನ್ನ ಸ್ವಂತಕ್ಕಾದರೂ ಶರೀರಾನುಲೇಪನಗಳನ್ನು ಯಾವಾಗಲೂ ಅರೆದು ತಿಳಿಯದ ನಾನು, ಈಗ ಪ್ರತಿದಿನವೂ ಸುದೇಷ್ಣೆಗಾಗಿ ಚಂದನವನ್ನು ಅರೆದುಕೊಡುತ್ತಿರುವೆನು. ನಿನಗೆ ಶುಭವಾಗಲಿ! ಕುಂತೀಕುಮಾರನೆ! ಇದೋ! ನನ್ನ ಕೈಗಳನ್ನು ನೋಡು. ನನ್ನ ಕೈಗಳು ಹೀಗಿದ್ದುದನ್ನು ಹಿಂದೆ ಯಾವಾಗಲೂ ನೋಡಿರುವೆಯಾ?'' ಎಂದು ಹೇಳಿ ಗಂಧವನ್ನರೆದು ಅಲ್ಲಲ್ಲಿ ಪಟ್ಟುಗಟ್ಟಿದ ತನ್ನ ಕೈಗಳೆರಡನ್ನೂ ನೀಡಿ ಭೀಮನ ಕಣ್ಣಮುಂದೆ ತೋರಿಸಿದಳು. ತಿರುಗಿ ಭೀಮನನ್ನು ಕುರಿತು "ಎಲೈ ಕಾಂತನೆ! ಅತ್ತೆಯಾದ ಕುಂತಿಗಾಗಲಿ ನಿಮಗಾಗಲಿ ಯಾವಾಗಲೂ ಭಯಪಡದ ನಾನು, ವಿರಾಟರಾಜನ ಮುಂದೆ ಭಯದಿಂದ ನಡುಗುತ್ತ ನಿಲ್ಲುವೆನು. ನಾನು ಅರೆದ ಚಂದನವು ರಾಜನಿಗೆ ತೃಪ್ತಿಕರವಾಗಿರುವುದೋ, ಇಲ್ಲವೋ. ಅದಕ್ಕೆ ಕಟ್ಟಿದ ಬಣ್ಣವನ್ನು ನೋಡಿ ವಿರಾಟನು ಏನು ಹೇಳುವನೋ, ಎಂದು ಭಯಪಡುತ್ತ, ಆ ರಾಜನ ಮುಂದೆ ಕಿಂಕರಿಯಾಗಿ ನಿಲ್ಲುತ್ತಿರುವೆನು. ನಾನುಹೊರತು ಬೇರೊಬ್ಬರು ಚಂದನವನ್ನರೆದುಕೊಟ್ಟರೆ ವಿರಾಟನಿಗೆ ಅದು ಪ್ರಿಯವಿಲ್ಲವಂತೆ! ನಿನ್ನ ಪತ್ನಿಯಾದ ನನ್ನ ಸ್ಥಿತಿಯು ಹೇಗಾಯಿತು ನೋಡು'' ಎಂದಳು. ಹೀಗೆ ದ್ರೌಪದಿಯು ದುಃಖಕೋಪಗಳಿಂದ ತನ್ನ ಕಷ್ಟಗಳನ್ನು ಭೀಮಸೇನನಿಗೆ ತಿಳಿಸಿ, ಅವನ ಎದೆಯನ್ನೊರಗಿಕೊಂಡು ಮೆಲ್ಲಗೆ ಅಳುವುದಕ್ಕಾರಂಭಿಸಿದಳು. ಹೀಗೆ ದ್ರೌಪದಿಯು ಭೀಮನ ಎದೆಯಮೇಲೆ ಒರಗಿಕೊಂಡು, ಬಾರಿಬಾರಿಗೆ ನಿಟ್ಟುಸಿರನ್ನು ಬಿಡುತ್ತ ಬಾಷ್ಪಗದ್ಗದವಾದ ಮಧುಸ್ವರದಿಂದ ಹೀಗೆಂದು ಹೇಳುವಳು. "ಎಲೈ ಪಾಂಡವೋತ್ತಮಾ! ಭೀಮಸೇನಾ! ನಾನಾದರೋ ಪರಮ ನಿರ್ಭಾಗ್ಯಳು. ಯಾವಾಗಲೋ ಸಾಯಬೇಕಾದ ಸ್ಥಿತಿಯಲ್ಲಿಯೂ ಇನ್ನೂ ಬದುಕಿರುವೆನು. ನಾನು ದೇವತೆಗಳ ವಿಷಯದಲ್ಲಿ ಏನೋ ಮಹಾ

ತಲೆಬಗ್ಗಿಸಿಕೊಂಡು ಮೌನದಿಂದ ಅಡಿಗೆಯ ಮನೆಗೆ ಹೊರಟು ಬಂದು ಬಿಟ್ಟೆನು. ಪ್ರಿಯೇ! ಈಗ ಮತ್ತೊಂದು ಪ್ರತಿಜ್ಞೆಯನ್ನು ತಿಳಿಸುವೆನು ಕೇಳು. ಪೂರ್ವದಲ್ಲಿ ಚಿಗುರಿನಂತೆ ಕೆಂಪಾಗಿದ್ದ ಈ ನಿನ್ನ ಕೈಗಳೆರಡೂ, ಈಗ ಗಂಧವನ್ನರೆಯುವುದರಿಂದ ಪಟ್ಟುಗಟ್ಟಿರುವುದೇನೋ ನಿಜವೇ! ಇದಕ್ಕಾಗಿ ಈ ನನ್ನ ಬಾಹುಬಲವನ್ನೂ, ಅರ್ಜುನನ ಗಾಂಡೀವವನ್ನೂ ಛೀಗಳೆಯಬೇಕಾದುದೂ ಸಹಜವೇ! ಆ ವಿರಾಟಸಭೆಯಲ್ಲಿ ಆಗಲೇ ದೊಡ್ಡ ಯುದ್ಧವನ್ನು ಹೂಡಿ ಸರ್ವನಾಶಮಾಡದೆ ಬಿಟ್ಟು ಬಂದುದಕ್ಕಾಗಿ, ಈಗ ನನಗೆ ಬಹಳವಾಗಿ ಪಶ್ಚಾತ್ತಾಪವುಂಟಾಗಿದೆ. ಆದರೆ, ಈಗಲೂ ಅದನ್ನು ಮಾಡದೆ ಬಿಡುವವನಲ್ಲ. ಆಗ ನಾನು ಸುಮ್ಮನಾದುದಕ್ಕೆ ಧರ್ಮರಾಜನು ನನ್ನನ್ನು ನೋಡಿದುದೇ ಕಾರಣವು. ಅವನ ಅಭಿಪ್ರಾಯವನ್ನು ತಿಳಿದೇ, ನಾನು ಧರ್ಮಕ್ಕೆ ಕಟ್ಟುಬಿದ್ದು ಸುಮ್ಮನಾದೆನು. ನಾವು ರಾಜ್ಯವನ್ನು ಬಿಟ್ಟುಬಂದುದು, ಕೌರವರನ್ನು ಕೊಲ್ಲದಿದ್ದುದು, ಆಗಲೇ ದುರ್ಯೋಧನ, ಕರ್ಣ, ಸುಬಲಪುತ್ರನಾದ ಶಕುನಿ, ಮತ್ತು ಪಾಪಿಯಾದ ಆ ದುಶ್ಯಾಸನ ನೆಂಬಿವರ ತಲೆಗಳನ್ನು ಹಾರಿಸದೆ ಸುಮ್ಮನೆ ಬಂದುದು, ಇವೆಲ್ಲ ಈಗ ಹೃದಯಶಲ್ಯವಾಗಿ ನನ್ನನ್ನು ದಹಿಸುತ್ತಿರುವುದು. ಎಲೆ ಕಲ್ಯಾಣಿ! ಹಿಂದೆ ನಾನು ಹೇಳಿದ ಮತ್ತೊಂದು ವಿಷಯವು ನಿನ್ನ ನೆನಪಿನಲ್ಲಿದೆಯೋ? ಪರಿ ಶುದ್ಧವಾದ ಸರಸ್ವತೀನದಿಯ ತೀರದಲ್ಲಿ ಹಿಂದೊಮ್ಮೆ ನಾವೆಲ್ಲರೂ ಸೇರಿ ದ್ದಾಗ, ನಾನು ನಮ್ಮ ಹಿಂದಿನ ಕಷ್ಟಗಳೆಲ್ಲವನ್ನೂ ನೆನೆಸಿಕೊಂಡು ನಿನ್ನೊ ಡನೆ "ಎಲೆ ಪಾಂಚಾಲಿ! ಇನ್ನು ನಾನು ಧರ್ಮಪುತ್ರನನ್ನಾಗಲಿ, ಅರ್ಜು ನನನ್ನಾಗಲಿ, ಮಾದ್ರೀಪುತ್ರರಾದ ನಕುಲಸಹದೇವರನ್ನಾಗಲಿ, ಅನುಸರಿ ಸುವವನಲ್ಲ" ವೆಂದು ಹೇಳಿದ್ದೆನು. ಅದೇ ನಿಶ್ಚಯದಿಂದ ಆಗ ಅಣ್ಣನಾದ ಯುಧಿಷ್ಠಿರನನ್ನೂ ನಿಂದಿಸಿಬಿಟ್ಟೆನು. ಅಕಾರ್ಯಗಳಿಗೆ ನಾಚುವ ಸ್ವಭಾವ ವುಳ್ಳ ಯುಧಿಷ್ಠಿರನು, ಆಗ ನಾನಾಡಿದ ಕಠಿನವಾಕ್ಯಗಳನ್ನು ಕೇಳಿ, ಧೌಮ್ಯ ಮುನಿಯು ಇದಿರಾಗಿದ್ದಾಗಲೇ ನಯವಾಕ್ಯಗಳಿಂದ ತಮ್ಮಂದಿರಾದ ನಮ್ಮೆ ಲ್ಲರಿಗೂ ಸಮಾಧಾನಗಳನ್ನು ಹೇಳಿದನು. ಎಲೆ ರಾಜಪತ್ನಿ! ನೀನಾದರೋ ಶಾಸ್ತ್ರನಿರ್ಣೀತಗಳಾದ ಸಕಲ ಗುಣಗಳಿಂದಲೂ ಕೂಡಿದವಳು. ಆದುದ ರಿಂದ ಈ ಕಷ್ಟಗಳಿಗೆಲ್ಲ ನೀನು ಧೈರ್ಯಗೆಟ್ಟು ಹೀಗೆ ಅಳಬಾರದು.

ಇದುವರೆಗೆ ಹೇಳಿದ ಸ್ತ್ರೀಯರೆಲ್ಲರೂ ಮಹಾಪತಿವ್ರತೆಯರು. ಒಳ್ಳೇ ರೂಪವತಿಯರು. ಎಲೆ ಕಲ್ಯಾಣಿ! ನೀನೂ ಅವರಂತೆಯೇ ಎಲ್ಲಾ ಗುಣಗಳಿಂದಲೂ ಕೂಡಿದವಳಾಗಿದ್ದು ಹೀಗೆ ಆತುರಪಡಬಾರದು. ತಾಳ್ಮೆಯನ್ನು ವಹಿಸಬೇಕು. ಇನ್ನು ಹೆಚ್ಚು ದಿನಗಳೇನೂ ಇಲ್ಲ. ಇನ್ನು ಮೂವತ್ತುದಿನಗಳು (ಒಂದು ತಿಂಗಳು) ಮಾತ್ರ ಸಹಿಸಿಕೊಂಡಿರು. ಹದಿಮೂರನೆಯ ವರ್ಷವು ಮುಗಿದ ಮಾರನೆಯ ದಿನವೇ, ಪಟ್ಟಮಹಿಷೀಪದವಿಯನ್ನು ಹೊಂದುವೆಯೆಂದು ತಿಳಿ! ಸತ್ಯದಮೇಲೆ ಆಣೆಯಿಟ್ಟು ಹೇಳುವೆನು. ಅದು ಹಾಗೆಯೇ ನಡೆಯುವುದೇ ಹೊರತು, ಬೇರೆಯಾಗಲಾರದು. ಇಂತಹ ಅವಕಾಶವು ದೊರೆತಿರುವಾಗ, ನೀನು ಬೇರೆ ಎಲ್ಲಾ ಉತ್ತಮಸ್ತ್ರೀಯರಿಗೂ ಆದರ್ಶಭೂತೆಯೆಂಬುದನ್ನು ತೋರಿಸಿ ಕೊಡಬೇಕು. ಎಲೆ ಭಾಮಿನಿ! ನೀನು ಶೀಘ್ರದಲ್ಲಿಯೇ ಸಮಸ್ತ ರಾಜಕುಲದ ತಲೆಯಲ್ಲಿ ನಿಲ್ಲುವೆ! ನಿನ್ನ ಪತಿಭಕ್ತಿಯಿಂದಲೂ, ಸಚ್ಚರಿತ್ರದಿಂದಲೂ ನೀನು ದುರ್ಲಭಗಳಾದ ಭಾಗ್ಯಗಳನ್ನು ಹೊಂದುವೆ. ನಮ್ಮ ಪ್ರತಿಜ್ಞೆಯನ್ನು ಮುಗಿಸಿದ ಮೇಲೆ ನೀನು ಉತ್ತಮ ಭೋಗಗಳನ್ನನುಭವಿಸುವೆ. ಆಗ ನೀನೇ ಇವೆಲ್ಲ ದೊಡ್ಡವರಲ್ಲಿ ಭಕ್ತಿಯ ಪ್ರಭಾವದಿಂದ ಬಂದ ಪದವಿಯೆಂಬುದನ್ನು ತಿಳಿದು, ಎಲ್ಲಾ ರಾಜರ ಶಿರಸ್ಸಿನಮೇಲೆ ಮೆರೆಯುವೆ" ಎಂದನು.

ಆಗ ದ್ರೌಪದಿಯು "ಕುಂತೀಕುಮಾರಾ! ನಾನು ದುಃಖದಿಂದ ಹೀಗೆ ವಿಲಪಿಸುವೆನೇ ಹೊರತು, ನಾನು ರಾಜನನ್ನು ನಿಂದಿಸಲಿಲ್ಲ. ದುಃಖವನ್ನು ಸಹಿಸಲಾರದೆ ನಾನು ಹೀಗೆ ಕಣ್ಣೀರನ್ನು ಬಿಡುತ್ತಿರುವೆನು. ಮುಖ್ಯವಾಗಿ ಇದೊಂದು ದುಃಖವು ಮಾತ್ರ ನನಗೆ ಅತ್ಯಂತ ದುಸ್ಸಹವಾಗಿ ನನ್ನನ್ನು ಸದಾ ಸಂಕಟಗೊಳಿಸುತ್ತಿದೆ. ವಿರಾಟನ ಭಾವಮೈದುನನಾದ ಆ ಸೂತಪುತ್ರನು, ತ್ರಿಗರ್ತದೇಶದಲ್ಲಿ ಜನಿಸಿ ಭೋಜನೆಂದೂ, ಕೀಚಕನೆಂದೂ ಕರೆಯಲ್ಪಡುವ ಘಾತುಕನಾದ ಆ ಪಾಪಿಯು, ಆ ಧರ್ಮವಿದೂರನು, ಸಮಸ್ತಕ್ಕೂ ದುರಾಸೆಪಡತಕ್ಕ ಆ ಅವಿವೇಕಿಯು, ನಾನು ಅನಾಥೆಯೆಂದು ತಿಳಿದು ಪ್ರತಿದಿನವೂ ನನ್ನಲ್ಲಿಗೆ ಬಂದು "ನನ್ನ ಹೆಂಡತಿಯಾಗು" ಎಂದು ಬಾರಿಬಾರಿಗೂ ಪೀಡಿಸುತಿದ್ದನಲ್ಲವೆ? ಭೀಮಸೇನಾ! ಓ ಮಹಾ

ಕೀಚಕನು ಬರುವುದಕ್ಕೆ ಮುಂದಾಗಿಯೇ ಭೀಮನು ನಾಟ್ಯ
ಶಾಲೆಗೆ ಬಂದು, ಅಲ್ಲಿನ ಹಾಸಿಗೆಯಮೇಲೆ ಮಲಗಿದ್ದು
ದು. ದ್ರೌಪದಿಯೆಂದು ತಿಳಿದು ಕೀಚಕನು ಭೀಮನ
ಮೈಯನ್ನು ಮುಟ್ಟಿ ಮಾತಾಡಿಸಿದುದು. ಭೀಮ
ನು ಕೀಚಕನನ್ನು ಹಿಡಿದು ಕೊಂದುದು.
ಉಪಕೀಚಕರು ಅಲ್ಲಿಗೆ ಬಂದುದು.

ಆಗ ಭೀಮನು ದ್ರೌಪದಿಯನ್ನು ಕುರಿತು "ಎಲೆ ಭೀರು! ನೀನೇಕೆ ಹೆದರುವೆ? ನೀನು ಹೇಳಿದಂತೆಯೇ ನಡೆಸುವೆನು. ಯಾರಿಗೂ ತಿಳಿಯದಂತೆ ಹೋಗಿ, ಆನೆಯು ಬಿಲ್ವದ ಕಾಯನ್ನು ನೆಗ್ಗುವಂತೆ, ದುರ್ಲಭೆಯಾದ ನಿನ್ನನ್ನು ಬಯಸಿದ ದುರಾತ್ಮನಾದ ಕೀಚಕನ ತಲೆಯನ್ನು ಕುಂಡಲಸಹಿತವಾಗಿ ಕಿತ್ತು ನೆಗ್ಗಿಬಿಡುವೆನು. ಎಲೆ ಪಾಂಚಾಲಿ! ಅಣ್ಣನಾದ ಧರ್ಮರಾಜನ ವಿಷಯವಾಗಿ ಈಗ ನಾನು ಆಡಿದ ಮಾತುಗಳು, ಕೇವಲ ಕೋಪಾವೇಶದಿಂದಲೇಹೊರತು ಮನಃಪೂರ್ವಕವಾದುದಲ್ಲ. ಯಾವನುತಾನೇ ಅಂತಹ ಮಹಾತ್ಮನಾದ ರಾಜನ ಮಾತನ್ನು ಮೀರಿಹೋಗುವನು" ಎಂದನು.

ಓ ಜನಮೇಜಯರಾಜೇಂದ್ರನೆ ಕೇಳು! "ಮಹಾಬಾಹುವಾದ ಭೀಮನು ಹೀಗೆಂದು ಹೇಳಿದಮೇಲೆ, ಅರ್ಧರಾತ್ರಿಯಲ್ಲಿ ಮೇಲೆದ್ದು, ಬಿಳುಪಾದ ಒಂದು ನವಿರುಬಟ್ಟೆಯನ್ನು ಮೈಮೇಲೆ ಹೊದೆದುಕೊಂಡು, ದ್ರೌಪದಿಯನ್ನೂ ತನ್ನ ಹಿಂದೆಯೇ ಕರೆದುಕೊಂಡು ನಾಟ್ಯಶಾಲೆಗೆ ಹೊರಟನು. ಹೀಗೆ ಭೀಮನು ಆ ರಾತ್ರಿ ಕತ್ತಲೆಯಲ್ಲಿ ಕೀಚಕನು ಬರುವುದಕ್ಕೆ ಮೊದಲೇ, ನಾಟ್ಯಶಾಲೆಯನ್ನು ಪ್ರವೇಶಿಸಿ, ಕಾಡಿನಲ್ಲಿ ಸಿಂಹವು ಮೃಗಕ್ಕಾಗಿ ಹೊಂಚುಹಾಕುವಂತೆ, ಅದೃಶ್ಯನಾಗಿ ಕೀಚಕನು ಬರುವುದನ್ನೇ ನಿರೀಕ್ಷಿಸುತ್ತಿದ್ದನು.

ಇತ್ತಲಾಗಿ ಕೀಚಕನಾದರೋ, ಆ ರಾತ್ರಿ ತಲೆಗೆ ಸ್ನಾನವಮಾಡಿ, ಚೆನ್ನಾಗಿ ದೇಹವನ್ನಲಂಕರಿಸಿಕೊಂಡು, ಅತ್ಯಾತುರದಿಂದ ಹೊರಟು, ಬಾಗಿಲುತೆರೆದು, ಜನಶೂನ್ಯವಾಗಿದ್ದ ನಾಟ್ಯಶಾಲೆಗೆ ಬಂದು ಸೇರಿದನು. ಕಾಮಮೋಹಿತನಾದ ಆ ಕೀಚಕನು, ತನಗಾಗಿ ಸೈರಂಧ್ರಿಯು ಆ ಸಂಕೇತ

ಸ್ಥಳಕ್ಕೆ ಮುಂದಾಗಿಯೇ ಬಂದು ಕಾದಿರುವಳೆಂದು ನಂಬಿ, ಸಂತೋಷ ದಿಂದ ನಾಟ್ಯಶಾಲೆಯೊಳಕ್ಕೆ ಪ್ರವೇಶಿಸಿದನು. ಮೂಢನಾದ ಕೀಚಕನು, ಆ ನಾಟ್ಯಶಾಲೆಯಲ್ಲಿದ್ದ ಮಂಚದಮೇಲೆ ತನಗೆ ಮುಂದಾಗಿಯೇ ಬಂದು ಮಲಗಿದ್ದ ಭೀಮನನ್ನು ದ್ರೌಪದಿಯೆಂದು ತಿಳಿದು, ತನ್ನ ಮೃತ್ಯುವನ್ನು ತಾನೇ ತಟ್ಟಿ ಎಬ್ಬಿಸುವಂತೆ ಕೈಯಿಂದ ಮುಟ್ಟಿದನು. ಅಪ್ರತಿಮಪ್ರತಾಪನೂ, ಬಲದರ್ಪಿತನೂ ಆದ ಭೀಮನು, ದ್ರೌಪದಿಗೆ ಉಂಟಾದ ಅವಮಾನಕ್ಕಾಗಿ ಮೊದಲೇ ಕೋಪದಿಂದುರಿಯುತ್ತಿರುವಾಗ, ಕೀಚಕನು ಕಾಲಪ್ರೇರಿತನಾಗಿ ಬಂದು, ಏಕಾಂತದಲ್ಲಿ ಭೀಮನನ್ನು ಸಮೀಪಿಸಿ, ದ್ರೌಪದಿಯು ತನ್ನ ಕೈ ವಶಳಾದಳೆಂಬ ಸಂತೋಷದಿಂದ ಮೈಮರೆತು, ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು.

"ಎಲೆ ಕಲ್ಯಾಣಿ! ಎಲೆ ಶುಚಿಸ್ಮಿತೆ! ನಿನಗಾಗಿ ನಾನು ಅಷ್ಟೊಂದು ಧನವನ್ನು ಕಳುಹಿಸಿರುವೆನು. ಅವೆಲ್ಲವೂ ನಿನಗೇ ಇರಲಿ! ಎಲೆ ಸುಂದರಿ! ನೀನಾಗಿ ನನ್ನನ್ನು ಕಾಮಿಸಿ ಬಂದಿರುವೆ! ಆದುದರಿಂದ ನನ್ನ ಮನೆ ಯೊಳಗಿನ ಸ್ತ್ರೀಯರೆಲ್ಲರೂ ನನ್ನನ್ನು ನೋಡಿ, "ನೀನು ಮಹಾಬಲ ಶಾಲಿ! ನೀನು ಪರಮಸುಂದರನು! ನಿನಗೆ ಸಮಾನನಾದ ಪುರುಷನು ಬೇರೊಬ್ಬನಿಲ್ಲ"ವೆಂದು ನನ್ನನ್ನು ಯಾವಾಗಲೂ ಹೊಗಳುವರು. ಓ ಕಮಲಾಕ್ಷೀ! ನಾನಾದರೂ ಸಾಮಾನ್ಯನೆ! ಸಹಜವಾಗಿಯೇ ಸುಂದರನು. ಇದರಮೇಲೆ ಮಂಗಳಸ್ನಾನವನ್ನು ಮಾಡಿ ಬಂದಿರುವೆನು. ವಿಶೇಷವಾಗಿ ದೇಹವನ್ನಲಂಕರಿಸಿಕೊಂಡಿರುವೆನು. ಸ್ತ್ರೀಯರನ್ನು ವಶಮಾಡಿಕೊಳ್ಳು ವುದರಲ್ಲಿ ನನಗೆ ಚಾತುರ್ಯವುಂಟು. ಆದುದರಿಂದ ನಾನು ಯಾವಾ ಗಲೂ ಸ್ತ್ರೀಯರಿಗೆ ಪ್ರಿಯನೆನಿಸಿರುವೆನು. ನನ್ನ ಅನುಪಮ ಸೌಂದರ್ಯಕ್ಕೆ ಈಗಲೇ ತಕ್ಕ ಫಲವನ್ನು ಕಂಡಂತಾಯಿತು" ಎಂದನು. ಭೀಮನು ಈ ಮಾತುಗಳೆಲ್ಲವನ್ನೂ ಕೇಳಿ, ಅದಕ್ಕೆ ಪ್ರತ್ಯುತ್ತರವಾಗಿ ಕೀಚಕನನ್ನು ಕುರಿತು "ಓ ಸೂತಪುತ್ರಾ! ನೀನು ಹೇಳಿದುದು ನಿಜವೇ! ಅದೃಷ್ಟವಶದಿಂದ ನೀನು ಇಷ್ಟು ಸುಂದರನಾಗಿರುವೆ. ಭಾಗ್ಯವಶದಿಂದಲೇ ನಿನ್ನನ್ನು ನೀನೇ ಹೀಗೆ ಹೊಗಳುವಂತಾಗಿದೆ. ನಿನ್ನ ಸಂಗತಿಯು ಹಾಗಿರಲಿ! ರೂಪದಲ್ಲಿ

ಯೂ, ಗುಣದಲ್ಲಿಯೂ, ಶೀಲದಲ್ಲಿಯೂ ನನ್ನಂತಿರುವ ಸ್ತ್ರೀಯನ್ನು ನೀನೂ ಇದುವರೆಗೆ ನೋಡಿರಲಾರೆ. ನೀನು ನನ್ನ ರೂಪವನ್ನು ನೋಡಿದರೆ ಆಗ ನಿನಗೇ ತಿಳಿಯುವುದು. ಈ ಹೆಂಗಸು ಎಂತಹ ಗುಣವತಿಯೆಂಬುದು ಇನ್ನು ಒಂದು ಮುಹೂರ್ತಕಾಲದಲ್ಲಿ ನಿನಗೆ ತಿಳಿಯುವುದು. ನಿನ್ನ ಇಷ್ಟ ಬಂದಹಾಗೆ ನೀನು ರಮಿಸಬಹುದು. ನನ್ನನ್ನು ಸ್ಪರ್ಶಿಸಿ ನೋಡು. ಇಂತಹ ಅಪೂರ್ವವಾದ ಹೆಂಗಸಿನ ಅಂಗಸ್ಪರ್ಶಸುಖವನ್ನು ನೀನು ಹಿಂದೆ ಯಾವಾಗಲೂ ಅನುಭವಿಸಿರಲಾರೆ. ನೀನು ರಸಿಕನೆಂಬುದೂ ನಿಜವೇ! ನನ್ನ ಸ್ಪರ್ಶಸುಖವೆಂತದೆಂದು ನೀನು ಬೇಗನೆ ತಿಳಿಯುವೆ. ನೀನು ಕಾಮಶಾಸ್ತ್ರ ವಿಧಿಗಳಲ್ಲಿ ಸಮರ್ಥನು. ಸ್ತ್ರೀಯರಿಗೆ ಪರಮಪ್ರಿಯನು. ನಿನಗೆ ಸಮಾನನಾದ ಪುರುಷನು ಬೇರೊಬ್ಬನಿಲ್ಲ'' ಎಂದನು. ಹೀಗೆ ಭೀಮನು ವ್ಯಂಗ್ಯವಾದ ಪ್ರಿಯವಾಕ್ಯಗಳನ್ನು ಹೇಳುತಿದ್ದಹಾಗೆಯೇ ಹಾಸಿಗೆಯನ್ನು ಬಿಟ್ಟಿದ್ದು, ಒಂದಾವರ್ತಿ ದೊಡ್ಡ ಅಟ್ಟಹಾಸವನ್ನು ಮಾಡಿ ''ಎಲ ದುರಾತ್ಮಾ! ಸಿಂಹವು ದೊಡ್ಡ ಆನೆಯನ್ನು ಹಿಡಿದೆಳೆಯುವಂತೆ, ಪರ್ವತದಂತಿರುವ ನಿನ್ನನ್ನು ಎಳೆದುಬಿಸಾಡುವುದನ್ನು ನಿನ್ನ ಸಹೋದರಿಯು ನೋಡಲಿ! ನೀನು ಹತನಾದಮೇಲೆ ಸೈರಂಧ್ರಿಯು ನಿರ್ಭಯವಾಗಿ ಯಾವ ಅಡ್ಡಿಯೂ ಇಲ್ಲದೆ ಸಂಚರಿಸುತ್ತಿರಲಿ! ಆ ಸೈರಂಧ್ರಿಯ ಪತಿಗಳೂ ಇನ್ನುಮೇಲೆ ನಿಶ್ಚಿಂತರಾಗಿ ತಿರುಗುವರು'' ಎಂದು ಹೇಳಿ, ಪುಷ್ಪಗಳಿಂದಲಂಕೃತವಾಗಿ ಸುವಾಸನೆಯಿಂದ ಘಮಘಮಿಸುತ್ತಿದ್ದ ಆ ಕೀಚಕನ ತಲೆಕೂದಲಿಗೆ ಕೈಯಿಕ್ಕಿ ಝಾಡಿಸಿ ಎಳೆದನು. ಆಗ ಭೀಮನು ಮಾಂಸಾಶೆಯಿಂದ ಒಂದು ಮಹಾಸಿಂಹವು ಕ್ಷುದ್ರಮೃಗವನ್ನು ಹಿಡಿದೆಳೆಯುವಂತೆ ಕಾಣುತ್ತಿದ್ದನು. ಕೀಚಕನೂ ಬಲಾಢ್ಯನಾದುದರಿಂದ, ಭೀಮನು ಹಿಡಿದಿದ್ದ ತಲೆಕೂದಲನ್ನು ಬಿಡಿಸಿಕೊಂಡು, ಭೀಮನನ್ನು ತನ್ನ ಕೈಯಿಂದ ಹಿಡಿದುಕೊಂಡನು. ವಸಂತಕಾಲದಲ್ಲಿ ಒಂದು ಹೆಣ್ಣಾನೆಗಾಗಿ ಎರಡು ಗಂಡಾನೆಗಳು ಹೋರಾಡುವಂತೆ, ಪೌರುಷದಲ್ಲಿ ಪ್ರಖ್ಯಾತರಾದ ಭೀಮಕೀಚಕರಿಬ್ಬರಿಗೂ ಬಾಹುಯುದ್ಧವು ಆರಂಭವಾಯಿತು. ಪೂರ್ವದಲ್ಲಿ ವಾನರಶ್ರೇಷ್ಠರಾದ ವಾಲಿಸುಗ್ರೀವರಿಬ್ಬರಿಗೂ ಯುದ್ಧವು ನಡೆದಂತೆ, ಪುರುಷಶ್ರೇಷ್ಠನಾದ ಭೀಮನಿಗೂ, ಸೂತಪುತ್ರರಲ್ಲಿ ಪ್ರಧಾನನೆನಿಸಿದ ಕೀಚಕನಿಗೂ ಪ್ರಬಲಯುದ್ಧವು ಪ್ರವರ್ತಿಸಿತು.

ವಾದರೋ ನಜ್ಜುಗಿಜ್ಜಾಗಿ ಬಿದ್ದಿದ್ದಿತು. ನೀರಿನಿಂದ ಮೇಲಕ್ಕೆಸೆದ ಆಮೆಯಂತೆ ಬಹಳ ಶೋಚನೀಯಾವಸ್ಥೆಯಲ್ಲಿದ್ದ ಆ ಕೀಚಕನ ದೇಹವು ನೋಡುವವರಿಗೆ ಭಯವನ್ನು ಹುಟ್ಟಿಸುವಂತಿತ್ತು. ಅವನ ಸ್ಥಿತಿಯನ್ನು ನೋಡಿದವರೆಲ್ಲರಿಗೂ ರೋಮಾಂಚವು ಹುಟ್ಟಿತು. ಯಾರಿಗೂ ಇದಿರಿಸಲು ಸಾಧ್ಯವಿಲ್ಲದಷ್ಟು ಬಲಗರ್ವಿತನಾಗಿದ್ದ ಕೀಚಕನು, ಇಂದ್ರನಿಂದ ಹತನಾದ ದಾನವನಂತೆ ಭೀಮನಿಂದ ಹತನಾಗಿ ಬಿದ್ದಿರಲು, ನಿಜಸ್ಥಿತಿಯನ್ನು ತಿಳಿಯದ ಜನರು ಗಂಧರ್ವರಿಂದಲೇ ಅವನು ಹತನಾಗಿರಬೇಕೆಂದು ನಿಶ್ಚಯಮಾಡಿಕೊಂಡರು. ಕೀಚಕನಿಗೆ ಅಪರಸಂಸ್ಕಾರಗಳನ್ನು ನಡೆಸುವುದಕ್ಕಾಗಿ ಊರ ಹೊರಗಿನ ಶ್ಮಶಾನಕ್ಕೆ ಸಾಗಿಸಲು ಸಿದ್ಧರಾದರು. ಆಮೇಲೆ ಕೀಚಕನ ತಮ್ಮಂದಿರಾದ ಉಪಕೀಚಕರೆಲ್ಲರೂ ಒಂದಾಗಿ ಸೇರಿ, ಸಮೀಪದಲ್ಲಿ ದ್ರೌಪದಿಯು ಒಂದು ಕಂಬವನ್ನೊರಗಿಕೊಂಡು ಮೌನದಿಂದ ಬಂದು ನಿಂತಿರುವುದನ್ನು ನೋಡಿದರು. ಅವರಲ್ಲಿ ಒಬ್ಬನು ಆ ದ್ರೌಪದಿಯನ್ನು ತನ್ನ ಕಣ್ಣಿನಿಂದಲೇ ಸುಟ್ಟುಬಿಡುವಂತೆ ಕೋಪದಿಂದ ದುರದುರನೆ ನೋಡುತ್ತ, ತನ್ನ ಇತರಸಹೋದರರನ್ನು ಕುರಿತು ನಗುತ್ತ ಹೀಗೆಂದು ಹೇಳುವನು. "ಎಲೈ ಸಹೋದರರೇ! ಅದೋ ನೋಡಿರಿ. ನೀಚೆಯಾದ ಈಕೆಯ ದೆಸೆಯಿಂದಲ್ಲವೇ ನಮ್ಮ ಕೀಚಕನು ಹತನಾದನು. ನಾವು ಈಗಲೇ ಇವಳನ್ನು ಕೊಂದುಬಿಡಬೇಕು. ಹಾಗಿಲ್ಲವೇ ಇವಳನ್ನು ಕೊಲ್ಲದೆ, ನಮ್ಮ ಅಣ್ಣನ ಮೃತದೇಹದೊಡನೆ ಇವಳನ್ನೂ ಸೇರಿಸಿ ಕಟ್ಟಿ, ಎರಡು ಶರೀರಗಳನ್ನೂ ಒಟ್ಟಿಗೆ ಸುಟ್ಟುಬಿಡುವೆವು. ಹೌದು! ಇದೇ ಸರಿಯೆಂದು ತೋರುವುದು. ಏಕೆಂದರೆ, ನಮ್ಮಣ್ಣನು ಇವಳನ್ನು ಕಾಮಿಸಿದ್ದನಲ್ಲವೆ? ಅವನ ಇಷ್ಟಾನುಸಾರವಾಗಿ ಅವನ ಸಂಗಡಲೇ ಇವಳನ್ನು ಸುಟ್ಟುಬಿಟ್ಟರೆ, ಸತ್ತಮೇಲೆಯಾದರೂ ಅವನ ಇಷ್ಟವು ಕೈಗೂಡಿದಂತಾಗುವುದು. ಅವನಿಗೆ ಪ್ರಿಯವಾದ ಈ ಕಾರ್ಯವನ್ನು ನಾವು ಮಾಡಿಯೇ ತೀರಬೇಕು. ಇವಳಾದರೋ ಪರಮದುಷ್ಟೆ. ನಮ್ಮ ಸಹೋದರನಿಗೆ ಇವಳೇ ಮೃತ್ಯು. ಇವಳ ದೆಸೆಯಿಂದಲೇ ನಮ್ಮಣ್ಣನು ಮೃತನಾದನು. ಆದುದರಿಂದ ಇವಳನ್ನು ಪ್ರಾಣದಿಂದುಳಿಸಬಾರದು. ಸಹೋದರರೆ! ನಡೆಯಿರಿ. ರಾಜನಿಗೂ ಈ ಸಂಗತಿಯನ್ನು ತಿಳಿಸಿ, ಅವನ ಅನುಮತಿಯನ್ನು ಪಡೆದು, ಇವ

ಳನ್ನೂ ಕೀಚಕನೊಡನೆ ಸುಟ್ಟುಬಿಡುವೆವು. ಒಂದುವೇಳೆ ನಮ್ಮಣ್ಣನು ಗಂಧರ್ವರಿಂದಲೇ ಕೊಲ್ಲಲ್ಪಟ್ಟಿದ್ದರೂ, ಕೀಚಕನಿಗೆ ಇದರಿಂದ ತೃಪ್ತಿಯುಂಟು,'' ಎಂದರು. ಆಮೇಲೆ ಆ ಸೂತರೆಲ್ಲರೂ ಒಂದಾಗಿ ಸೇರಿ ವಿರಾಟನಬಳಿಗೆ ಬಂದು ಕೈಮುಗಿದು "ಮಹಾರಾಜಾ! ಕೀಚಕನು ಕಾಮರೂಪಿಗಳಾದ ಗಂಧರ್ವರಿಂದ ಹತನಾಗಿ ಬಿದ್ದಿರುವನು. ಸೈರಂಧ್ರಿಯ ದೆಸೆಯಿಂದ ನಿನ್ನೆ ರಾತ್ರಿಯೇ ಅವನು ಸತ್ತನು. ಆದುದರಿಂದ ಸೈರಂಧ್ರಿಯನ್ನೂ ಆ ಕೀಚಕನ ಸಂಗಡಲೇ ಸುಡುವುದಾಗಿರುವೆವು. ಓ ವೀರಾಗ್ರಣಿ! ನಮ್ಮನ್ನು ಯಾವಾಗಲೂ ವಿಶ್ವಾಸದಿಂದ ಕಾಣುತ್ತಿರುವ ನೀನು ಈ ಕಾರ್ಯಕ್ಕೆ ನಮಗೆ ಅನುಮತಿಯನ್ನು ಕೊಡಬೇಕು,'' ಎಂದನು. ವಿರಾಟನಾದರೋ ಆ ಸೂತರ ಪರಾಕ್ರಮವನ್ನು ಚೆನ್ನಾಗಿ ಬಲ್ಲವನಾದುದರಿಂದ, ಅವರ ಇಷ್ಟಕ್ಕೆ ವಿರೋಧಿಸಲಾರದೆ, ನಿಮ್ಮಿಷ್ಟದಂತೆಯೇ ನಡೆಸಿರಿ!'' ಎಂದು ಅನುಮತಿಸಿದನು. ಆಮೇಲೆ ಸೂತರು ಆ ಕೀಚಕನ ದೇಹದೊಡನೆ ದ್ರೌಪದಿಯನ್ನು ಚಟ್ಟದಮೇಲೇರಿಸಿ, ಅವಳ ತಲೆಕೂದಲನ್ನೂ, ಕಾಲುಗಳನ್ನೂ ಬಿಗಿದು ಕಟ್ಟಿ, ಅವಳಕಡೆಗೆ ನೋಡುತ್ತ ತಮ್ಮೊಳಗೆ ಒಬ್ಬರಿಗೊಬ್ಬರು ಹೀಗೆಂದು ಹೇಳುವರು. "ಈ ನೀಚೆಯ ದೆಸೆಯಿಂದಲೇ ಮಹಾಧೀರನಾದ ನಮ್ಮಣ್ಣನು ಕೊಲೆಗೀಡಾದನು. ಆದುದರಿಂದ ಇವಳೂ ಆ ಕೀಚಕನು ಹೋದ ದಾರಿಗೇ ಹೋಗಲಿ. ಇವಳೂ ಆ ಕೀಚಕನೊಡನೆ ಸ್ವರ್ಗಲೋಕವನ್ನು ಸೇರಲಿ'' ಎಂದು ಆರ್ಭಟಿಸುತ್ತಿದ್ದರು. ದ್ರೌಪದಿಯಾದರೋ ಮಹಾಯಶಸ್ವಿನಿ! ಉದಾರಚಿತ್ತಳು! ಉತ್ತಮ ಶೀಲವತಿ! ಅಂತಹ ಮಂಗಳಸ್ವರೂಪಿಣಿಯಾದ ಆಕೆಯನ್ನು ಪರಮದುಷ್ಟನಾದ ಆ ಕೀಚಕನ ಶವದೊಂದಿಗೆ ಸೇರಿಸಿ ಬಿಗಿದಿದ್ದಾಗ, ಅವಳ ಸಂಕಟವನ್ನು ಕೇಳಬೇಕೆ? ಆ ಕಷ್ಟದಿಂದ ತಪ್ಪಿಸಿಕೊಳ್ಳಲಾರದೆ, ಪರವಶೆಯಾಗಿ, ಆ ಚಟ್ಟದಲ್ಲಿ ನೇತಾಡುತ್ತಿದ್ದ ಹಾಗೆಯೇ ಗಟ್ಟಿಯಾಗಿ ರೋದಿಸತೊಡಗಿದಳು. ಹೀಗೆ ಸೂತಪುತ್ರರಿಂದ, ಮೃತಶರೀರದೊಡನೆ ಬಿಗಿಯಲ್ಪಟ್ಟು, ಶ್ಮಶಾನಕ್ಕೆ ಸಾಗಿಸಲ್ಪಡುತಿದ್ದ ಆ ದ್ರೌಪದಿಗೆ, ತನ್ನ ಜೀವದಮೇಲಣ ಆಶೆಯು ಸಂಪೂರ್ಣವಾಗಿ ಬಿಟ್ಟುಹೋಯಿತು. ನಿರ್ದುಷ್ಟೆಯಾದ ಸತೀಮಣಿಯು ಸನಾಥೆಯಾಗಿದ್ದರೂ ಅನಾಥೆಯಂತೆ ರಕ್ಷಣೆಯನ್ನು ಕೋರುತ್ತ, ಮಹಾವಿಪತ್ತಿಗೆ

ಸಿಕ್ಕಿದ ಹೆಣ್ಣಾನೆಯಂತೆ ಅತ್ಯುಚ್ಚಧ್ವನಿಯಿಂದ ಹೀಗೆಂದು ಮೊರೆಯಿಡು ವಳು. "ಅಯ್ಯೋ! ಸೂತಪುತ್ರರು ನನ್ನನ್ನು ಹೀಗೆ ಜೀವದಿಂದ ಸುಡು ವುದಕ್ಕಾಗಿ ಕೊಂಡುಹೋಗುತ್ತಿರುವರಲ್ಲಾ! ಜಯ, ಜಯೇಶ, ವಿಜಯ, ಜಯತ್ಸೇನ, ಜಯದ್ಬಲರೆಂಬ ಆ ಐದುಮಂದಿ ಗಂಧರ್ವರು ನನ್ನ ಮೊರೆ ಯನ್ನು ಕೇಳಬಾರದೆ? ಯಾವ ವೀರರ ಧನುಸ್ಸಿನ ಹೆದೆಯ ಶಬ್ದವು ದುಂದುಭಿಧ್ವನಿಯಂತೆ ಮೊರೆಯುತ್ತಿರುವುದೋ, ಆ ಗಂಧರ್ವರು ನನ್ನ ಮೊರೆಯನ್ನು ಕೇಳಬಾರದೆ? ಸೂತಪುತ್ರರು ನನ್ನನ್ನು ಎಳೆದುಕೊಂಡು ಹೋಗುತ್ತಿರುವರು. ಯಾವ ವೀರರು ಬಿಲ್ಲಿನ ನಾಣನ್ನು ಕೈಯಿಂದ ತಟ್ಟುವ ಧ್ವನಿಯು ಸಿಡಿಲಿನ ಧ್ವನಿಯಂತೆ ಮೊರೆಯುತ್ತಿರುವುದೋ ಅವರು ನನ್ನ ಈ ಮೊರೆಯನ್ನು ಕೇಳಬಾರದೆ? ಈ ಸೂತಪುತ್ರರು ನನ್ನನ್ನು ಎಳೆದು ಕೊಂಡು ಹೋಗುತ್ತಿರುವರಲ್ಲ! ಯುದ್ಧದಲ್ಲಿ ಮಹಾಬಲಾಢ್ಯರಾದ ಯಾರ ಘೋಷವು ಶತ್ರುಭಯಂಕರವಾಗಿ ಕೇಳಿಸುತ್ತಿರುವುದೋ, ಯಾರ ರಥ ಘೋಷವೇ ರಣರಂಗದಲ್ಲಿ ವ್ಯಾಪಿಸಿ ವೈರಿಗಳನ್ನು ನಡುಗಿಸುತ್ತಿರುವುದೋ ಅವರು ನನ್ನ ಮೊರೆಯನ್ನು ಕೇಳಲಿ! ಸೂತಪುತ್ರರು ನನ್ನನ್ನು ಎಳೆದು ಕೊಂಡುಹೋಗುತ್ತಿರುವರು. ಯಾರ ವೀರ್ಯವು ಅಸಮಾನವೆನಿಸಿರು ವುದೋ, ಯಾರ ಕೀರ್ತಿಯೂ ಬಲವೂ, ದೇವೇಂದ್ರನ ಕೀರ್ತಿಗೂ ಬಲಕ್ಕೂ ಸಮಾನವೋ, ಅಂತಹ ರಾಜಸಿಂಹರು ಈ ನನ್ನ ಕಷ್ಟವನ್ನು ತಿಳಿದು ಕಾಪಾಡಲಿ" ಎಂದು ಗಟ್ಟಿಯಾಗಿ ಕೂಗಿಕೊಂಡಳು. ಹೀಗೆ ದೈನ್ಯದಿಂದ ವಿಲಪಿಸುತ್ತಿರುವ ಆ ದ್ರೌಪದಿಯ ವಾಕ್ಯಗಳು ಅಡಿಗೆಯ ಮನೆಯಲ್ಲಿ ಮಲಗಿದ್ದ ಭೀಮನ ಕಿವಿಗೆ ಬಿದ್ದುವು. ಆಗ ಅವನು ಹಿಂದುಮುಂದಾ ಲೋಚಿಸದೆ ಥಟ್ಟನೆ ಹಾಸಿಗೆಯಿಂದ ಮೇಲೆದ್ದು ನಿಂತು "ಸೈರಂಧ್ರೀ! ನಿನ್ನ ಮಾತು ಕಿವಿಗೆ ಬಿದ್ದಿತು. ಸೂತಪುತ್ರರಿಂದ ನಿನಗೆ ಎಂದಿಗೂ ಭಯ ವಿಲ್ಲವೆಂದು ತಿಳಿ" ಎಂದನು. ಹೀಗೆಂದು ಹೇಳಿ ಮಹಾಬಾಹುವಾದ ಭೀಮನು ಸೂತಪುತ್ರರನ್ನು ಕೊಂದುಬಿಡಬೇಕೆಂದೇ ನಿಶ್ಚಯಿಸಿ ಉತ್ಸಾಹ ಗೊಂಡನು. ಒಡನೆಯೇ ಯುದ್ಧಕ್ಕೆ ಸಿದ್ಧನಾಗಿ, ನಡುದಟ್ಟಿಯನ್ನು ಬಿಗಿದು ಕಟ್ಟಿದನು. ಅಡಿಗೆಯ ಮನೆಯಿಂದ ಹೊರಡುವಾಗ ಬಾಗಿಲಿಲ್ಲದ ಕಡೆ ಯನ್ನು ನೋಡಿ, ಅಲ್ಲಿದ್ದ ಒಂದು ಮರವನ್ನೇರಿ, ಪ್ರಾಕಾರದ ಗೋಡೆ

ವ್ರತೆಯನ್ನು ಸಾಮ ದಾನ ಭೇದೋಪಾಯಗಳಿಂದ ತನ್ನ ವಶಮಾಡಿಕೊಳ್ಳು ವುದಕ್ಕೆ ಪ್ರಯತ್ನಿಸಿದನು. ಅವಳು ಅವನ ಮಾತಿಗೆ ಮರುಳಾಗದೆ ನಿರಾಕರಿಸಿ ಬಿಡಲು, ಆ ರಾಕ್ಷಸನು ಬಲಾತ್ಕಾರದಿಂದ ಅವಳನ್ನು ಕೆಳಕ್ಕೆ ಕೆಡಹಿ, ಮೇಲೆಬಿದ್ದು ಭೋಗಿಸುವುದಕ್ಕೂ ಯತ್ನಿಸಿದನು. ಆಗಲೂ ಅವಳು ಧೈರ್ಯವನ್ನು ಬಿಡದೆ, ಅವನ ಅತಿಕ್ರಮಪ್ರವೇಶಕ್ಕೆ ಸ್ವಲ್ಪವೂ ಅವಕಾಶವನ್ನು ಕೊಡಲಿಲ್ಲ. ಆಗಲೂ ಆ ರಾಕ್ಷಸನು, ಅವಳ ಮುಂದೆ ತನ್ನ ಖಡ್ಗವನ್ನೆಳೆದು ಕೊಲ್ಲುವುದಾಗಿ ಭಯಪಡಿಸಿದನು. ಸಾಧ್ವೀಮಣಿಯಾದ ಆಕೆಯು ತನ್ನ ಪ್ರಾಣಗಳನ್ನು ಬಿಡುವುದಕ್ಕೂ ದೃಢನಿಶ್ಚಯ ಮಾಡಿಕೊಂಡು, “ನಾನು ನನ್ನ ಪತಿಯನ್ನೇ ಪರದೇವತೆಯನ್ನಾಗಿ ಭಜಿಸತಕ್ಕವಳೆಂಬುದು ನಿಜವಾಗಿದ್ದರೆ, ನಾನು ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದ ಹಿರಿಯರನ್ನು ಸಂತೋಷಪಡಿಸುವವಳಾಗಿದ್ದರೆ, ಆ ಸತ್ಯದಿಂದ ನನ್ನ ಶರೀರದ ಸ್ವಲ್ಪ (ಮಧ್ಯ) ಭಾಗವು ದೃಢವಾದ ಕಲ್ಲಾಗಲಿ” ಎಂದು ಪ್ರತಿಜ್ಞೆಮಾಡಿದಳು. ಅವಳ ಬಾಯಿಂದ ಈ ಮಾತು ಮುಗಿಯುವಷ್ಟರಲ್ಲಿಯೇ ಅವಳ ದೇಹದಲ್ಲಿ ಹೊಕ್ಕುಳಿನಿಂದ ಕೆಳಕ್ಕೆ ಮೊಳಕಾಲಿಂದ ಮೇಲಕ್ಕಿರುವ ಭಾಗವೆಲ್ಲವೂ ಕಲ್ಲಿನಂತಾಯಿತು. ಆಮೇಲೆ ಆ ರಾಕ್ಷಸನು ನಿರಾಶನಾಗಿ, ಕೋಪದಿಂದ ಕತ್ತಿಯನ್ನೆತ್ತಿ ಅವಳ ತಲೆಯನ್ನು ಕಡಿದುಬಿಟ್ಟನು. ಆಮೇಲೆ ಅವಳೇ ಪಾರ್ವತಿಗೆ ನಖಮಾಂಸಗಳಂತೆ ಅತ್ಯಂತ ಪ್ರಿಯಸಖಿಯಾದ ಜಯೆಯೆಂಬ ಸಖಿಯಾಗಿ ಹುಟ್ಟಿದಳು. ಆದುದರಿಂದ ಓ ಪಾಂಚಾಲೀ! ಪತಿವ್ರತೆಯರಿಗೆ ಒಮ್ಮೊಮ್ಮೆ ದುಃಖವು ಪ್ರಾಪ್ತವಾದರೂ ಆ ದುಃಖವು ಅಲ್ಪವು. ಅವರಿಗೆ ಉಂಟಾಗುವ ಸುಖವು ಮಹತ್ತಾದುದು. ಎಲೆ ಭೀರು! ಯಾರು ನಿನ್ನನ್ನು ಹಿಂಸೆಗೊಳಿಸುವರೋ ಅಂತವರ ಗತಿಯೆಲ್ಲ ಹೀಗೆಯೇ ಎಂದು ತಿಳಿ! ಇನ್ನು ನೀನು ಹಿಂತಿರುಗಿ ನಗರಕ್ಕೆ ಹೋಗು. ಇನ್ನು ನಿನಗೇನೂ ಭಯವಿರದು. ನೀನು ಬೇರೆ ದಾರಿಯಿಂದ ಸುದೇಷ್ಣೆಯ ಮನೆಗೆ ಹೋಗು. ನಾನು ಬೇರೊಂದು ದಾರಿಯಿಂದ ವಿರಾಟನ ಅಡಿಗೆಯ ಮನೆಗೆ ಹೋಗಿ ಸೇರುವೆನು. ಈ ರಾತ್ರಿಯಲ್ಲಿ ಹೀಗೆ ನಾವಿಬ್ಬರೂ ಇಲ್ಲಿದ್ದ ಸಂಗತಿಯು ಜನಗಳಿಗೆ ತಿಳಿಯದಂತೆ ನಾವು ನಡೆದುಕೊಳ್ಳಬೇಕು” ಎಂದನು.

ಓ ಜನಮೇಜಯರಾಜನೆ ಕೇಳು! ಭೀಮನಿಂದ ಹೀಗೆ ಸಮಾಧಾನಗೊಳಿಸಲ್ಪಟ್ಟ ಆ ದ್ರೌಪದಿಯು, ತನ್ನನ್ನು ಕಾಮಿಸಿದ ನಹುಷನು ಅಗಸ್ತ್ಯಶಾಪಕ್ಕೀಡಾದಮೇಲೆ, ಶಚೀದೇವಿಯು ನೆಮ್ಮದಿಯಿಂದ ಸ್ವರ್ಗವನ್ನು ಸೇರಿದಹಾಗೆ ಸುದೇಷ್ಣೆಯ ಗೃಹವನ್ನು ಪ್ರವೇಶಿಸಿದಳು. ಅತ್ತಲಾಗಿ ಬಲಾಢ್ಯನಾದ ಆ ಭೀಮಸೇನನೂ ಕೂಡ, ರಾಮನು ರಾಕ್ಷಸರನ್ನು ಹೇಗೋ ಹಾಗೆ, ಆ ಉಪಕೀಚಕರೆಲ್ಲರನ್ನೂ ನಿಶ್ಶೇಷವಾಗಿ ಕೊಂದಮೇಲೆ, ಶತ್ರುಜಯದಿಂದ ಉತ್ಸಾಹಗೊಂಡ ಮನಸ್ಸುಳ್ಳವನಾಗಿ, ಅಲ್ಲಿಂದ ಹಿಂತಿರುಗಿ ನಗರಪ್ರವೇಶವನ್ನು ಮಾಡಿದನು. ಅತ್ತಲಾಗಿ ಭೀಮನಿಂದ ಹತರಾದ ನೂರೈದುಮಂದಿ ಕೀಚಕರೂ, ಶ್ಮಶಾನಸಮೀಪದಲ್ಲಿ ಮೃತರಾಗಿ ಬಿದ್ದಿರಲು, ಆ ಪ್ರದೇಶವು ಮರಗಳನ್ನು ಕಡಿದುಹಾಕಿದ ಕಾಡಿನಂತೆ ಕಾಣಿಸುತಿತ್ತು. ವಿರಾಟ ಸೇನಾಪತಿಯಾಗಿದ್ದ ಪ್ರಧಾನಕೀಚಕನೂ ಸೇರಿ, ನೂರಾರುಮಂದಿ ಕೀಚಕರು ಸತ್ತಸುದ್ದಿಯನ್ನು ಕೇಳಿದಾಗಲೂ ಕೀಚಕನ ಬಂಧುಗಳು ಗಂಧರ್ವರ ಭಯಕ್ಕಾಗಿ ಬಾಯೆತ್ತದೆ ಮೌನದಿಂದಿದ್ದರು. ಅಲ್ಲಿ ಬಂದವರಿಗೆ ಸೈರಂಧ್ರಿಯ ಕಡೆಗೆ ಕಣ್ಣೆತ್ತಿ ನೋಡುವುದಕ್ಕೂ ಧೈರ್ಯವಿಲ್ಲದಂತಾಯಿತು. ವಿರಾಟನಗರದಲ್ಲಿದ್ದ ಸ್ತ್ರೀಪುರುಷರೆಲ್ಲರೂ ಬೆಳಗ್ಗೆ ಬಂದು, ನೂರಾರುಮಂದಿ ಕೀಚಕರು ಸತ್ತುಬಿದ್ದಿರುವುದನ್ನು ನೋಡಿ ಆಶ್ಚರ್ಯಪಡುತಿದ್ದರೇಹೊರತು, ಬಾಯೆತ್ತಿ ಯಾರೊಬ್ಬರೂ ಯಾವ ಮಾತನ್ನೂ ಆಡಲಿಲ್ಲ.

ಇದು ಇಪ್ಪತ್ತೇಳನೆಯ ಅಧ್ಯಾಯವು.

---

ಪುರಜನರು ಉಪಕೀಚಕರ ವಧವನ್ನು ವಿರಾಟನಿಗೆ ತಿಳಿಸಿ, ಸೈರಂಧ್ರಿಯನ್ನು ಪಟ್ಟಣದಿಂದ ಹೊರಡಿಸಲು ಪ್ರೇರಿಸಿದುದು. ಈ ರಾಜಾಜ್ಞೆಯನ್ನು ಸುದೇಷ್ಣೆಯು ದ್ರೌಪದಿಗೆ ಹೇಳಲು, ದ್ರೌಪದಿಯು ಒಂದು ತಿಂಗಳ ಅವಧಿಯನ್ನು ಕೇಳಿದುದು.

ಭೀಮನಿಂದ ಹತರಾಗಿ ಬಿದ್ದ ಆ ಸೂತರನ್ನು ನೋಡಿ, ಪುರಜನರೆಲ್ಲರೂ ಒಂದುಗೂಡಿ ವಿರಾಟನ ಬಳಿಗೆ ಓಡಿಬಂದು, ಅವನಲ್ಲಿ ಹೀಗೆಂದು

ತಿಳಿಸುವರು. “ರಾಜಾ! ನೂರಾರುಮಂದಿ ಸೂತಪುತ್ರರು ಗಂಧರ್ವ ನಿಂದ ಹತರಾಗಿ, ವಜ್ರಾಹತಗಳಾದ ಪರ್ವತಗಳಂತೆ ಬಿದ್ದಿರುವರು. ಈಗ ಲೇ ಆ ಘೋರವನ್ನು ನೋಡಿಬಂದೆವು. ಆ ಸೈರಂಧ್ರಿಯು ಅವರಿಂದ ಹೇಗೋ ತಪ್ಪಿಸಿಕೊಂಡು, ತಿರುಗಿ ನಮ್ಮ ಈ ಊರಿನ ಕಡೆಗೆ ಬರುತ್ತಿರು ವಳು. ಇನ್ನು ನಮ್ಮೂರಿನ ಜನರೆಲ್ಲ ಮೊತ್ತಕ್ಕೆ ಪ್ರಾಣದಿಂದುಳಿಯುವುದೇ ಸಂದೇಹವೆನಿಸಿದೆ. ಆ ಸೈರಂಧ್ರಿಯೋ ಅತ್ಯಂತ ರೂಪವತಿ! ಅವಳ ಗಂಡಂದಿರಾದ ಗಂಧರ್ವರೋ ಮಹಾಬಲಾಢ್ಯರು. ರೂಪವತಿಯರಾದ ಹೆಂಗಸರನ್ನು ಕಂಡಾಗ ಪುರುಷರಿಗೆ ಮೋಹವುಂಟಾಗುವುದೇನೋ ಸಹ ಜವೇ! ಇದರಲ್ಲಿ ಸಂದೇಹವಿಲ್ಲ. ಆದುದರಿಂದ ಈ ಸೈರಂಧ್ರಿಯ ದೆಸೆ ಯಿಂದ ನಮ್ಮ ಪಟ್ಟಣಕ್ಕೆ ಇನ್ನುಮುಂದೆಯಾದರೂ ಅಪಾಯವೇನೂ ಬಾರದಂತೆ, ಈಗಲೇ ಎಚ್ಚರತೆಗೆದುಕೊಳ್ಳುವುದು ಯುಕ್ತವು. ಸರ್ವಾಂಗ ಸುಂದರಿಯಾಗಿ, ರೂಪಲಾವಣ್ಯಗಳಿಂದ ಶೋಭಿಸುತ್ತಿರುವ ಆ ಸೈರಂಧ್ರಿ ಯನ್ನು ಕಂಡೊಡನೆ, ಪುರುಷರಿಗೆ ಅವಳನ್ನು ಎವೆಮುಚ್ಚದೆ ನೋಡುತ್ತಿರ ಬೇಕೆಂಬ ಆಸೆ ಹುಟ್ಟದಿರದು. ಅಂತವರ ದೃಷ್ಟಿಯನ್ನೂ, ಮನಸ್ಸನ್ನೂ ತಪ್ಪಿಸುವುದಕ್ಕೆ ಯಾರಿಂದತಾನೇ ಸಾಧ್ಯವು! ಅಂತಹ ರೂಪವತಿಯಾದ ಸೈರಂಧ್ರಿಯನ್ನು ನೋಡಿ, ಯಾವ ಪುರುಷನು ಸ್ವಲ್ಪವಾದರೂ ಮನಸ್ಸಿ ನಲ್ಲಿ ಕಾಮಿಸುವನೋ, ಅವನಿಗೆ ಗಂಧರ್ವರಿಂದ ಮರಣವು ನಿಶ್ಚಯವು. ಆದುದರಿಂದ ಈಕೆಯನ್ನು ನಿನ್ನ ಅಂತಃಪುರದಿಂದ ಅಟ್ಟಿಬಿಡುವುದೇ ಮೇಲು. ಮುಖ್ಯವಾಗಿ ಇಂತವಳು ನಮ್ಮ ನಗರದಲ್ಲಿಯೇ ಇರದಂತೆ ಮಾಡುವುದೊಳ್ಳೆಯದು. ಯಮನೇ ಈ ಸೈರಂಧ್ರಿಯಲ್ಲಿ ಪ್ರವೇಶಿಸಿ, ನಮ್ಮಾ ಪಟ್ಟಣವನ್ನು ನಾಶಮಾಡುತ್ತಿರುವನೆಂಬುದರಲ್ಲಿ ಸಂದೇಹವಿಲ್ಲ” ಎಂದು ಬಿನ್ನವಿಸಿದರು. ಅವರ ಮಾತನ್ನು ಕೇಳಿ ವಿರಾಟನು ತನ್ನ ಸೇನಾ ಪತಿಯನ್ನು ಕರೆಸಿ, “ಕೀಚಕರೆಲ್ಲರಿಗೂ ಅಪರಕ್ರಿಯೆಗಳನ್ನು ಮಾಡಿಸು. ಅಗ್ನಿಯನ್ನು ಚೆನ್ನಾಗಿ ಜ್ವಲಿಸುವಂತೆ ಮಾಡಿ, ವಾಸನಾದ್ರವ್ಯಗಳನ್ನು ಸೇರಿಸಿ, ಅದರಲ್ಲಿ ಆ ಕೀಚಕರೆಲ್ಲರನ್ನೂ ದಹಿಸಬೇಕು” ಎಂದು ಆಜ್ಞಾಪಿಸಿ ದನು. ರಾಜನು ಹೀಗೆಂದು ಹೇಳಿ ವ್ಯಸನಪೀಡಿತನಾಗಿ, ಅಲ್ಲಿಂದ ಅಂತಃ ಪುರಕ್ಕೆ ಹೋಗಿ, ಅಲ್ಲಿ ತನ್ನ ಪಟ್ಟಮಹಿಷಿಯಾದ ಸುದೇಷ್ಣೆಯನ್ನು ನೋಡಿ,

"ಸುದೇಷ್ಣೆ! ಆ ಸೈರಂಧ್ರಿಯು ಇಲ್ಲಿಗೆ ಬರುವಳಲ್ಲವೆ? ಬಂದರೆ, ಅವಳಿಗೆ ನಾನು ಹೇಳಿದುದಾಗಿ ಹೀಗೆಂದು ನೀನು ತಿಳಿಸು. 'ಸೈರಂಧ್ರೀ! ನಿನಗೆ ಶುಭವಾಗಲಿ! ಇನ್ನು ನೀನು ಇಲ್ಲಿಂದ ಬಿಟ್ಟುಹೋಗಿ, ನಿನ್ನ ಇಷ್ಟಬಂದಕಡೆಯಲ್ಲಿ ಸಂಚರಿಸು. ಗಂಧರ್ವರಿಂದ ಬರಬಹುದಾದ ಅಪಾಯಕ್ಕಾಗಿ ರಾಜನು ಬಹಳವಾಗಿ ಹೆದರುತ್ತಿರುವನು. ಗಂಧರ್ವರಿಂದ ರಕ್ಷಿತೆಯಾದ ನಿನ್ನಲ್ಲಿಗೆ ಬಂದು ಅವನು ಈ ಮಾತನ್ನು ತಾನಾಗಿ ನಿನ್ನೊಡನೆ ಹೇಳುವುದಕ್ಕೆ ಹೆದರುವನು. ನಮ್ಮಂತಹ ಹೆಂಗಸರು ನಿನ್ನೊಡನೆ ಮಾತನಾಡುವುದರಲ್ಲಿ ತಪ್ಪಿಲ್ಲ. ಆದುದರಿಂದ ನಿನಗೆ ಈ ವಿಷಯವನ್ನು ತಿಳಿಸುವಂತೆ ಹೇಳಿರುವನು,' ಎಂದು ಹೇಳು" ಎಂದನು.

ಇಷ್ಟರಲ್ಲಿ ಇತ್ತಲಾಗಿ ರಾಜಸೇವಕರು ಚೆನ್ನಾಗಿ ಚಿತೆಯನ್ನುರಿಸಿ, ಆ ಒಂದೇ ಅಗ್ನಿಯಲ್ಲಿ ಕೀಚಕರನ್ನೆಲ್ಲ ಸರ್ವವಿಧ ಸಂಸ್ಕಾರಗಳಿಂದ ದಹನಮಾಡಿದರು. ಇತ್ತಲಾಗಿ ದ್ರೌಪದಿಯು ಭೀಮನಿಂದ ಬಿಡಿಸಲ್ಪಟ್ಟಮೇಲೆ, ಅವಳಿಗೆ ಕೀಚಕನ ಭಯವು ತಪ್ಪಿದರೂ, ಮುಂದೇನಾಗುವುದೋ ಎಂಬ ಶಂಕೆಯಿತ್ತು. ಹುಲಿಗೆ ಹೆದರಿದ ಹೆಣ್ಣುಜಿಂಕೆಯಂತೆ ಭೀತಿಯು ಮನಸ್ಸನ್ನು ನಡುಗಿಸುತ್ತಿರಲು, ತನ್ನ ಶರೀರವನ್ನೂ, ಉಟ್ಟ ಬಟ್ಟೆಗಳನ್ನೂ ಚೆನ್ನಾಗಿ ತೊಳೆದು ಸ್ನಾನಮಾಡಿ ಪಟ್ಟಣಕ್ಕೆ ಪ್ರವೇಶಮಾಡಿದಳು. ಇವಳನ್ನು ನೋಡಿ ಅಲ್ಲಲ್ಲಿದ್ದ ಪುರುಷರೆಲ್ಲರೂ ಗಂಧರ್ವರ ಭಯಕ್ಕಾಗಿ ನಾನಾ ಕಡೆಗೆ ಓಡಿಹೋದರು. ಕೆಲವರು ಕಣ್ಣುಗಳನ್ನು ಮುಚ್ಚಿಕೊಂಡರು. ಬೇರೆ ಕೆಲವರು ಅವಳನ್ನು ಕಂಡೊಡನೆ ಭಯದಿಂದ ತಬ್ಬಿಬ್ಬಾಗಿ, ತಮ್ಮ ಕೈಯನ್ನು ಕಣ್ಣಿಗೆ ಮರೆಮಾಡಿಕೊಂಡು ಓಡಿಹೋದರು. ಮತ್ತೆ ಕೆಲವರು ಸಮೀಪದಲ್ಲಿದ್ದವರನ್ನು ನೋಡಿ ದೀನಸ್ವರದಿಂದ, "ಬೇಡಿರಿ! ಬೇಡಿರಿ! ಆ ಸೈರಂಧ್ರಿಯನ್ನು ನೋಡಬೇಡಿರಿ" ಎಂದು ಎಚ್ಚರಿಸುತ್ತಿದ್ದರು. ಇನ್ನೂ ಕೆಲವರು, "ಸೌಂದರ್ಯದಿಂದ ಬೆಳಗುತ್ತಿರುವ ಈಕೆಯನ್ನು ನೋಡಿದವರು ಕೀಚಕರಂತೆ ಇಲ್ಲಿಯೇ ಸಾಯಬೇಕಾಗುವುದು," ಎಂದು ಭಯದಿಂದ ತತ್ತಳಿಸುತ್ತ ಗಂಧರ್ವರನ್ನು ನೆನೆಸಿಕೊಂಡು ತಬ್ಬಿಬ್ಬಾಗಿ ನಿಂತುಬಿಟ್ಟರು. ಆಮೇಲೆ ದ್ರೌಪದಿಯು ತಾನು ದಾರಿಯಲ್ಲಿ ಬರುವಾಗ ಭೀಮ

ನಿದ್ದ ಅಡಿಗೆಯ ಮನೆಯ ಮುಂದೆ ಬರುತ್ತ, ದೊಡ್ಡ ಮದದಾನೆಯಂತೆ ಬಾಗಿಲಲ್ಲಿ ನಿಂತಿದ್ದ ಭೀಮಸೇನನನ್ನು ನೋಡಿ ಪರಿಹಾಸಪೂರ್ವಕವಾಗಿ ಮೆಲ್ಲಗೆ "ನನ್ನನ್ನು ಆಪತ್ತಿನಿಂದ ತಪ್ಪಿಸಿ ಕಾಪಾಡಿದ ಆ ಗಂಧರ್ವರಾಜ ನಿಗೆ ವಂದನವು. ಯಾವ ತಪ್ಪೂ ಇಲ್ಲದೆ ದಿಕ್ಕುಗೆಟ್ಟು ಇಲ್ಲಿ ಬಂದು ಜೀವ ನಾರ್ಥವಾಗಿ ಸೇರಿಕೊಂಡಿದ್ದ ನನ್ನನ್ನು ಆ ಕೀಚಕರಿಂದ ರಕ್ಷಿಸಿದ ಗಂಧರ್ವನಿಗೆ ನಮಸ್ಕಾರಗಳು" ಎಂದಳು. ಆಗ ಭೀಮನು ಅವಳಿಗೆ ತಿಳಿ ಯುವಂತೆ, "ಯಾವ ಪುರುಷರು ನಿನಗೆ ಸ್ವಾಧೀನರಾಗಿ ಲೋಕಸಂಚಾರ ಮಾಡುತ್ತಿರುವರೋ, ಅವರಿಗೆ ನೀನು ಯಾವಾಗಲೂ ವಶವರ್ತಿನಿಯಾಗಿದ್ದು ನಿನ್ನ ಇಷ್ಟದಂತೆ ಸಂಚರಿಸುತ್ತಿರು. ಯಾವ ಪುರುಷರು ನಿನಗೆ ವಶರಾಗಿ ತಿರುಗುತ್ತಿರುವರೋ, ಅವರೂ ಈ ನಿನ್ನ ಮಾತನ್ನು ಕೇಳಿ ತಾವು ಋಣ ಮುಕ್ತರಾದಂತೆ ತಿಳಿದು ಇನ್ನುಮೇಲೆ ನೆಮ್ಮದಿಯಿಂದಿರಲಿ!" ಎಂದನು.

ಓ ಜನಮೇಜಯರಾಜನೆ! ಇವರಿಬ್ಬರ ಭಾವಗರ್ಭವಾದ ಈ ಸಂಭಾ ಷಣವನ್ನು ಕೇಳಿಯೂ, ಅದರ ಮರ್ಮವೇನೆಂದು ಬೇರೆ ಜನರಿಗೆ ತಿಳಿಯ ಲಿಲ್ಲ. ಆ ಮೇಲೆ ದ್ರೌಪದಿಯು ತನ್ನ ದಾರಿಯನ್ನು ಹಿಡಿದು ಹೊರಟು ಹೋದಳು. ಅದರಿಂದಾಚೆಗೆ ತಿರುಗಿ ದ್ರೌಪದಿಯು ನಾಟ್ಯಶಾಲೆಗೆ ಬಂದು, ಅಲ್ಲಿ ರಾಜಕನ್ಯೆಯರಿಗೆ ನಾಟ್ಯವನ್ನು ಕಲಿಸುತ್ತಿದ್ದ ಅರ್ಜುನನನ್ನು ಕಂಡಳು. ನಿರಪರಾಧಿಯಾಗಿದ್ದರೂ ಕಷ್ಟಕ್ಕೊಳಗಾಗಿ ಬಹಳ ದೈನ್ಯದಿಂದ ತನ್ನ ಕಡೆಗೆ ಬರುತ್ತಿದ್ದ ಸೈರಂಧ್ರಿಯನ್ನು ದೂರದಲ್ಲಿ ಕಂಡೊಡನೆ, ಅಲ್ಲಿ ನಾಟ್ಯ ವನ್ನು ಕಲಿಯುತ್ತಿದ್ದ ರಾಜಕನ್ಯೆಯರೆಲ್ಲರೂ, ತಮ್ಮ ನಾಟ್ಯಾಚಾರ್ಯ ನಾದ ಅರ್ಜುನನೊಡನೆ ಥಟ್ಟನೆ ಹೊರಗೆ ಬಂದು ಆ ಸೈರಂಧ್ರಿಯನ್ನು ನೋಡಿ ಹೀಗೆಂದು ಹೇಳುವರು. "ಆಹಾ! ಸೈರಂಧ್ರೀ! ಅದೃಷ್ಟವಶ ದಿಂದ ತಪ್ಪಿಬಂದೆ! ನಿನ್ನ ಭಾಗ್ಯವಶದಿಂದ ಆ ಪಾಪಿಗಳು ಹತರಾಗಿ ನೀನು ತಿರುಗಿ ಇಲ್ಲಿಗೆ ಕ್ಷೇಮದಿಂದ ಬರುವಂತಾಯಿತು." ಎಂದರು. ಬೃಹನ್ನ ಳೆಯು ಆ ಸೈರಂಧ್ರಿಯನ್ನು ನೋಡಿ "ಸೈರಂಧ್ರೀ! ನೀನು ಹೇಗೆ ತಪ್ಪಿಸಿಕೊಂಡು ಬಂದೆ! ಆ ಪಾಪಿಗಳು ಹೇಗೆ ಕೊಲ್ಲಲ್ಪಟ್ಟರು? ನಿನ್ನ ವೃತ್ತಾಂತವನ್ನೆಲ್ಲ ಕೇಳಬೇಕೆಂದಪೇಕ್ಷಿಸುವೆನು. ನಡೆದುದನ್ನು ನಡೆದ

ಹಾಗೆ ಹೇಳು'' ಎಂದನು. ಅದಕ್ಕಾ ಸೈರಂಧ್ರಿಯು "ಓ ಬೃಹನ್ನಳೇ! ನಿನಗೆ ಸೈರಂಧ್ರಿಯಾದ ನನ್ನ ವಿಚಾರವೇಕೆ? ಈಗ ನನ್ನಿಂದ ನಿನಗಾಗ ಬೇಕಾದ ಕಾರ್ಯವೇನಿದೆ? ಎಲೆ ಕಲ್ಯಾಣೀ! ನೀನು ಕನ್ಯಾಂತಃಪುರದಲ್ಲಿ ಯಾವಾಗಲೂ ಸುಖವಾಗಿದ್ದುಕೊಂಡಿರತಕ್ಕವಳು. ಸೈರಂಧ್ರಿಯು ಅನು ಭವಿಸುವ ದುಃಖಕ್ಕೆ ನಿನಗೇನೂ ಸಂಬಂಧವಿರುವುದಿಲ್ಲ. ಇಲ್ಲಿ ಸುಖವಾಗಿ ರತಕ್ಕ ನಿನಗೆ ಅಂತಹ ದುಃಖವೇನೂ ಬರುವಹಾಗಿಲ್ಲ. ಆದುದರಿಂದ ದುಃಖಿತೆಯಾದ ನನ್ನ ಸ್ಥಿತಿಯನ್ನು ನೋಡಿ ನಗುತ್ತಾ ಈ ರೀತಿ ಕೇಳುತ್ತಿ ರುವೆ'' ಎಂದಳು. ಆಗ ಬೃಹನ್ನಳೆಯು "ಎಲೆ ಶುಭಾಂಗೀ! ಈ ಬೃಹ ನ್ನಳೆಯಾದರೂ (ನಾನಾದರೂ) ಅನುಭವಿಸುವ ದುಃಖಕ್ಕೆ ಪಾರವೇ ಇಲ್ಲ ದಂತಿದೆ. ತಿರ್ಯಗ್ಜಾತಿಯಲ್ಲಿ ಹುಟ್ಟಿದ ಒಂದು ಜಂತುವಿನಂತೆ ನಾನೂ ದುರಂತವಾದ ದುಃಖದಲ್ಲಿರುವುದನ್ನು ನೀನು ತಿಳಿಯೆ? ನಿನ್ನ ಸಂಗಡಲೇ ನಾನೂ ಇಲ್ಲಿರುವೆನು. ನೀನೂ ನಿನ್ನ ಕಡೆಯವರೆಲ್ಲರೊಡನೆಯೇ ಇಲ್ಲಿ ರುವೆ. ನಿನಗಿಂತಲೂ ಹೆಚ್ಚು ಕಷ್ಟದಲ್ಲಿಯೇ ನಾನು ಇಲ್ಲಿ ವಾಸಿಸುತ್ತಿರು ವೆನು. ನೀನು ಹೀಗೆ ಕಷ್ಟಪಡುತ್ತಿರುವಾಗ ಯಾವನು ತಾನೇ ದುಃಖಿಸ ದಿರಲಾರನು? ಆದರೆ, ಒಬ್ಬನ ಹೃದಯವೆಂತದೆಂಬುದನ್ನು ಮತ್ತೊಬ್ಬರು ತಿಳಿದುಕೊಳ್ಳಲು ಸಾಧ್ಯವಿಲ್ಲ. ಆದುದರಿಂದಲೇ ನನ್ನ ಮನಸ್ಸು ಹೇಗಿದೆ ಯೆಂಬುದು ನಿನಗೆ ತಿಳಿಯಲಿಲ್ಲ'' ಎಂದನು.

ಓ ಜನಮೇಜಯನೆ ಕೇಳು. ಆಮೇಲೆ ದ್ರೌಪದಿಯು, ಅಲ್ಲಿದ್ದ ಕನ್ಯೆಯರೊಡನೆಯೇ ಅರಮನೆಗೆ ಪ್ರವೇಶಿಸಿ, ಸುದೇಷ್ಣೆಯ ಬಳಿಗೆ ಬಂದಳು. ಇವಳನ್ನು ಕಂಡೊಡನೆ ರಾಣಿಯು ತನ್ನ ಪತಿಯಾದ ವಿರಾಟನು ಹೇಳಿದ್ದ ಮಾತಿನಮೇಲೆ ಅವಳನ್ನು ಕುರಿತು ಹೀಗೆಂದು ಹೇಳುವಳು. "ಸೈರಂಧ್ರಿ! ಇನ್ನು ನೀನು ಇಲ್ಲಿರಬೇಡ! ಒಡನೆಯೇ ನಮ್ಮ ಮನೆಯನ್ನು ಬಿಟ್ಟು ನಿನ್ನಿಷ್ಟಬಂದಕಡೆಗೆ ಹೋಗು. ಗಂಧರ್ವರಿಂದ ತನಗೇನು ಅಪಾಯವು ಬರುವುದೋ ಎಂದು ರಾಜನು ಬಹಳವಾಗಿ ಅಂಜುತ್ತಿರುವನು. ನೀನಾ ದರೋ ಇನ್ನೂ ಪ್ರಾಯದ ಹೆಂಗಸು. ರೂಪದಲ್ಲಿಯೂ ಎಣೆಯಿಲ್ಲದವಳು. ಪುರುಷರ ಮನಸ್ಸು ಯಾವಾಗಲೂ (ಸ್ತ್ರೀಯರ) ಅಂಗಸ್ಪರ್ಶಸುಖದಲ್ಲಿಯೇ

ಟ್ಟಿದ್ದ ಚಾರರು, ಅನೇಕ ದೇಶಗಳನ್ನೂ, ಪಟ್ಟಣಗಳನ್ನೂ ಹುಡುಕಿನೋಡಿದ ಮೇಲೆ, ತಾವು ಸಂಕೇತಮಾಡಿಕೊಂಡಿದ್ದ ಸ್ಥಳಕ್ಕೆ ಬಂದು, ಅಲ್ಲಿ ಎಲ್ಲರೂ ಒಂದಾಗಿ ಸೇರಿದರು. ಅಲ್ಲಿ ಒಬ್ಬರಿಗೊಬ್ಬರು ಮಾತಾಡಿಕೊಂಡು, ಅಲ್ಲಿಂದ ಎಲ್ಲರೂ ಹಸ್ತಿನಾಪುರಿಗೆ ಬಂದು ಸೇರಿ, ಅಲ್ಲಿ ದುರ್ಯೋಧನನನ್ನು ನೋಡುವುದಕ್ಕಾಗಿ ರಾಜಸ್ಥಾನಕ್ಕೆ ಬಂದರು. ಅಲ್ಲಿ ದ್ರೋಣ, ಕರ್ಣ, ಕೃಪಾದಿ ವೀರರಿಂದಲೂ, ಮಹಾತ್ಮನಾದ ಭೀಷ್ಮನಿಂದಲೂ, ಮಹಾರಥರೆನಿಸಿದ ತ್ರಿಗರ್ತ ದೇಶಾಧಿಪತಿಗಳಿಂದಲೂ ಪರಿವೃತನಾಗಿ, ಸಭೆಯಲ್ಲಿದ್ದ ದುರ್ಯೋಧನನಿಗೆ ಜಯಜಯ ಶಬ್ದದೊಡನೆ ತಲೆಬಗ್ಗಿಸಿ ನಮಸ್ಕರಿಸಿದರು. ಆ ಸಭಾಮಧ್ಯದಲ್ಲಿ ಕೌರವನು ಸೂರ್ಯಪ್ರಭೆಯಂತೆ ಬೆಳಗುತ್ತಿರುವ ಸುವರ್ಣ ಸಿಂಹಾಸನದ ಮೇಲೆ ಠೀವಿಯಿಂದ ಕುಳಿತಿರುವನು. ದೇವತೆಗಳು ಇಂದ್ರನನ್ನು ಹೇಗೋ ಹಾಗೆ ಅನೇಕಮಂತ್ರಿಗಳು ಅವನನ್ನು ಉಪಾಸಿಸುತ್ತಿರುವರು. ವಿದ್ವಾಂಸರೂ, ಪಾಠಕರೂ, ಕವಿಗಳೂ, ಸ್ತುತಿಪಾಠಕರೂ, ಸಾಮಂತರಾಜರೂ ಅವರ ಪರಿವಾರದವರೂ ಸುತ್ತಿನಿಂತಿರುವರು. ಇಂತಹ ಸಭಾಮಧ್ಯದಲ್ಲಿ ರಾಜನು ಕುಳಿತಿರುವಾಗ, ಆ ಚಾರರೆಲ್ಲರೂ ಮುಂದೆ ಬಂದು ವಿನಯದಿಂದ ಹೀಗೆಂದು ತಿಳಿಸುವರು.

“ಓ ರಾಜೇಂದ್ರಾ! ನಾವು ಪಾಂಡವರನ್ನು ಹುಡುಕುವುದಕ್ಕಾಗಿ ನಮ್ಮಿಂದಾದ ಪ್ರಯತ್ನಗಳನ್ನೆಲ್ಲ ಮಾಡಿದೆವು. ಜನಶೂನ್ಯವಾಗಿ, ದುಷ್ಟಮೃಗಗಳಿಂದಲೂ, ನಾನಾಜಾತಿಯ ದುಂಬಿಗಳಿಂದಲೂ, ಗಿಡಮರಗಳಿಂದಲೂ, ನಾನಾತರದ ಪೊದೆಗಳಿಂದಲೂ, ದುರ್ಗಮವಾದ ಆ ಮಹಾರಣ್ಯದಲ್ಲಿ ಪ್ರವೇಶಿಸಿ, ಎಲ್ಲೆಲ್ಲಿಯೂ ಹುಡುಕಿಬಂದೆವು. ಸತ್ಯಪರಾಕ್ರಮಿಗಳಾದ ಆ ಪಾಂಡವರು ಹೋದ ದಾರಿಯೇ ನಮಗೆ ತಿಳಿಯಲಿಲ್ಲ. ಋಷ್ಯಾಶ್ರಮಗಳಲ್ಲಿಯೂ, ವನಗಳಲ್ಲಿಯೂ, ಎತ್ತರವಾದ ಪರ್ವತಶಿಖರಗಳಲ್ಲಿಯೂ, ನಾನಾದೇಶಗಳಲ್ಲಿಯೂ, ಜನನಿಬಿಡವಾದ ಪ್ರದೇಶಗಳಲ್ಲಿಯೂ, ಬೀದಿಯ ಚೌಕಗಳಲ್ಲಿಯೂ, ಪಟ್ಟಣಗಳಲ್ಲಿಯೂ ನಾವು ಆ ಪಾಂಡವರ ಹೆಜ್ಜೆಯ ಗುರುತುಗಳನ್ನಾದರೂ ಕಂಡುಹಿಡಿಯಲು ಪ್ರಯತ್ನಿಸಿದೆವು. ಅವರು ಎಲ್ಲಿಯೋ ಬಹುಬೇಗನೆ ಪಲಾಯನಮಾಡಿ ಅಡಗಿಕೊಂಡುದರಿಂದ, ನಮಗೆ

ಬಹಳ ಪ್ರೇಮಪಾತ್ರನು. ಅವನು ಸೂತಜಾತಿಯಲ್ಲಿ ಹುಟ್ಟಿದವನು. ಮಹಾಬಲಶಾಲಿ! ತ್ರಿಗರ್ತರನ್ನು ಅನೇಕಾವರ್ತಿ ತನ್ನ ಪರಾಕ್ರಮದಿಂದ ಜಯಿಸಿದವನು. ಅಂತಹ ವೀರನು ರಾತ್ರಿಯಲ್ಲಿ ಗಂಧರ್ವರಿಂದ ವಧಿಸಲ್ಪಟ್ಟನು. ರಾಜೇಂದ್ರಾ! ಆ ಕೀಚಕನು ಸುದೇಷ್ಣೆಯ ತಮ್ಮನು ವಿರಾಟನಿಗೆ ಭಾವಮೈದುನನು. ಮತ್ತು ಅವನ ಮುಖ್ಯ ಸೇನಾಪತಿ. ಅವನ ಬುದ್ಧಿಯು ಬಹಳ ಗಂಭೀರವಾದುದು. ಸ್ವಭಾವದಲ್ಲಿ ಕ್ರೂರನಾದರೂ ಶೂರನು. ಮತ್ತು ವೀರನು. ಸರ್ವಕಾಲದಲ್ಲಿಯೂ ಸುಖಸಂತೋಷಗಳಿಂದ ಉತ್ಸಾಹಗೊಂಡಿದ್ದವನು. ಯುದ್ಧವಿಧಿಗಳನ್ನು ಚೆನ್ನಾಗಿ ಬಲ್ಲವನು. ಶತ್ರುಗಳ ವೀರ್ಯವನ್ನಡಗಿಸತಕ್ಕವನು. ಸಿಂಹಕ್ಕೆ ಸಮಾನವಾದ ಪರಾಕ್ರಮವುಳ್ಳವನು. ಪ್ರಜೆಗಳನ್ನು ರಕ್ಷಿಸುವುದರಲ್ಲಿಯೂ, ಶತ್ರುಗಳನ್ನು ನಿಗ್ರಹಿಸುವುದರಲ್ಲಿಯೂ ಸಮರ್ಥನು. ಅವನು ಆತ್ಮಗೌರವದಲ್ಲಿ ದೃಷ್ಟಿಯುಳ್ಳವನು. ಪುರುಷರ ಮನಸ್ಸನ್ನು ಆಕರ್ಷಿಸಬಲ್ಲವನು. ಧೀರನು. ವಾಕ್ಚತುರನು. ಯುದ್ಧಪ್ರಿಯನು. ಧರ್ಮಾರ್ಥಕಾಮಗಳನ್ನು ಗಳಿಸತಕ್ಕವನು. ಮನುಷ್ಯರಲ್ಲಿ ಮೇಲಾದ ಹೆಸರುಗೊಂಡವನು. ಅಂತವನು, ಒಂದು ಸ್ತ್ರೀಯ ನಿಮಿತ್ತವಾಗಿ ಅರ್ಧರಾತ್ರಿಯ ವೇಳೆಯಲ್ಲಿ ತನ್ನ ಸಹೋದರರೊಡನೆ ಗಂಧರ್ವರಿಂದ ವಧಿಸಲ್ಪಟ್ಟು, ಅವನ ಸ್ನೇಹಿತರೂ, ಅವನ ಕಡೆಯ ಕೆಲವು ಯೋಧರೂ ಶಸ್ತ್ರಗಳಿಂದ ಕೊಲ್ಲಲ್ಪಟ್ಟರಂತೆ! ಆ ವಿರಾಟನ ಅಂತಃಪುರದಲ್ಲಿ ಸೈರಂಧ್ರಿಯೊಬ್ಬಳಿರುವಳು. ಅವಳು ಗಂಧರ್ವಪತ್ನಿಯಂತೆ! ಕೀಚಕನು ತನ್ನ ಬಲದಕೊಬ್ಬಿನಿಂದ ಬುದ್ಧಿಗೆಟ್ಟು, ಆ ಸೈರಂಧ್ರಿಯಮೇಲೆ ಕಣ್ಣಿಟ್ಟು, ಅವಳನ್ನು ಬಲಾತ್ಕಾರಿಸಿದನಂತೆ! ಇದಕ್ಕಾಗಿ ಅವನು ರಾತ್ರಿಯಲ್ಲಿ ಗಂಧರ್ವರಿಂದ ತನ್ನ ಬಹುಮಂದಿ ಬಂಧುಗಳೊಡನೆ ಹತನಾದನೆಂದು ಕೇಳಿರುವೆವು. ಆದುದರಿಂದ, ಇಲ್ಲಿಂದಾಚೆಗೆ ನೀನು ಮತ್ತೊಮ್ಮೆ ಪಾಂಡವರನ್ನು ಹುಡುಕುವುದಕ್ಕಾಗಿ ಚಾರರನ್ನು ಆಕಡೆಗೆ ಮಾತ್ರ ಕಳುಹಿಸುವುದು ಉತ್ತಮವೆಂದು ನಮಗೆ ತೋರುವುದು. ದುರಾತ್ಮನಾದ ಕೀಚಕನು ತನ್ನ ತಮ್ಮಂದಿರೊಡನೆ ಗಂಧರ್ವರಿಂದ ಹತನಾದನೆಂಬ ಸುದ್ದಿಯನ್ನುಮಾತ್ರ ನಾವು ಕೇಳಿಬಂದೆವು. ನಿನಗೆ ಶುಭವಾಗಲಿ! ಈ ಪ್ರಿಯವೃತ್ತಾಂತವನ್ನು ಕೇಳಿ

ಗಳಿಂದ ಆ ಪಾಂಡವರನ್ನು ಕಂಡುಹಿಡಿಯಲು ಪ್ರಯತ್ನಿಸಬೇಕು. ವೇಷಾಂತರದಿಂದ ಬಹಳ ಕಷ್ಟದಶೆಯಲ್ಲಿರುವ ಪಾಂಡವರನ್ನು, ಅವರ ಅಜ್ಞಾತವಾಸಕಾಲದೊಳಗಾಗಿಯೇ ಕಂಡು ಹಿಡಿದರೆ, ಅವರ ಕೊಬ್ಬಡಗಿ, ತಿರುಗಿ ಅವರು ಕಾಡಿಗೆ ಹೋಗಬೇಕಾಗುವುದು. ಆಗ ರಾಜ್ಯವು ನಮಗೆ ಶತ್ರುಭಯವಿಲ್ಲದಂತೆ ಚಿರಕಾಲಕ್ಕೆ ಅವಿಚ್ಛಿನ್ನವಾಗಿ ನಡೆಯುವುದು. ಆದುದರಿಂದ ನೀವು ಈಗಲೇ ಅದಕ್ಕೆ ತಕ್ಕ ಉಪಾಯವನ್ನು ಚಿಂತಿಸಿರಿ" ಎಂದನು. ದುರ್ಯೋಧನನು ಬಹಳವ್ಯಾಕುಲತೆಯೊಡನೆ ಈ ಮಾತನ್ನು ಹೇಳಲು, ಕರ್ಣನು "ಮಹಾರಾಜಾ! ತಿರುಗಿ ಇದೇ ಚಾರರನ್ನು ಕಳುಹಿಸಬಾರದು. ಇವರಿಗಿಂತಲೂ ಶೀಘ್ರಗಾಮಿಗಳೂ, ರಹಸ್ಯವನ್ನು ಕಾಪಾಡತಕ್ಕವರೂ, ಚತುರರೂ ಆದ ಬೇರೆ ಚಾರರನ್ನು ಕಳುಹಿಸಿ, ಮತ್ತೊಮ್ಮೆ ದೇಶದೇಶಗಳನ್ನೂ, ಪಟ್ಟಣಗಳನ್ನೂ, ಗ್ರಾಮಗಳನ್ನೂ ಹುಡುಕಿಸಬೇಕು. ಅವರು ಅಲ್ಲಲ್ಲಿ ಸಾಧುಗಳಿರತಕ್ಕ ಸ್ಥಳಗಳಲ್ಲಿಯೂ, ಪುಣ್ಯತೀರ್ಥಾಶ್ರಮಗಳಲ್ಲಿಯೂ, ಗಣಿಗಳಲ್ಲಿಯೂ ಬ್ರಾಹ್ಮಣವೇಷಧಾರಿಗಳಾಗಿ ರಹಸ್ಯವಾಗಿ, ಹೋಗಿ ಬಹಳ ಜಾಗರೂಕತೆಯಿಂದ ಹುಡುಕಲಿ! ನದೀತೀರದ ಪೊದರುಗಳಲ್ಲಿಯೂ, ಪವಿತ್ರ ತೀರ್ಥಗಳಲ್ಲಿಯೂ, ರಮಣೀಯಾಶ್ರಮಗಳಲ್ಲಿಯೂ, ಪರ್ವತಗಳಲ್ಲಿಯೂ, ಗುಹೆಗಳಲ್ಲಿಯೂ ಚೆನ್ನಾಗಿ ಹುಡುಕಿಸಬೇಕು. ಅಂತಹ ಸ್ಥಳಗಳಲ್ಲಿ ಎಲ್ಲಿಯಾದರೂ ಪಾಂಡವರು ತಮ್ಮ ವೇಷವನ್ನು ಮರೆಸಿಕೊಂಡಿರಬಹುದು. ಆದುದರಿಂದ ಅಂತಹ ಸ್ಥಳಗಳಿಗೆಲ್ಲ ಮೇಲೆ ಹೇಳಿದಂತೆ ನಿಪುಣರಾದ ಬೇರೆ ಚಾರರನ್ನೇ ಕಳುಹಿಸಿ ಹುಡುಕಿಸು" ಎಂದನು. ಆಗ ಅಣ್ಣನಾದ ದುರ್ಯೋಧನನಿಗೆ ಬಹಳ ಹಿತಚಿಂತಕನಾದ ದುಶ್ಶಾಸನನು ಕೌರವನನ್ನು ಕುರಿತು "ಅಣ್ಣಾ! ನಮ್ಮ ರಾಧೇಯನು ಹೇಳಿದಂತೆ ನಮಗೆ ವಿಶ್ವಾಸಪಾತ್ರರಾಗಿ, ನಮ್ಮಿಂದ ಒಳ್ಳೇ ವೇತನವನ್ನು ಪಡೆದು, ಕಾರ್ಯದಲ್ಲಿಯೂ ನಿಪುಣರಾದ ಬೇರೆ ಚಾರರನ್ನು ತಿರುಗಿ ಪಾಂಡವರನ್ನು ಹುಡುಕುವುದಕ್ಕಾಗಿ ಕಳುಹಿಸಬೇಕು. ಪಶುಗಳು ತಮ್ಮ ಘ್ರಾಣೇಂದ್ರಿಯದಿಂದಲೂ, ಬ್ರಾಹ್ಮಣರು ವೇದಗಳಿಂದಲೂ, ರಾಜರು ಚಾರರಿಂದಲೂ, ಇತರಜನರು ತಮ್ಮ ಕಣ್ಣುಗಳಿಂದಲೂ ತಿಳಿದುಕೊಳ್ಳುವರು. ಆದುದರಿಂದ ರಾಜನಿಗೆ ಚಾರರೇ ಕಣ್ಣುಗಳಂತಿರುವರು. ಅದಕ್ಕಾಗಿಯೇ ಅರಸರನ್ನು "ಚಾರ

ಅವನಿಗೆ ವಿಧೇಯರಾಗಿ, ಅವನನ್ನು ಅನುವರ್ತಿಸುತ್ತಿರುವರು. ಅಂತವರಿಗೆ ನಾಶವೆಂದರೇನು? ಈ ದುಶ್ಯಾಸನನು ಊಹಿಸುವಂತೆ ಅವರಿಗೆ ಎಂದಿಗೂ ಮರಣವಿರಲಾರದು. ಅವರಿಗೆ ಬೇರೊಬ್ಬರಿಂದ ಪರಾಭವವೂ ಇರದು. ಅಜಾತಶತ್ರುವೆನಿಸಿಕೊಂಡ ಶ್ರೀಮಂತನಾದ ಆ ಯುಧಿಷ್ಠಿರನೂಕೂಡ, ತನ್ನಲ್ಲಿ ವಿಧೇಯರಾದ ಆ ಸಹೋದರರಲ್ಲಿ ಎಷ್ಟೋ ವಿಶ್ವಾಸವನ್ನಿಟ್ಟು ಅವರೆಲ್ಲರ ಮನಸ್ಸನ್ನೂ ಅನುವರ್ತಿಸಿ ನಡೆಯತಕ್ಕವನು. ಅಂತಹ ಧರ್ಮಪುತ್ರನು ಹೇಗೆತಾನೇ ತನ್ನ ಸಹೋದರರಿಗೆ ಶ್ರೇಯಸ್ಸನ್ನು ಕೋರದಿರುವನು. ಆದುದರಿಂದ ಓ ರಾಜಾ! ಪಾಂಡವರಿಲ್ಲವೆಂದು ನೀನು ಧೈರ್ಯದಿಂದಿರಬಾರದು. ಈಗಲೂ ಅವರು ಅಜ್ಞಾತವಾಸದಲ್ಲಿರಬೇಕಾದ ಕಾಲಾವಧಿಯು ಮುಗಿದಿಲ್ಲ. ಆದುದರಿಂದ ನೀನು ನಿನ್ನಿಂದಾದಷ್ಟು ಸಾಹಸದಿಂದ ಅವರನ್ನು ಕಂಡುಹಿಡಿಯುವುದಕ್ಕೆ ಯತ್ನಮಾಡು. ಅವರು ಸತ್ತಿಲ್ಲವೆಂದೇ ನನ್ನ ನಿಶ್ಚಯವು. ಆದುದರಿಂದ ಕಾಲೋಚಿತವಾದ ಮುಂದಿನ ಕಾರ್ಯವೇನೆಂಬುದನ್ನು ಚೆನ್ನಾಗಿ ಯೋಚಿಸಿ, ಶೀಘ್ರದಲ್ಲಿಯೇ ಅದನ್ನು ನಡೆಸು. ಅವರು ಇರತಕ್ಕ ಸ್ಥಳವಾವುದೆಂದು ಊಹಿಸಿ ನೋಡು! ಎಲ್ಲಾ ವಿಚಾರಗಳಲ್ಲಿಯೂ ಧೀರಮನಸ್ಸುಳ್ಳ ಆ ಪಾಂಡವರ ವೃತ್ತಾಂತವನ್ನು ತಿಳಿಯುವುದಕ್ಕೆ ಉಪಾಯವೇನೋ ಅದಕ್ಕೆ ತಕ್ಕ ನೀತಿಯನ್ನು ನಡೆಸು. ಪಾಂಡವರನ್ನು ಕಂಡುಹಿಡಿಯಲು ಸರ್ವೋಪಾಯಗಳಿಂದಲೂ ನೀನು ಯತ್ನಿಸಬೇಕು. ಶೂರರಾದ ಅವರನ್ನು ಕಂಡುಹಿಡಿಯುವುದೇನೋ ಸುಲಭಸಾಧ್ಯವಲ್ಲ. ದೇವತೆಗಳಿಂದ ಅವರು ರಕ್ಷಿಸಲ್ಪಡುತ್ತಿರುವರು. ಆ ಧರ್ಮರಾಜನು ಸಾಮಾನ್ಯನಲ್ಲ. ಬಹಳ ಶುದ್ಧಾತ್ಮನು. ಮಾನಧನನು! ಸತ್ಯನಿರತನು! ನೀತಿನಿಪುಣನು! ತೇಜೋರಾಶಿಯಿಂದ ತುಂಬಿದವನು! ಆ ಯುಧಿಷ್ಠಿರನು ತನ್ನ ಕಣ್ಣಿನಿಂದಲೇ ನಮ್ಮೆಲ್ಲರನ್ನೂ ದಹಿಸಿಬಿಡಬಹುದು. ಆದುದರಿಂದ ನೀನು ಬಹಳ ಜಾಗರೂಕನಾಗಿರು. ನಿನ್ನಿಂದಾದ ಯತ್ನವನ್ನು ಮಾಡು! ತಿರುಗಿ ಆ ಪಾಂಡವರನ್ನು ಹುಡುಕಿಸಿ ನೋಡುವೆವು. ಇದಕ್ಕಾಗಿ ಆಯಾ ಕಾಲದೇಶಗಳಿಗೆ ತಕ್ಕಂತೆ ಬೇರೆಬೇರೆಯಾಗಿ ಬ್ರಾಹ್ಮಣರನ್ನೂ, ಗೂಢಚಾರರನ್ನೂ ಸಿದ್ಧರನ್ನೂ, ನಿಪುಣರಾದ ತಾಪಸರನ್ನೂ ಅಲ್ಲಲ್ಲಿ ಕಳುಹಿಸಿ ಹುಡುಕಿಸುವೆವು. ಈ ಕಾರ್ಯಕ್ಕಾಗಿ ನಾವು

ಹುಡುಕುವುದರಲ್ಲಿ ಸಮರ್ಥರಾಗಿಯೂ, ಭಯವಿಲ್ಲದವರಾಗಿಯೂ, ಆ ಪಾಂಡವರಲ್ಲಿ ಮೊದಲು ಪರಿಚಯವುಳ್ಳ ಜನರಿಗೆ ಸಮ್ಮತರಾಗಿಯೂ ಇರುವವರನ್ನೇ ಕಳುಹಿಸಿ, ಚೆನ್ನಾಗಿ ಹುಡುಕಿಸಬೇಕು. ಆ ಪಾಂಡವರು ಎಲ್ಲಿಯೋ ಗುಪ್ತಚಾರಿಗಳಾಗಿರಬೇಕು" ಎಂದನು. ದ್ರೋಣಾಚಾರ್ಯನು ಈ ಮಾತನ್ನು ಹೇಳಿ ಮುಗಿಸಿದೊಡನೆ, ಭರತಕುಲಪಿತಾಮಹನೂ, ಉದಾರಬುದ್ಧಿಯುಳ್ಳವನೂ ಆದ ಭೀಷ್ಮನು ಹೇಳತೊಡಗಿದನು. ಆ ಭೀಷ್ಮನಾದರೋ ನೀತಿಧರ್ಮಗಳನ್ನು ಚೆನ್ನಾಗಿ ಬಲ್ಲವನು. ಧರ್ಮಜ್ಞನಾದ ಯುಧಿಷ್ಠಿರನಿಗೆ ಯಾವಾಗಲೂ ಹಿತಚಿಂತಕನು. ಅಮೋಘವಾಕ್ಯವುಳ್ಳವನು. ಆದುದರಿಂದ, ಈ ಮೇಲಿನ ಗುಣಗಳಿಗನುಸಾರವಾಗಿ, ಧರ್ಮಯುಕ್ತವಾಗಿಯೂ, ಸಾಧುಸಮ್ಮತವಾಗಿಯೂ, ಅಸತ್ತುಗಳಿಗೆ ಅಗ್ರಾಹ್ಯವಾಗಿಯೂ ಇರುವ ಮಾತುಗಳಿಂದ ಆ ಸಭೆಯಲ್ಲಿ ಹೀಗೆಂದನು.

"ಸರ್ವ ಧರ್ಮಗಳನ್ನೂ ಬಲ್ಲ ಈ ಆಚಾರ್ಯನು ಹೇಳಿದುದೇ ವಾಸ್ತವವು. ಶಾಸ್ತ್ರಜ್ಞಾನದಿಂದಲೂ, ಸಚ್ಚರಿತ್ರದಿಂದಲೂ ಕೂಡಿದ ಪಾಂಡವರು ನಾಶವನ್ನು ಹೊಂದಿರುವರೆಂಬುದು ಸುಳ್ಳು! ಅವರು ತಮ್ಮ ಪ್ರತಿಜ್ಞಾಭಂಗವಾಗಬಾರದೆಂಬುದಕ್ಕಾಗಿ, ಎಲ್ಲಿಯೋ ಗುಪ್ತವಾಗಿ ವಾಸಮಾಡುತ್ತಿರುವರು. ಅವರಾದರೋ ಸರ್ವಲಕ್ಷಣಸಂಪನ್ನರು. ಸಾಧುಚರಿತ್ರವುಳ್ಳವರು. ಹಿರಿಯರ ಮಾತಿಗೆ ಕಟ್ಟುಬಿದ್ದು ನಡೆಯತಕ್ಕವರು. ಸತ್ಯಧರ್ಮಪರಾಯಣರು. ಶುಭವ್ರತವುಳ್ಳವರು. ಅವರು ಕಾಲವನ್ನು ಚೆನ್ನಾಗಿ ಬಲ್ಲವರು. ಅವರು ಎಂದಿಗೂ ಯಾವ ದುಃಖಕ್ಕೂ ಒಳಗಾಗುವರಲ್ಲ. ಸಜ್ಜನಸಮ್ಮತವಾದ ಕಾರ್ಯಭಾರವನ್ನೇ ವಹಿಸಿದವರು. ಅವರು ತಮ್ಮ ತಪಸ್ಸಿನಿಂದಲೂ ತಮ್ಮ ವೀರ್ಯದಿಂದಲೂ ರಕ್ಷಿತರಾಗಿರುವರು. ಅವರು ನಾಶಹೊಂದಿರಲಾರರೆಂದೇ ನನ್ನ ನಿಶ್ಚಯವು. ಆ ಪಾಂಡವರು ಕ್ಷತ್ರಿಯಧರ್ಮದಲ್ಲಿ ನೆಲೆಗೊಂಡಿರುವರು. ಶ್ರೀಕೃಷ್ಣನೇ ಅವರಿಗೆ ಬೆಂಬಲವಾಗಿದ್ದು ಕಾಪಾಡುತ್ತಿರುವನು. ಅವರು ಮಹಾ ವೀರರು. ಮಹಾಮಹಿಮೆಯುಳ್ಳವರು. ಮಹಾ ಬಲಶಾಲಿಗಳು. ಆದುದರಿಂದ ಅವರು ನಾಶಹೊಂದಿದರೆಂದು ನೀನು ನಂಬಬಾರದು. ಒಂದುವೇಳೆ ಅವರನ್ನು ಹುಡುಕಿ ಕಂಡುಹಿಡಿಯಬೇ

ಕೆಂಬ ಉದ್ದೇಶವು ನಿನಗಿದ್ದರೆ, ಅದಕ್ಕೆ ಬೇಕಾದ ಉಪಾಯವನ್ನು ಹೇಳು ವೆನು ಕೇಳು. ಒಳ್ಳೇ ನೀತಿಜ್ಞನಾದವನು ಹೋಗತಕ್ಕ ದಾರಿಯನ್ನು ತಿಳಿಯುವುದು ಕಷ್ಟವೇ! ಆದರೂ, ನಮ್ಮಿಂದ ಸಾಧ್ಯವಾದಷ್ಟು ಪ್ರಯತ್ನವನ್ನು ಮಾಡದೆ ಬಿಡಬಾರದು. ನನಗೆ ತಿಳಿದಮಟ್ಟಿಗೆ ನನ್ನ ಬುದ್ಧಿಯಿಂದಾಲೋಚಿಸಿ ಹೇಳುವೆನು ಕೇಳು. ವೃದ್ಧರ ಮಾತಿನಂತೆ ನಡೆಯುತ್ತ, ಸತ್ಯಶೀಲನೆನಿಸಿಕೊಂಡ ಆ ಧರ್ಮರಾಜನ ಸಂಗತಿಯನ್ನು ಕುರಿತು ಇಲ್ಲಿ ಚೆನ್ನಾಗಿ ಬಿಚ್ಚಿ ಹೇಳುವುದೂ ಉಚಿತವಲ್ಲ. ಅದರಲ್ಲಿಯೂ ನನ್ನ ಬಾಯಿಂದ ನಾನು ಹೇಳಲೇಬಾರದು. ಏಕೆಂದರೆ, ನನಗೆ ಕೌರವರೂ, ಪಾಂಡವರೂ ಸಮಾನವೇ! ಆದರೂ ಆ ಪಾಂಡವರಿರುವ ಸ್ಥಳವೆಂತದೆಂಬುದನ್ನು ನನ್ನ ಬುದ್ಧಿಯಿಂದಾಲೋಚಿಸಿ ಹೇಳುವೆನು. ಕೌರವರಾಜಾ! ಹೆಚ್ಚು ಮಾತಿನಿಂದೇನು? ಎಲ್ಲಿ ಧರ್ಮವೋ ಅಲ್ಲಿ ಜಯವು ಸಿದ್ಧವು. ಸಭಾಮಧ್ಯದಲ್ಲಿ ಮಾತಾಡಬೇಕೆಂಬ ಉದ್ದೇಶದಿಂದ ಪ್ರೇರಿಸಲ್ಪಟ್ಟ ಒಬ್ಬ ಮನುಷ್ಯನು, ಧರ್ಮವನ್ನುದ್ದೇಶಿಸಿ, ಸರ್ವವಿಧದಿಂದಲೂ ಯೋಗ್ಯವಾದ ಮಾತನ್ನೇ ಆಡಬೇಕು. ಪಾಂಡವರ ವಿಚಾರದಲ್ಲಿ ಇಲ್ಲಿರುವ ಇತರಜನರು ತಿಳಿದಂತೆ ನಾನು ಊಹಿಸಲಿಲ್ಲ. ನನಗೆ ತೋರಿದ ಮಟ್ಟಿಗೆ ಪಾಂಡವರು ವಾಸಿಸುವ ಸ್ಥಳವಾವುದೆಂಬುದನ್ನು ಚಾರರಿಂದ ತಿಳಿಯುವುದೂ ಸಾಧ್ಯವಲ್ಲ.

ವೀರರಾದ ತನ್ನ ಸಹೋದರರಿಂದಲೂ, ಪ್ರಿಯಪತ್ನಿಯಾದ ದ್ರೌಪದಿಯಿಂದಲೂ ಕೂಡಿದ ಯಶಸ್ವಿಯಾದ ಆ ಧರ್ಮರಾಜನು, ತಮ್ಮ ಶ್ರೇಯಸ್ಸನ್ನು ಹೇಗೆತಾನೇ ನೋಡದಿರುವನು? ಹಿಂದೆ ನೀವು ರಾಜ್ಯದಾಸೆಯಿಂದ ಅವನನ್ನು ಅವಮಾನಗೊಳಿಸಿದುದೂ, ಅವನನ್ನು ಕಷ್ಟಪಡಿಸಿದುದೂ ನಿನಗೂ ತಿಳಿದ ವಿಷಯವೇ. ಆ ಧರ್ಮರಾಜನು ಸಹಜವಾಗಿ ನೀತಿವಂತನು. ನ್ಯಾಯಕ್ಕಾಗಿಯೇ ಮಾತಿಗೆ ಕಟ್ಟುಬಿದ್ದು ತಲೆಮರೆಸಿಕೊಂಡಿರುವನು. ಒಂದು ವರ್ಷಕಾಲಕ್ಕೆ ಮಾತ್ರ ಯಾರಿಗೂ ತಿಳಿಯದಂತೆ ವಾಸಮಾಡುತ್ತಿದ್ದು, ತನ್ನ ಅಭ್ಯುದಯಕಾಲವು ಬಂದೊಡನೆ ಹೊರಗೆ ಬರುವನು. ದುರ್ಯೋಧನಾ! ನೀನು ಶೀಘ್ರದಲ್ಲಿಯೇ ತಮ್ಮಂದಿರೊಡನೆಯೂ, ದ್ರೌಪದಿಯೊಡನೆಯೂ ಆ ಧರ್ಮರಾಜನನ್ನು ನಿನ್ನ ಕಣ್ಣಾರೆ

ದುವು ರಸವತ್ತಾಗಿಯೂ, ಹಿತವಾಗಿಯೂ ಇರುವುದು. ಸಮಸ್ತ ಜಲಾಶಯಗಳೂ ಮತ್ತು ಸಮಸ್ತ ಜನರ ಭಾವಗಳೂ ನಿಷ್ಕಲ್ಮಷವಾಗಿ ಪ್ರಸನ್ನವಾಗಿರುವುವು. ಅನ್ನಪಾನಾದಿಗಳೆಲ್ಲವೂ ಅತ್ಯಂತ ರುಚಿಕರವಾಗಿರುವುವು. ಆ ಯುಧಿಷ್ಠಿರನಿದ್ದ ದೇಶದಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಇಂದ್ರಿಯಭೋಗ್ಯಗಳಾದ ವಿಷಯಗಳೆಲ್ಲವೂ, ಅಧಿಕಗುಣವುಳ್ಳವುಗಳಾಗಿರುವುವು. ನೋಟಗಳೆಲ್ಲವೂ ಪ್ರಸನ್ನವಾಗಿ ತೋರುವುವು. ಸಮಸ್ತ ಬ್ರಾಹ್ಮಣರೂ ತಮ್ಮತಮ್ಮ ಧರ್ಮದಲ್ಲಿ ನೆಲೆಗೊಂಡು ಗುಣವಂತರಾಗಿರುವರು. ಓ ಕೌರವರಾಜೇಂದ್ರಾ! ಮೇಲೆ ಹೇಳಿದ ಗುಣಗಳು ಯಾವ ದೇಶದಲ್ಲಿ ಕಾಣುವುವೋ ಅಲ್ಲಿಯೇ ಪಾಂಡವರಿರುವರು. ನೀನು ಆ ಪಾಂಡವರನ್ನು ರಾಜ್ಯದಿಂದ ಕಾಡಿಗಟ್ಟಿ ಹನ್ನೆರಡು ವರ್ಷಗಳು ಕಳೆದು, ಹದಿಮೂರನೆಯ ವರ್ಷವು ನಡೆಯುತ್ತಿರುವುದರಿಂದ, ತತ್ಕಾಲದಲ್ಲಿ ಯಾವ ದೇಶವು ಮೇಲೆ ಹೇಳಿದಂತೆ ಸುಭಿಕ್ಷಸ್ಥಿತಿಯಲ್ಲಿರುವುದೋ ಅಲ್ಲಿಯೇ ಪಾಂಡವರಿರುವರು. ಆ ಯುಧಿಷ್ಠಿರನೆಲ್ಲಿರುವನೋ ಅಲ್ಲಿನ ಜನರಲ್ಲಿ ನಿತ್ಯಸಂತೋಷವೂ, ಅನ್ಯೋನ್ಯಾನುರಾಗವೂ, ಶೌಚವೂ, ದೇವತಾತಿಥಿ ಪೂಜೆಗಳೂ, ದಾನಧರ್ಮಗಳೂ, ಉತ್ಸಾಹವೂ, ಶುಭಾಶಂಸೆಗಳೂ, ನಿತ್ಯಮಂಗಳಗಳೂ, ಶಾಂತವಚನಗಳೂ. ನಿತ್ಯೋತ್ಸವ ಪರಂಪರೆಗಳೂ, ಅನುಸ್ಯೂತವಾಗಿ ನಡೆಯುತ್ತಿರುವುವು. ಆ ದೇಶವು ಅಧಿಕಸಂಪತ್ತಿನಿಂದ ಕೂಡಿ ನಿತ್ಯಕಲ್ಯಾಣಗಳಿಂದ ಶೋಭಿಸುತ್ತಿರುವುವು. ಓ ರಾಜಾ! ಧರ್ಮಜ್ಞನಾದ ಆ ಯುಧಿಷ್ಠಿರನ ನಿಜಸ್ಥಿತಿಯನ್ನು ತಿಳಿಯುವುದಕ್ಕೆ ಸರ್ವಜ್ಞರಾದ ಬ್ರಾಹ್ಮಣರಿಂದಲೂ ಸಾಧ್ಯವಿಲ್ಲ. ಇನ್ನು ಪ್ರಾಕೃತಜನರ ಮಾತೇನು? ಮುಖ್ಯವಾಗಿ ಸತ್ಯ, ದಾನ, ಧೃತಿ, ಶಾಂತಿ, ಕ್ಷಮೆ, ಕೀರ್ತಿ, ಹ್ರೀ, ಲಕ್ಷ್ಮಿ, ದಿವ್ಯತೇಜಸ್ಸು, ಅಹಿಂಸೆ, ಋಜುತ್ವ ಮೊದಲಾದ ಗುಣಗಳು ಆ ಧರ್ಮರಾಜನಲ್ಲಿ ನೆಲೆಗೊಂಡಿರುವುವು. ಆದುದರಿಂದ ನಾನು ಹೇಳಿದ ಈ ಗುರುತುಗಳಿಂದ ಪಾಂಡವರ ನಿವಾಸವನ್ನೂ, ಅವರ ವರ್ತನೆಗಳನ್ನೂ ಊಹಿಸಿ ತಿಳಿಯಬೇಕು. ಇದಕ್ಕಿಂತಲೂ ಬೇರೆ ನಾನು ಹೇಳಬೇಕಾದುದೇನೂ ಇಲ್ಲ. ನನ್ನ ಮಾತಿನಲ್ಲಿ ನಿನಗೆ ವಿಶ್ವಾಸವಿದ್ದರೆ, ಅದನ್ನು ನಿಜವೆಂದು ನಂಬಿ, ಮುಂದೆ ನಿನಗೂ, ನಿನ್ನ ಕುಲಕ್ಕೂ

ಆಗ ನೀನು ನಿನಗಿಂತಲೂ ಬಲಶಾಲಿಗಳಾದ ಬೇರೆ ಶತ್ರುಗಳೊಡನೆ ಯಾಗಲಿ, ಸೈನ್ಯವಾಹನಾದಿಗಳಲ್ಲಿ ನಿನಗಿಂತಲೂ ಕಡಿಮೆಯಾದ ಪಾಂಡವ ರೊಡನೆಯಾಗಲಿ ನಿರ್ಭಯವಾಗಿ ಹೋರಾಡಬಹುದು. ಈ ಅಂಶಗಳನ್ನೆಲ್ಲ ಚೆನ್ನಾಗಿ ತೀರ್ಮಾನಿಸಿಕೊಂಡು, ಕಾಲವನ್ನನುಸರಿಸಿ ನ್ಯಾಯದಿಂದ ನಡೆ ದರೆ ನಿನಗೆ ಎಂದೆಂದಿಗೂ ಸುಖವುಂಟು.''

ಹೀಗೆ ಭೀಷ್ಮ ದ್ರೋಣ ಕೃಪಾಚಾರ್ಯರುಗಳೂ, ಕರ್ಣ ದುಶ್ಶಾಸ ನಾದಿಗಳೂ ತಮತಮಗೆ ತೋರಿದಂತೆ ಹೇಳಿದ ಆಲೋಚನೆಗಳನ್ನು ಕೇಳಿ ದುರ್ಯೋಧನನು, ತನ್ನಲ್ಲಿ ತಾನೇ ಸ್ವಲ್ಪ ಹೊತ್ತು ಆಲೋಚಿಸಿ, ತನ್ನ ಮಂತ್ರಿಗಳನ್ನು ಕುರಿತು ಹೀಗೆಂದು ಹೇಳುವನು, ''ಎಲೈ ಮಂತ್ರಿವರ್ಯರೇ! ನಾನು ಹಿಂದೆ ಜನಗಳ ಗುಂಪಿನಲ್ಲಿ ಸಲ್ಲಾಪಗಳು ನಡೆಯುತ್ತಿದ್ದಾಗ ಇದೊಂದು ಸಂಗತಿಯನ್ನು ಕೇಳಬಲ್ಲೆನು. ಧೀರರೂ, ಶಾಸ್ತ್ರಜ್ಞರೂ ಆದ ವಿದ್ವಾಂಸರ ಬುದ್ಧಿನಿಶ್ಚಯವನ್ನೂ, ಬುದ್ಧಿಶಾಲಿಗಳ ಸಾರಾಸಾರ ವಿವೇಚನೆ ಯನ್ನೂ ನಾನು ನೀತಿಯೆಂಬ ಕಣ್ಣಿನಿಂದ ನೋಡಿಯೂ ತಿಳಿದಿರುವೆನು. ದೈತ್ಯ, ರಾಕ್ಷಸ ಮನುಷ್ಯವರ್ಗದಿಂದ ಕೂಡಿದ ಈ ಪ್ರಪಂಚದಲ್ಲಿ, ಪರಾ ಕ್ರಮದಲ್ಲಿಯೂ ಬಾಹುಬಲದಲ್ಲಿಯೂ ಧೈರ್ಯದಲ್ಲಿಯೂ, ನಾಲ್ಕುಮಂದಿ ಮಾತ್ರ ಇಂದ್ರಸಮಾನರಾಗಿ, ಬಲದಲ್ಲಿ ಪ್ರಪಂಚದ ಎಲ್ಲಾ ಪ್ರಾಣಿಗಳಿ ಗಿಂತಲೂ ಮೇಲೆನಿಸಿದವರೆಂದು ಕೇಳಿರುವೆನು. ಈ ಲೋಕದ ಪ್ರಾಣಿ ವರ್ಗಗಳಲ್ಲಿ ಬಲದಲ್ಲಿ ಅವರಿಗೆ ಮೇಲಾದವರಾಗಲಿ, ಕೊನೆಗೆ ಸಮಾನ ರಾಗಲಿ ಯಾರೂ ಇಲ್ಲವು. ಆ ನಾಲ್ಕು ಮಂದಿಯೂ ಅನ್ಯೋನ್ಯವಾಗಿ ಸಮಬಲವುಳ್ಳವರು. ಬಲರಾಮನೊಬ್ಬನು, ಭೀಮನೊಬ್ಬನು, ಶಲ್ಯನೊ ಬ್ಬನು, ನಾಲ್ಕನೆಯವನು ಕೀಚಕನು. ಇವರಿಗೆ ಸಮಾನನಾದ ಐದನೆ ಯವನಾವನೆಂದು ನಾನು ಇದುವರೆಗೆ ಕೇಳಲಿಲ್ಲ. ಈ ನಾಲ್ವರೂ ಅನ್ಯೋ ನ್ಯವಾಗಿ ಸಮಾನಬಲವುಳ್ಳವರು. ಒಬ್ಬರನ್ನೊಬ್ಬರು ಜಯಿಸಬೇಕೆಂಬ ಉತ್ಸಾಹವುಳ್ಳವರು. ವೀರಾವೇಶದಿಂದ ಆತುರಗೊಂಡವರು. ಇವರು ಯಾವಾಗಲೂ ಬಾಹುಯುದ್ಧದಲ್ಲಿ ಅಪೇಕ್ಷೆಯುಳ್ಳವರು. ಈ ನಂಬಿಕೆ ಯಿಂದ ನಾನು, ಭೀಮನೇ ಕೀಚಕನನ್ನು ಕೊಂದಿರುವನೆಂದು ಊಹಿಸು

ಯನು. ಎಂತವರನ್ನಾದರೂ ಜಯಿಸತಕ್ಕ ಪ್ರಸಿದ್ಧಬಲಪರಾಕ್ರಮವುಳ್ಳವನು. ಪಾಪಿಯೂ, ಕ್ರೂರನೂ ಆದ ಕೀಚಕನು ವಿರಾಟನಗರದಲ್ಲಿ ತನ್ನ ಪಾಪಕ್ಕೆ ಫಲವಾಗಿ ವಧಿಸಲ್ಪಟ್ಟನು. ಆ ಕೀಚಕನು ಹತನಾದುದರಿಂದ, ವಿರಾಟನ ಕೊಬ್ಬಡಗಿ, ಅವನು ಈಗ ನಿರಾಶ್ರಯನಾಗಿರುವನು. ಯುದ್ಧದಲ್ಲಿ ಅವನು ನಿರುತ್ಸಾಹನಾಗಿರುವನೆಂದೂ ನನಗೆ ತೋರುವುದು. ಓ ರಾಜಾ! ನಿನಗೆ ಸಮ್ಮತವಾಗಿದ್ದರೆ, ಅಲ್ಲಿಗೆ ದಂಡೆತ್ತಿ ಹೋಗುವುದೇ ಒಳ್ಳೆಯದೆಂದು ನನ್ನ ಅಭಿಮತವು. ಎಲ್ಲಾ ಕೌರವರಿಗೂ, ಮಹಾತ್ಮನಾದ ಕರ್ಣನಿಗೂ ಈ ಕಾರ್ಯವು ಸಮ್ಮತವಾಗಿಯೇ ಇರುವುದು. ಧನಧಾನ್ಯಗಳಿಂದ ಸಮೃದ್ಧವಾದ ಆ ವಿರಾಟನ ರಾಷ್ಟ್ರವನ್ನು ಇದಿರಿಸುವೆವು. ಅವನ ವಿವಿಧ ವಸ್ತುಗಳನ್ನೂ, ಅಲ್ಲಿನ ರತ್ನಾದಿಗಳನ್ನೂ ಕೊಳ್ಳೆಹೊಡೆಯುವೆವು. ಅವನ ಗ್ರಾಮಗಳನ್ನೂ ರಾಷ್ಟ್ರಗಳನ್ನೂ ಬೇರೆಬೇರೆಯಾಗಿ ನಾವು ವಶಮಾಡಿಕೊಳ್ಳುವೆವು. ಹಾಗಿಲ್ಲವೇ, ಅವನ ನಗರವನ್ನು ಬಲಾತ್ಕಾರದಿಂದಾಕ್ರಮಿಸಿ, ಅವನಲ್ಲಿರುವ ಸಾವಿರಾರು ಗೋವುಗಳನ್ನು ಹಿಡಿದುಕೊಳ್ಳುವೆವು. ಮಹಾರಥರಾದ ಕೌರವರೊಡನೆಯೂ, ತ್ರಿಗರ್ತ ಸೇನೆಯೊಡನೆಯೂ ಹೋಗಿ, ಅಲ್ಲಿನ ಗೋವುಗಳನ್ನೆಲ್ಲ ಸೆರೆಹಿಡಿಯುವೆವು. ಒಂದುವೇಳೆ ಅವನು ನಮಗೆ ಶರಣಾಗತನಾಗುವ ಪಕ್ಷದಲ್ಲಿ, ಅವನೊಡನೆ ಸಂಧಿಯನ್ನು ಮಾಡಿಕೊಂಡು, ಅವನ ಪೌರುಷವನ್ನೆಲ್ಲ ತಗ್ಗಿಸಿಬಿಡುವೆವು. ಅವನ ಸಮಸ್ತಸೈನ್ಯವನ್ನೂ ಕೊಂದು ಅವನನ್ನು ವಶಮಾಡಿಕೊಳ್ಳುವೆವು. ಅಥವಾ ನ್ಯಾಯಮಾರ್ಗದಿಂದಲೇ ಅವನನ್ನು ನಮ್ಮ ವಶಮಾಡಿಕೊಂಡು ನಾವು ಸುಖವಾಗಿರಬಹುದು. ಆಗ ಅವನೂ ನಮ್ಮಕಡೆಗೆ ಬರುವುದರಿಂದ, ಕೌರವರಾದ ನಿಮ್ಮ ಬಲವು ಹೆಚ್ಚಿದಂತಾಗುವುದು" ಎಂದನು.

ಓ ಜನಮೇಜಯರಾಜೇಂದ್ರಾ! ಸುಶರ್ಮನು ಹೇಳಿದ ಈ ಮಾತುಗಳನ್ನು ಕೇಳಿ ಕರ್ಣನು ತಿರುಗಿ ದುರ್ಯೋಧನನನ್ನು ಕುರಿತು "ಮಿತ್ರನೆ! ಸುಶರ್ಮನು ಹೇಳಿದ ಮಾತು ಕಾಲೋಚಿತವಾಗಿಯೂ, ಸಮಂಜಸವಾಗಿಯೂ ಇರುವುದು. ಆದುದರಿಂದ ನಾವು ಈಗಲೇ ಸೈನ್ಯವನ್ನು ಸೇರಿಸಿಕೊಂಡು ಹೊರಡುವೆವು. ನಿನ್ನ ಅಭಿಮತವಾವುದೋ ಅದೇ ನನಗೂ

ಸಮ್ಮತವು. ನಾವು ನಮ್ಮ ಸೈನ್ಯಗಳನ್ನೆಲ್ಲ ಬೇರೆಬೇರೆಯಾಗಿ ಹಂಚಿಕೊಂಡು ದಂಡೆತ್ತಿ ಹೋಗುವ ವಿಷಯದಲ್ಲಿ ನಿನ್ನ ಇಷ್ಟವೇನು ಹೇಳು. ನಮ್ಮೆಲ್ಲರಿಗೂ ಪಿತಾಮಹನಾದ ಭೀಷ್ಮನು ಒಳ್ಳೇ ಪ್ರಜ್ಞಾವಂತನು. ನಮ್ಮ ಕುಲಕ್ಕೆಲ್ಲ ದೊಡ್ಡವನು. ಆಚಾರ್ಯನಾದ ಈ ಕೃಪನೂ ಮಹಾಪ್ರಾಜ್ಞನು. ಇವರ ಮತ್ತು ಮಾವನಾದ ಈ ಶಕುನಿಯ ಅಭಿಪ್ರಾಯವನ್ನು ಕೇಳಿ, ಅವರೆಲ್ಲರೂ ಹೇಳುವಂತೆ ಸೈನ್ಯವನ್ನು ವಿಭಾಗಿಸಿ, ದಂಡಯಾತ್ರೆಗೆ ಹೊರಡುವೆವು. ಇದನ್ನು ಚೆನ್ನಾಗಿ ಆಲೋಚಿಸಿ ನಿಶ್ಚಯಿಸಿಕೊಂಡು, ನಮ್ಮ ಕಾರ್ಯಸಾಧನೆಗಾಗಿ ಬೇಗನೆ ಹೊರಡಬೇಕು. ಪಾಂಡವರ ವಿಚಾರವಾಗಿ ನಾವೇನೂ ಅಷ್ಟಾಗಿ ಈಗ ಯೋಚಿಸಬೇಕಾದ ಕಾರಣವೂ ಇಲ್ಲ. ಧನವನ್ನೂ, ಸೈನ್ಯವನ್ನೂ, ಪೌರುಷವನ್ನೂ ಕಳೆದುಕೊಂಡು ನಿರ್ಗತಿಕರಾಗಿರುವ ಆ ಪಾಂಡವರ ಭಯವು ನಮಗೇಕೆ? ಅವರು ಸಂಪೂರ್ಣವಾಗಿ ನಷ್ಟರಾದಂತೆಯೇ ತಿಳಿ. ಅವರು ಇಷ್ಟರಲ್ಲಿ ಯಮಪುರಿಗೆ ಹೋಗಿದ್ದರೂ ಇರಬಹುದು. ಆದುದರಿಂದ ಓ ಕೌರವರಾಜಾ! ಈಗಲೇ ನೀನು ಮಹತ್ತಾದ ನಿನ್ನ ಎಲ್ಲಾ ಚತುರಂಗಸೈನ್ಯಗಳೊಡನೆ ವಿರಾಟನಗರಕ್ಕೆ ದಂಡೆತ್ತಿ ಹೊರಡು. ವಿರಾಟನ ಗೋವುಗಳನ್ನೂ, ಅವನ ವಿವಿಧವಸ್ತುಗಳನ್ನೂ ಸಾಗಿಸಿ ತರುವೆವು'' ಎಂದನು. ಕರ್ಣನ ಈ ಮಾತುಗಳನ್ನು ಕೇಳಿ ದುರ್ಯೋಧನನು, ಯಾವಾಗಲೂ ತನ್ನ ಆಜ್ಞೆಯನ್ನು ಕಾದು ನಿಂತಿರುವ ತಮ್ಮನಾದ ದುಶ್ಶಾಸನನನ್ನು ನೋಡಿ "ದುಶ್ಶಾಸನಾ! ದೊಡ್ಡವರೊಡನೆ ಆಲೋಚಿಸಿ ನಮ್ಮ ಸೈನ್ಯಗಳನ್ನು ಸಿದ್ಧಪಡಿಸು. ಎಲ್ಲಾ ಕೌರವರನ್ನೂ ಕೂಡಿಸಿಕೊಂಡು, ಅವರವರ ಇಷ್ಟಾನುಸಾರವಾಗಿ ಬೇರೆಬೇರೆ ಪ್ರದೇಶಗಳಿಗೆ ದಂಡೆತ್ತಿ ಹೋಗುವಂತೆ ಮಾಡು. ಮಹಾರಥನೆನಿಸಿದ ಸುಶರ್ಮನು ಬಲಪೌರುಷಗಳಿಂದ ಪ್ರಸಿದ್ಧರಾದ ಎಲ್ಲಾ ತ್ರಿಗರ್ತಸೈನ್ಯಗಳೊಡನೆ, ಅವನಿಗೆ ಉದ್ದಿಷ್ಟವಾದ ಕಡೆಗೆ ದಂಡೆತ್ತಿ ಹೊರಡಲಿ! ಅವನು ಎಲ್ಲವನ್ನೂ ಸಿದ್ಧಪಡಿಸಿಕೊಂಡು ಮುಂದಾಗಿಯೇ ವಿರಾಟನಗರಕ್ಕೆ ಹೋಗಲಿ! ಆಮೇಲೆ ಒಂದು ದಿವಸವನ್ನು ಬಿಟ್ಟುಕೊಂಡು ಅವನ ಹಿಂದೆ ನಾವು ಹೊರಡುವೆವು. ಈ ಸುಶರ್ಮನು ಮುಂದಾಗಿ ಹೋಗಿ, ಸಂಪತ್ಸಮೃದ್ಧವಾದ ಮತ್ಸ್ಯದೇಶವನ್ನೂ, ಅವನ ಗೋಧನವನ್ನೂ ಹಿಡಿದುಕೊಂಡರೆ, ವಿರಾ

ನೆಂಬವನು ಮೇಲುಭಾಗದಲ್ಲಿ ನೂರು ಕಮಲಗಳಿಂದಲೂ, ನೂರು ಸೌಗಂಧಿಕಗಳಿಂದಲೂ ಚಿತ್ರಿತವಾಗಿ, ಅಂಚಿನಲ್ಲಿ ಸುವರ್ಣದ ರೇಖೆಯಿಂದ ಅಲಂಕರಿಸಲ್ಪಟ್ಟ ಕವಚವನ್ನು ಧರಿಸಿಕೊಂಡನು. ವೀರನೂ, ವಿರಾಟನ ಜ್ಯೇಷ್ಠಕುಮಾರನೂ ಆದ ಶಂಖನೆಂಬವನು, ದೃಢವಾಗಿಯೂ, ಅಯೋನಿರ್ಮಿತವಾಗಿಯೂ, ಸುವರ್ಣಾಲಂಕೃತವಾಗಿಯೂ ಇರುವ ಒಂದು ಕವಚವನ್ನು ಧರಿಸಿದನು. ಮತ್ಸ್ಯಾಧಿಪತಿಯಾದ ವಿರಾಟನೂ ಕೂಡ ನೂರು ಸೂರ್ಯಪ್ರತಿಮೆಗಳೂ, ನೂರುಸುಳಿಗಳೂ, ನೂರು ಚುಕ್ಕಿಗಳೂ, ನೂರು ಕಣ್ಣುಗಳೂ, ಉಳ್ಳ, ಮತ್ತು ದುರ್ಭೇದ್ಯವಾದ ಒಂದು ಕವಚವನ್ನು ತೊಟ್ಟುಕೊಂಡನು. ಹೀಗೆಯೇ ಮಹಾಬಲಾಢ್ಯರೂ, ಯುದ್ಧೋತ್ಸಾಹವುಳ್ಳವರೂ, ದೇವಸಮಾನರೂ, ವಿವಿಧಶಸ್ತ್ರಧಾರಿಗಳೂ ಆದ ವೀರರೆಲ್ಲರೂ, ಅವರವರಿಗೆ ಯೋಗ್ಯವಾದ ನಾನಾಬಗೆಯ ಕವಚಗಳನ್ನು ಧರಿಸಿಕೊಂಡು ಸಿದ್ಧರಾದರು. ಮಹಾರಥರುಗಳು ಸಮಸ್ತ ಸಾಮಗ್ರಿಗಳಿಂದ ಸಿದ್ಧವಾಗಿಯೂ, ಬಿಳುಪಾಗಿಯೂ, ಮಹತ್ತಾಗಿಯೂ ಇರುವ ರಥಗಳಲ್ಲಿ ಸುವರ್ಣಾಲಂಕೃತಗಳಾದ ಕುದುರೆಗಳನ್ನು ಕಟ್ಟಿ ಸಿದ್ಧರಾದರು. ಸೂರ್ಯಚಂದ್ರರಿಗೆ ಸಮಾನವಾಗಿಯೂ ಸುವರ್ಣರತ್ನಶೋಭಿತವಾಗಿಯೂ ಇರುವ ಮತ್ಸ್ಯರಾಜನ ರಥದಲ್ಲಿ, ಮಹಾಪ್ರಮಾಣವುಳ್ಳ ಒಂದು ದೊಡ್ಡ ಧ್ವಜವು ಏರಿಸಲ್ಪಟ್ಟಿತು. ಶೂರರಾದ ಇತರರಾಜರೂ ಕೂಡ ತಮ್ಮತಮ್ಮ ರಥಗಳಲ್ಲಿ ಬೇರೆಬೇರೆ ಆಕೃತಿಗಳುಳ್ಳ ಸುವರ್ಣ ಧ್ವಜಗಳನ್ನು, ಚಿನ್ನದ ಮಾಲಿಕೆಗಳಿಂದ ಅಲಂಕರಿಸಿ ಕಟ್ಟಿದರು. ಹೀಗೆ ರಥಗಳು ಸಿದ್ಧವಾಗುತ್ತಿರುವಾಗ, ಕಂಕಸನ್ಯಾಸಿಯು (ಯುಧಿಷ್ಠಿರನು) ವಿರಾಟನನ್ನು ಕುರಿತು, "ಎಲೆ ರಾಜೇಂದ್ರಾ! ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವರ್ಗಗಳಿಗೂ ಸಾಧಕವಾದ ಅಸ್ತ್ರವು ನನಗೆ ಒಬ್ಬ ಋಷಿಶ್ರೇಷ್ಠರ ಅನುಗ್ರಹದಿಂದ ಲಭಿಸಿದೆ. ಆದುದರಿಂದ ನಾನೂ ಕವಚವನ್ನು ಧರಿಸಿ, ರಥವನ್ನೇರಿ ಆ ಗೋವುಗಳಿರುವ ಸ್ಥಳಕ್ಕೆ ಹೊರಡುವೆನು. ಮತ್ತು ನಮ್ಮ ಅಡಿಗೆಯ ಮನೆಯಲ್ಲಿರುವ ವಲಲನೂಕೂಡ ಒಳ್ಳೆಯ ಬಲಶಾಲಿಯಾದ ಶೂರನಂತೆ ಕಾಣುತ್ತಿರುವನು. ಮತ್ತು ನಮ್ಮಲ್ಲಿ ಪಶುರಕ್ಷಕನಾದ ತಂತ್ರೀಪಾಲನನ್ನೂ, ಅಶ್ವರಕ್ಷಕನಾದ ದಾಮಗ್ರಂಥಿಯನ್ನೂ ರಥದಮೇಲೇರಿ ಹೊರಡುವಂತೆ ನಿಯಮಿಸು. ಈಗ ಗೋವುಗ

ಳನ್ನು ಹಿಡಿಯುವುದಕ್ಕಾಗಿ ಬಂದವರು ಯಾರೂ ಇವರೊಡನೆ ಯುದ್ಧ ಮಾಡಲಾರರೆಂದು ನಾನೆಣಿಸುವೆನು'' ಎಂದನು.

ಆಮೇಲೆ ವಿರಾಟನು, ತನ್ನ ತಮ್ಮನಾದ ಶತಾನೀಕನನ್ನು ಕರೆದು "ಎಲೈ ಸಹೋದರನೇ! ಈ ಕಂಕಸನ್ಯಾಸಿಯೂ, ನಮ್ಮ ಅಡಿಗೆಯವನಾದ ವಲಲನೂ, ದಾಮಗ್ರಂಥಿಯೂ, ಗೋಪಾಲಕನಾದ ತಂತ್ರೀಪಾಲನೂ ಬಹಳ ಶೂರರಂತೆಯೂ, ವೀರರಂತೆಯೂ, ಪುರುಷಶ್ರೇಷ್ಠರಂತೆಯೂ ತೋರುವುದು. ಉತ್ತಮವಾದ ಗಜರಾಜನಂತೆ ಬಲವುಳ್ಳ ಅವರು, ರಣ ರಂಗದಲ್ಲಿ ಚೆನ್ನಾಗಿ ಯುದ್ಧಮಾಡಬಲ್ಲರೆಂದೂ ನನಗೆ ತೋರಿದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಆದುದರಿಂದ ಧ್ವಜಪತಾಕೆಗಳಿಂದ ಅಲಂ ಕೃತಗಳಾದ ರಥಗಳನ್ನೂ, ದೃಢವಾಗಿಯೂ, ಹಗುರವಾಗಿಯೂ ಇರುವ ಯುದ್ಧಕವಚಗಳನ್ನೂ ಇವರಿಗೂ ಒದಗಿಸಿ ಕೊಡು. ಇವರಿಗೆ ಬೇಕಾದ ಆಯುಧಗಳನ್ನೂ ಸಿದ್ಧಪಡಿಸು. ನಿಶ್ಚಯವಾಗಿ ಇವರು ಯುದ್ಧಮಾಡದೆ ಇರಲಾರರು'' ಎಂದನು. ಈ ಮಾತನ್ನು ಕೇಳಿದೊಡನೆ, ಶತಾನೀಕನು ಆತುರದಿಂದ ಹೋಗಿ ಪಾಂಡವರಿಗಾಗಿ ರಥಗಳನ್ನು ತರುವಂತೆ ಆಜ್ಞಾಪಿಸಿ ದನು. ಧರ್ಮರಾಜ, ಭೀಮ, ನಕುಲ, ಸಹದೇವರೆಂಬ ನಾಲ್ವರಿಗೂ ರಥ ಗಳು ಸಿದ್ಧವಾದುವು. ರಾಜಭಕ್ತಿಯುಳ್ಳ ಸಾರಥಿಗಳು ಒಳ್ಳೆಯ ಕುದು ರೆಗಳನ್ನು ತಂದು ರಥಗಳಿಗೆ ಹೂಡಿದರು. ಅದರಂತೆಯೇ ವಿರಾಟನ ಆಜ್ಞೆ ಯಿಂದ ಮಹಾರಥರಾದ ಪಾಂಡವರಿಗೆ, ವಿಚಿತ್ರಗಳಾಗಿಯೂ, ಹೊಸದಾ ಗಿಯೂ, ದೃಢವಾಗಿಯೂ ಇರುವ ಯುದ್ಧಕವಚಗಳೂ ತಂದಿಡಲ್ಪಟ್ಟುವು. ಬಲಶಾಲಿಗಳೂ, ಸರ್ವಶಾಸ್ತ್ರವಿಶಾರದರೂ, ಗುಪ್ತರೂಪವುಳ್ಳವರೂ ಆದ ಪಾಂಡವರು, ಆ ಕವಚಗಳನ್ನು ತೊಟ್ಟು, ಸುವರ್ಣಾಲಂಕೃತಗಳಾದ ರಥಗ ಳನ್ನೇರಿ, ಅತ್ಯುತ್ಸಾಹದಿಂದ ವಿರಾಟನ ಹಿಂದೆ ಯುದ್ಧರಂಗಕ್ಕೆ ಹೊರಟರು. ಪಾಂಡುಪುತ್ರರಾದ ನಾಲ್ಕುಮಂದಿ ಸಹೋದರರೂ, ದೃಢವಾದ, ಉದ್ದವಾದ ಬಿಲ್ಲುಗಳನ್ನು ತೆಗೆದುಕೊಂಡು ಅದಕ್ಕೆ ನಾಣನ್ನೆಳೆದುಕಟ್ಟಿದರು. ಒಳ್ಳೆಯ ವಸ್ತ್ರಚಂದನಾದಿಗಳಿಂದಲಂಕೃತರಾದ ಆ ನಾಲ್ಕುಮಂದಿ ಸಹೋದರರೂ ವಿರಾಟರಾಜನಿಂದ ಪ್ರೇರಿತರಾಗಿ, ಕುದುರೆಗಳನ್ನು ತಟ್ಟಿ, ರಥವನ್ನು ಮುಂದೆ

ಬಾಣಪ್ರಯೋಗಮಾಡುತ್ತಿರುವ ಆ ವೀರರು, ಕೈಯಲ್ಲಿ ಹಿಡಿದಿರುವ ಚಿನ್ನದ ಬೆನ್ನುಪಟ್ಟಿಗಳುಳ್ಳ ಬಿಲ್ಲುಗಳು, ಮಿಂಚಿನಂತೆ ಹೊಳೆಯುತ್ತಿದ್ದುವು. ರಥಗಳು ರಥಗಳೊಡನೆಯೂ, ಪದಾತಿಗಳು ಪದಾತಿಗಳೊಡನೆಯೂ, ಕುದುರೆಯ ರಾವುತರು ರಾವುತರುಗಳೊಡನೆಯೂ, ಆನೆಗಳು ಆನೆಗಳೊಡನೆಯೂ ಕೈಕಲೆತುವು. ಅಲ್ಲಿದ್ದ ಯೋಧರು ಕತ್ತಿ, ಪಟ್ಟಸ, ಶಕ್ತಿ, ತೋಮರ, ಮೊದಲಾದ ಆಯುಧಗಳಿಂದ ಒಬ್ಬರನ್ನೊಬ್ಬರು ಹೊಡೆಯುತಿದ್ದರು. ದೊಡ್ಡ ಪರಿಘಗಳನ್ನು ಕೈಯಲ್ಲಿ ಹಿಡಿದು ಮಹೋತ್ಸಾಹದಿಂದ ಒಬ್ಬರನ್ನೊಬ್ಬರು ಬಡಿದು ಕೊಲ್ಲುತ್ತಿದ್ದರು. ಇಷ್ಟಾದರೂ ಆ ಯುದ್ಧದಲ್ಲಿ ಒಬ್ಬರಿಗೊಬ್ಬರು ಭಯಪಟ್ಟು ಹಿಂತಿರುಗಿದವರಾರೂ ಇಲ್ಲ. ಆ ರಣರಂಗದಲ್ಲಿ ಕೆಂಪಾದ ತುಟಿಗಳಿಂದಲೂ, ಅಂದವಾದ ಮೂಗಿನಿಂದಲೂ, ತಿದ್ದಿದ ಮೀಸೆಗಳಿಂದಲೂ, ಒಳ್ಳೆಯ ಅಲಂಕಾರಗಳಿಂದಲೂ ಕೂಡಿದ ತಲೆಗಳು ಮುಂಡದಿಂದ ಬೇರೆಯಾಗಿ, ನೆಲದ ದೂಳಿನಿಂದ ಮಾಸಿದ ಕುಂಡಲಗಳೊಡನೆ ಕೆಳಗೆ ಬಿದ್ದಿದ್ದುವು. ಇದಲ್ಲದೆ, ಅಲ್ಲಲ್ಲಿ ರಣಯೋಧರಿಂದ ಕಡಿಯಲ್ಪಟ್ಟ ಕ್ಷತ್ರಿಯ ಶರೀರಗಳೂ ದೊಡ್ಡ ಮರದಕೊಂಬೆಗಳಂತೆ ನೆಲದಮೇಲೆ ನಾನಾ ಕಡೆಗಳಲ್ಲಿ ಬಿದ್ದಿದ್ದುವು. ಸರ್ಪಶರೀರಕ್ಕೆ ಸಮಾನವಾಗಿ, ಚಂದನಾನುಲೇಪಿತಗಳಾದ ತೋಳುಗಳೊಂದು ಕಡೆ! ಕುಂಡಲಸಹಿತಗಳಾದ ತಲೆಗಳೊಂದು ಕಡೆ! ಮುಂಡಗಳೊಂದು ಕಡೆ! ಹೀಗೆ ಶರೀರಾವಯವಗಳೆಲ್ಲವೂ ಆ ರಣರಂಗದ ಎಲ್ಲಾ ಕಡೆಗಳಲ್ಲಿಯೂ ಭಿನ್ನಭಿನ್ನವಾಗಿ ಬಿದ್ದಿದ್ದುವು. ಹೀಗೆ ಸುವರ್ಣಾಲಂಕೃತವಾಗಿ ಬಿದ್ದಿದ್ದ ಶರೀರಾವಯವಗಳಿಂದ, ಆ ರಣಭೂಮಿಯು ಸುವರ್ಣರೇಖೆಗಳಿಂದ ಅಲಂಕೃತವಾದ ಎರಡು ಸೀರೆಗಳನ್ನುಟ್ಟ ಒಬ್ಬ ಯುವತಿಯಂತೆ ಕಾಣುತ್ತಿತ್ತು. ಪ್ರಬಲವಾಗಿ ಎದ್ದಿದ್ದ ರಣಧೂಳಿಯು ಆಗಾಗಲೇ ರಕ್ತದ ಮಳೆಗಳಿಂದ ಅಡಗುತಿತ್ತು. ಆಗ ವಿರಾಟನ ಸೈನ್ಯವೆಲ್ಲ ಮಿತಿಮೀರಿದ ಮೋಹಾವೇಶದಿಂದ ಕೈಕಾಲುಗಳಾಡದಂತೆ ನಿಶ್ಚೇಷ್ಟವಾಯಿತು. ಆಗ ಧರ್ಮಾತ್ಮನಾದ ಯುಧಿಷ್ಠಿರನು ತನ್ನ ಸಹೋದರರೊಡನೆ ಸೇನೆಗಳನ್ನು ವ್ಯೂಹವಾಗಿ ಸಿದ್ಧಪಡಿಸಿಕೊಂಡು, ವಿರಾಟನಿಗೆ ಬೆಂಬಲವಾಗಿ ಯುದ್ಧಕ್ಕೆ ನಿಂತನು. ಧರ್ಮರಾಜನು ತನ್ನ ಸೈನ್ಯವನ್ನು ಒಂದು ಗಿಡುಗನ ಆಕಾರಕ್ಕೆ ನಿಲ್ಲಿಸಿ, ತಾನು ಅದರ ಕೊಕ್ಕಿನ ಸ್ಥಾನಕ್ಕೆ ನಿಂತನು.

ನಕುಲ ಸಹದೇವರು ಎರಡು ರೆಕ್ಕೆಗಳಾದರು. ಬಾಲದ ಕಡೆಗೆ ಭೀಮನು ನಿಂತನು. ಈ ಸೇನಾವ್ಯೂಹದ ಸಹಾಯದಿಂದ ಧರ್ಮರಾಜನು ಸಾವಿರಾರು ಶತ್ರುಸೈನ್ಯವನ್ನು ಕೊಂದನು. ಕ್ರುದ್ಧನಾದ ಭೀಮಸೇನನು ಎರಡುಸಾವಿರ ರಥಿಕರನ್ನು ಕೊಂದನು. ನಕುಲನು ಮುನ್ನೂರು ರಥಿಕರನ್ನೂ, ಸಹದೇವನು ನಾನೂರು ಮಂದಿಯನ್ನೂ ಹೊಡೆದುಕೊಂದನು. ಮಹಾಬಲಿಷ್ಠನಾದ ಶತಾನೀಕನು ನೂರುರಥಿಕರನ್ನೂ, ಮದಿರಾಶ್ವನು ನಾನೂರುಮಂದಿಯನ್ನೂ ಕೊಂದನು. ಬಲಿಷ್ಠರಾದ ಶತಾನೀಕ ಮದಿರಾಶ್ವರಿಬ್ಬರೂ ಉತ್ಸಾಹದಿಂದಿದ್ದ ತ್ರಿಗರ್ತರ ಸೇನೆಯಲ್ಲಿ ಪ್ರವೇಶಿಸಿ, ವೀರಾವೇಶದಿಂದ ಆ ಸೈನ್ಯಗಳನ್ನು ಕೊಲ್ಲುವುದಕ್ಕಾರಂಭಿಸಿದರು. ಒಬ್ಬರಿಗೊಬ್ಬರು ತಲೆಕೂದಲುಗಳನ್ನು ಹಿಡಿದು, ರಥಗಳಮೇಲೆ ರಥಗಳನ್ನು ಬಿಟ್ಟು ಹೋರಾಡಿದರು. ಹೀಗೆ ಶತಾನೀಕ ಮದಿರಾಶ್ವರಿಬ್ಬರೂ ಧೈರ್ಯದಿಂದ ತ್ರಿಗರ್ತರ ಸೈನ್ಯಗಳೊಳಗೆ ಪ್ರವೇಶಿಸಿದುದನ್ನು ಕಂಡು, ಸೂರ್ಯದತ್ತನೂ, ವಲಲನೂ ಅವರನ್ನು ಹಿಂಬಾಲಿಸಿದರು. ಮಹಾಧನುರ್ಧಾರಿಯೂ, ಬಲಶಾಲಿಯೂ ಆದ ವಿರಾಟಪುತ್ರನಾದ ಶಂಖನೂಕೂಡ, ಮುಂದೆ ಬಂದ ಸೂತಪುತ್ರರನ್ನು ಕೊಲ್ಲುತ್ತ ಸೈನ್ಯದೊಳಗೆ ಪ್ರವೇಶಿಸಿದನು. ಮತ್ತೊಂದು ಕಡೆಯಲ್ಲಿ ವಿರಾಟನು ರಥದ ಮೇಲೆ ಕುಳಿತು ನಾನಾಕಡೆಗೆ ತಿರುಗುತ್ತ ಐನೂರು ರಥಗಳನ್ನೂ, ನೂರು ಆನೆಗಳನ್ನೂ, ಸಾವಿರ ಕುದುರೆಗಳನ್ನೂ ಧ್ವಂಸಮಾಡಿದುದಲ್ಲದೆ, ಆಮೇಲೆ ಸುವರ್ಣಮಯವಾದ ರಥದಲ್ಲಿ ಕುಳಿತಿದ್ದ ತ್ರಿಗರ್ತರಾಜನಾದ ಸುಶರ್ಮನನ್ನು ಇದಿರಿಸಿದನು. ಬಲಾಢ್ಯರಾದ ಮತ್ತು ಮಹಾ ಧನುರ್ಧಾರಿಗಳಾದ ಆ ವೀರರಿಬ್ಬರೂ, ದನಗಳ ಮುಂದೆಯಲ್ಲಿ ಗೂಳಿಗಳೆರಡು ಹೋರಾಡುವಂತೆ ಒಬ್ಬರನ್ನೊಬ್ಬರು ಇದಿರಿಸಿ ಯುದ್ಧಮಾಡುತ್ತಿದ್ದರು. ಇಬ್ಬರೂ ರಾಜರಲ್ಲಿ ಸಿಂಹದಂತಿರುವರು! ಇಬ್ಬರೂ ಯುದ್ಧೋತ್ಸಾಹವುಳ್ಳವರು! ಇಬ್ಬರೂ ತಮ್ಮ ತಿರಸ್ಕಾರವನ್ನು ಸಹಿಸಲಾರದವರು! ಇಬ್ಬರೂ ಅಸ್ತ್ರವಿದ್ಯೆಯನ್ನು ಕಲಿತವರು! ಇವರಿಬ್ಬರೂ ಕತ್ತಿ, ಕೊಡಲಿ, ಶಕ್ತಿ, ತೀಕ್ಷ್ಣಬಾಣಗಳು ಇವುಗಳನ್ನೆಲ್ಲ ಪ್ರಯೋಗಿಸಿ, ಒಬ್ಬರನ್ನೊಬ್ಬರು ಹೊಡೆಯುತ್ತಿದ್ದರು. ಇಬ್ಬರೂ ರಥಾರೂಢರಾಗಿ ಮೇಘಗಳು ಮಳೆಯನ್ನು ಕರೆಯುವಂತೆ ಬಾಣಗಳನ್ನು ವರ್ಷಿಸುತ್ತಿದ್ದರು. ಆನೆಗಳು ತಮ್ಮ ತೀಕ್ಷ್ಣದಂತಗಳಿಂದ ತಿವಿದಾ

ಡುವಂತೆ ಒಬ್ಬರನ್ನೊಬ್ಬರು ಬಾಣಗಳಿಂದ ನೋಯಿಸುತ್ತಿದ್ದರು. ಹೀಗಿರುವಲ್ಲಿ ವಿರಾಟನು ತನ್ನ ಐದು ತೀಕ್ಷ್ಣಬಾಣಗಳಿಂದ ಸುಶರ್ಮನನ್ನು ಬಲವಾಗಿ ನೋಯಿಸಿದನು. ಬೇರೆ ಐದು ಬಾಣಗಳಿಂದ ಅವನ ಕುದುರೆಯನ್ನೂ, ಇನ್ನೆರಡು ಬಾಣಗಳಿಂದ ಅವನ ಸಾರಥಿಯನ್ನೂ ಹೊಡೆದನು. ಮೂರು ಬಾಣಗಳಿಂದ ಅವನ ಧ್ವಜವನ್ನು ಮುರಿದು ಹಾಕಿದನು. ಆದರೇನು? ಯುದ್ಧದಲ್ಲಿ ಕೊಬ್ಬಿದ ಸುಶರ್ಮನೂಕೂಡ, ಉತ್ತಮಾಸ್ತ್ರಗಳನ್ನು ಬಲ್ಲವನಾದುದರಿಂದ, ಐವತ್ತು ತೀಕ್ಷ್ಣಬಾಣಗಳನ್ನು ವಿರಾಟನಮೇಲೆ ಏಕಕಾಲದಲ್ಲಿ ಪ್ರಯೋಗಿಸಿ, ಬಹಳವಾಗಿ ನೋಯಿಸಿದನು. ಓ ರಾಜೇಂದ್ರಾ! ಆಗ ಸಂಧ್ಯಾಕಾಲದ ಮಬ್ಬು ಕವಿದು, ರಣಧೂಳಿಯು ಆಕಾಶವನ್ನೆಲ್ಲ ಮರೆಸಿ ವ್ಯಾಪಿಸಿದ್ದುದರಿಂದ, ಆ ವಿರಾಟ ಸುಶರ್ಮರ ಸೈನ್ಯಗಳೆರಡೂ ಒಂದನ್ನೊಂದು ನೋಡಲಾರದೆ ಕಳವಳಿಸುತಿದ್ದುವು.

ಇದು ಮೂವತ್ತನಾಲ್ಕನೆಯ ಅಧ್ಯಾಯವು.

ಸುಶರ್ಮನು ಯುದ್ಧದಲ್ಲಿ ವಿರಾಟನನ್ನು ಸೆರೆ ಹಿಡಿದುದು.
ಯುಧಿಷ್ಠಿರನ ಸೂಚನೆಯಮೇಲೆ ಭೀಮನು ವಿರಾಟನನ್ನು ಬಿಡಿಸಿ ಸುಶರ್ಮನನ್ನು ಸೆರೆ ಹಿಡಿದುದು.
ಯುಧಿಷ್ಠಿರನು ಕರುಣೆಯಿಂದ ಸುಶರ್ಮನನ್ನು ಬಿಡಿಸಿ ಕಳುಹಿಸಿದುದು.

ಓ ಜನಮೇಜಯರಾಜನೆ ಕೇಳು! ಹೀಗೆ ಸಾಯಂಕಾಲದ ಮಬ್ಬು ಕವಿದು, ರಣಧೂಳಿಯು ಆಕಾಶವನ್ನೆಲ್ಲ ತುಂಬಿಕೊಂಡಿರಲು, ಒಂದು ಮುಹೂರ್ತಕಾಲದವರೆಗೆ ಆ ಸೈನ್ಯಗಳೆರಡೂ ಯುದ್ಧಕಾರ್ಯವನ್ನು ನಡೆಸಲಾರದೆ ಸುಮ್ಮನಾದುವು. ಇಷ್ಟರಲ್ಲಿಯೇ ಚಂದ್ರೋದಯವಾಗಿ ಕತ್ತಲೆಯು ಸ್ವಲ್ಪ ನೀಗುತ್ತ ಬಂದು, ರಾತ್ರಿಯು ಸ್ವಚ್ಛವಾಯಿತು. ಆ ಬೆಳಕಿನಲ್ಲಿ ಒಬ್ಬರನ್ನೊಬ್ಬರು ನೋಡುವಂತಾಯಿತು. ಆಮೇಲೆ ತಿರುಗಿ ಭಯಂಕರ ಯುದ್ಧವು ಆರಂಭವಾಯಿತು. ಆ ತುಮುಲಯುದ್ಧದಲ್ಲಿ ಎರಡು ಸೈನ್ಯಗಳೂ ಕೋಪಾವೇಶದಿಂದ, ಗದೆ, ಕತ್ತಿ, ಪಟ್ಟಸ, ಕೊಡಲಿ, ಒಳ್ಳೆಯ ತೀಕ್ಷ್ಣ

ವಾದ ಅಲಗುಗಳಿಂದ ಹೊಳೆಯುವ ಪ್ರಾಸಗಳು, ಈ ಮುಂತಾದ ಆಯುಧಗಳನ್ನು ಹಿಡಿದುಒಬ್ಬರಿಗೊಬ್ಬರು ಮೇಲೆ ಬಿದ್ದು, ಹೊಡೆಯುವುದಕ್ಕಾರಂಭಿಸಿದರು. ಇಷ್ಟರಲ್ಲಿ ತ್ರಿಗರ್ತರಾಜನಾದ ಸುಶರ್ಮನು, ತನ್ನ ಬಲದಿಂದ ವಿರಾಟಸೈನ್ಯವೆಲ್ಲವನ್ನೂ ಬಲವಾಗಿ ನೋಯಿಸಿ ಜಯಹೊಂದಿ ವಿರಾಟನಿಗಿದಿರಾಗಿ ಓಡಿದನು. ಕೊಬ್ಬಿದ ಎರಡು ವೃಷಭಗಳಂತೆಯೂ, ಎರಡು ಮದದಾನೆಗಳಂತೆಯೂ, ಆನೆಗಳನ್ನು ಹಿಡಿಯತಕ್ಕ ಎರಡು ಸಿಂಹಗಳಂತೆಯೂ, ಇಂದ್ರವೃತ್ರರಂತೆಯೂ, ಅವರಿಬ್ಬರೂ ಯುದ್ಧವನ್ನಾರಂಭಿಸಿದರು. ಇಬ್ಬರೂ ಸಮಾನಬಲವುಳ್ಳವರು. ಇಬ್ಬರೂ ಸಮಾನವಾದ ಯುದ್ಧೋತ್ಸಾಹವುಳ್ಳವರು. ಇಬ್ಬರೂ ಸಮಾನಪರಾಕ್ರಮವುಳ್ಳವರು. ಇಬ್ಬರೂ ಸಮಾನವಾದ ಅಸ್ತ್ರಚಾತುರ್ಯವುಳ್ಳವರು. ಇಬ್ಬರೂ ಯುದ್ಧದಲ್ಲಿ ನಿಪುಣರು. ಒಬ್ಬರನ್ನೊಬ್ಬರು ಕೋಪದಿಂದಿದಿರಿಸಿ, ಅನ್ಯೋನ್ಯವಾಗಿ ರಥಾಶ್ವಗಳನ್ನೂ, ಸಾರಥಿಗಳನ್ನೂ ಕೊಂದರು. ಇಬ್ಬರೂ ವಿರಥರಾದರು. ಆಗಲೂ ಬಿಡದೆ ಇಬ್ಬರೂ ಕೃಷ್ಣಕಂಸರಂತೆ ಹೆಮ್ಮೆಯಿಂದ ಯುದ್ಧವನ್ನು ನಡೆಸುತ್ತಿದ್ದರು. ಆಮೇಲೆ ಸುಶರ್ಮನು ತನ್ನ ತಮ್ಮನಾದ ಸುವರ್ಮನೊಡನೆ ಕೂಡಿಕೊಂಡು, ಅನೇಕ ರಥಸಮೂಹಗಳೊಡನೆ ನಾನಾಕಡೆಯಿಂದ ಮತ್ಸ್ಯರಾಜನನ್ನು ಬೆನ್ನಟ್ಟಿದನು. ಸ್ವಲ್ಪ ಹೊತ್ತಿನಮೇಲೆ ಆ ಅಣ್ಣತಮ್ಮಂದಿರಿಬ್ಬರೂ ತಮ್ಮ ರಥಗಳಿಂದ ಕೆಳಕ್ಕೆ ಧುಮುಕಿ, ಗದೆಗಳನ್ನು ಕೈಯಲ್ಲಿ ಹಿಡಿದು ವೇಗದಿಂದ ವಿರಾಟನನ್ನಿದಿರಿಸಿದರು. ಬಲಶಾಲಿಯಾದ ಸುಶರ್ಮನು ಗದಾಮಾತ್ರಸಹಾಯನಾಗಿ ಮುಂದೆ ಹೋಗಿ, ವಿರಥನಾದ ವಿರಾಟನನ್ನು ಜೀವದೊಂದಿಗೆ ಸೆರೆಹಿಡಿದುಬಿಟ್ಟನು. ಕಾಮುಕನಾದವನು ತಾನು ಮೋಹಿಸಿದ ಯುವತಿಯನ್ನು ಹೇಗೋ ಹಾಗೆ, ಸುಶರ್ಮನು ಮತ್ಸ್ಯರಾಜನನ್ನು ಹಿಡಿದೆಳೆದು, ತನ್ನ ರಥದಮೇಲೇರಿಸಿಕೊಂಡು, ಹಿಂತಿರುಗಿ ಹೊರಟನು. ವಿರಾಟನು ಸುಶರ್ಮನ ಕೈಗೆ ಸೆರೆಸಿಕ್ಕಿದುದನ್ನು ನೋಡಿ ಮತ್ಸ್ಯಸೈನ್ಯವೆಲ್ಲವೂ ಉತ್ಸಾಹಭಂಗದಿಂದ ಭಯಪಟ್ಟು ಬೆದರಿಹೋಯಿತು. ತ್ರಿಗರ್ತಸೈನ್ಯಗಳಿಗೆ ಉತ್ಸಾಹವು ಹೆಚ್ಚಿ, ಮತ್ಸ್ಯರನ್ನು ಸಿಕ್ಕಿದಹಾಗೆ ಹೊಡೆಯುವುದಕ್ಕಾರಂಭಿಸಿದುವು. ಆಗ ಮತ್ಸ್ಯಸೈನ್ಯಗಳು ನಾನಾದಿಕ್ಕುಗಳಿಗೆ ಪಲಾಯನಮಾಡುತ್ತಿದ್ದುವು. ವಿರಾಟಸೈನ್ಯವು ಹೀಗೆ ಚದರಿಹೋಗುತ್ತಿರುವುದನ್ನು ಕಂಡು

ಧರ್ಮಾತ್ಮನಾದ ಯುಧಿಷ್ಠಿರನು ಭೀಮಸೇನನನ್ನು ನೋಡಿ, "ಓ ಮಹಾಬಾಹೂ! ಅದೋ! ವಿರಾಟನನ್ನು ಸುಶರ್ಮನು ಹಿಡಿದುಬಿಟ್ಟಿರುವನು. ಸುಶರ್ಮನಲ್ಲಿ ಸಿಕ್ಕಿ ಸಂಕಟಕ್ಕೊಳಗಾಗಿರುವ ಮತ್ಸ್ಯರಾಜನನ್ನು ಕಾಪಾಡು. ನಮ್ಮೆಲ್ಲರಿಗೂ ಹಿತವನ್ನುಂಟುಮಾಡಿದ ವಿರಾಟನನ್ನು ಶತ್ರುಗಳ ಸೆರೆಯಿಂದ ಬೇಗನೆ ಬಿಡಿಸು. ಕಳೆದ ಒಂದು ವರ್ಷದಿಂದ ನಾವೆಲ್ಲರೂ ಇವನ ಆಶ್ರಯದಲ್ಲಿ ಸುಖವಾಗಿರುತಿದ್ದೆವು. ಅವನೂ ನಮ್ಮ ಕೋರಿಕೆಗಳನ್ನೆಲ್ಲ ಈಡೇರಿಸಿ ನಮ್ಮನ್ನು ಚೆನ್ನಾಗಿ ಸತ್ಕರಿಸುತಿದ್ದನು. ಓ ಭೀಮಸೇನಾ! ಅಂತವನಿಗೆ ಈಗ ನಾವು ಪ್ರತ್ಯುಪಕಾರವನ್ನು ತೋರಿಸಬೇಕು" ಎಂದನು. ಈ ಮಾತನ್ನು ಕೇಳಿ ಭೀಮನು, ಆ ರಣಮಧ್ಯದಲ್ಲಿಯೇ ಯುಧಿಷ್ಠಿರನನ್ನು ಕುರಿತು "ಎಲೈ ಪೂಜ್ಯನೆ! ನಿನ್ನ ಆಜ್ಞೆಯಂತೆಯೇ ಅವನನ್ನು ನಾನು ರಕ್ಷಿಸುವೆನು. ಯುದ್ಧದಲ್ಲಿ ಈಗ ನಾನು ಶತ್ರುಗಳೊಡನೆ ನಡೆಸುವ ಮಹತ್ತಾದ ಕಾರ್ಯವನ್ನಾದರೂ ನೋಡು. ಬೇರೊಬ್ಬರಿಗೆ ಅಸಾಧ್ಯವಾದ ಕಾರ್ಯವನ್ನು ನನ್ನ ಬಾಹುಬಲದಿಂದ ನಡೆಸುವೆನು. ನೀನು ಸಹೋದರರೊಡನೆ ಏಕಾಂತವಾಗಿ ಇದನ್ನು ನೋಡುತ್ತಿರು. ಇದೋ! ಇತ್ತಲಾಗಿ ಅನೇಕಶಾಖೆಗಳಿಂದ ಕೂಡಿದ ಒಂದು ವೃಕ್ಷವು ಬೆಟ್ಟದಂತೆ ಬೆಳೆದಿರುವುದು ನೋಡು. ಈ ಮರವನ್ನೇ ಕಿತ್ತು ಅದರಿಂದ ಶತ್ರುಗಳನ್ನು ನಾಶಮಾಡುವೆನು," ಎಂದನು. ಓ ಜನಮೇಜಯರಾಜಾ! ಈ ಮಾತುಗಳನ್ನು ಹೇಳಿ, ಆ ಮರದಮೇಲೆ ಕಣ್ಣಿಟ್ಟು ಮದಿಸಿದ ಮಹಾಗಜದಂತೆ ನಿಂತಿರುವ ಭೀಮನನ್ನು ಕುರಿತು ತಿರುಗಿ ಧರ್ಮರಾಜನು "ಭೀಮಾ! ಆ ಸಾಹಸವನ್ನು ಮಾಡಬೇಡ. ಆ ಮರವು ಹಾಗಿರಲಿ. ನೀನು ಆ ವೃಕ್ಷವನ್ನು ಕಿತ್ತು, ಅದನ್ನೇ ಆಯುಧವನ್ನಾಗಿ ಮಾಡಿಕೊಂಡು ನಿನ್ನ ಸಾಹಸವನ್ನು ತೋರಿಸಿದರೆ, ಆ ನಿನ್ನ ಅತಿಮಾನುಷಕೃತ್ಯವನ್ನು ನೋಡಿ ಜನರೆಲ್ಲರೂ ನೀನೇ ಭೀಮನೆಂದು ಕಂಡುಕೊಳ್ಳುವರು. ಆದುದರಿಂದ ಆ ಮರವನ್ನು ಕೀಳಬೇಡ. ನಿನ್ನ ಸಿಂಹಗರ್ಜನೆಯನ್ನೂ ತೋರಿಸಬೇಡ. ನೀನು ಸಿಂಹನಾದವನ್ನು ಮಾಡಿದರೂ ಜನಗಳು ನೀನು ಭೀಮನೆಂದು ತಿಳಿದುಕೊಳ್ಳುವರು. ಈ ಮರವನ್ನು ಕಿತ್ತಾಗಲೇ ನಿನ್ನನ್ನು ಜನರು ಭೀಮನೆಂದು ತಿಳಿದುಬಿಡುವರು. ಬೇರೆ ಯಾವುದಾದರೂ ಆಯುಧಗಳನ್ನು

ನೋಡಿ, ಅವನ ಚಕ್ರರಕ್ಷಕನಾಗಿದ್ದ ಶೋಣಾಶ್ವನೆಂಬವನು, ಅಲ್ಲಿಂದ ರಣ ರಂಗವನ್ನು ಬಿಟ್ಟು ತಲೆತಪ್ಪಿಸಿಕೊಂಡು ಹೋದನು. ಸುಶರ್ಮನ ರಥ ದಲ್ಲಿ ಸೆರೆಯಾಗಿದ್ದ ವಿರಾಟನು ಇದೇ ಸಮಯದಲ್ಲಿ ಮೆಲ್ಲಗೆ ರಥದಿಂದ ಸರಿದು ಸುಶರ್ಮನ ಕೈಲಿದ್ದ ಗದೆಯನ್ನೇ ಕಿತ್ತುಕೊಂಡು ಅದರಿಂದಲೇ ಅವನನ್ನು ಬಡಿದನು. ವಿರಾಟನು ವೃದ್ಧನಾಗಿದ್ದರೂ ಗದೆಯನ್ನು ಕೈಯಲ್ಲಿ ಹಿಡಿದು ಒಳ್ಳೆಯ ತರುಣನಂತೆ ಯುದ್ಧರಂಗದಲ್ಲಿ ಸುತ್ತಾಡುತಿದ್ದನು. ಆಗ ಭಯಂಕರಾಕಾರವುಳ್ಳ ಭೀಮನು, ಯುಧಿಷ್ಠಿರನ ಪೆಟ್ಟಿನಿಂದ ಚೇತರಿಸಿ ಕೊಂಡು ತಿರುಗಿ ಯುದ್ಧಕ್ಕೆ ಸಿದ್ಧನಾಗಿ ನಿಂತ ಸುಶರ್ಮನನ್ನು ನೋಡಿ, ರೋಷಾವಿಷ್ಟನಾಗಿ, ತನ್ನ ರಥದಿಂದ ಒಂದೇ ನೆಗೆತಕ್ಕೆ ಸುಶರ್ಮನ ರಥಕ್ಕೆ ಹಾರಿ, ಸಿಂಹವು ಬೆಟ್ಟದಿಂದ ಹಾರಿ ಕ್ಷುದ್ರಮೃಗವನ್ನು ಹಿಡಿಯುವಂತೆ ಯೂ, ಬೆಕ್ಕು ಕೋಪದಿಂದ ಮೇಲೆಬಿದ್ದು ಇಲಿಯನ್ನು ಹಿಡಿಯುವಂತೆ ಯೂ ಸುಶರ್ಮನ ತಲೆಯನ್ನು ಹಿಡಿದುಕೊಂಡನು. ಅತ್ಯಾಕ್ರೋಶದಿಂದ ಸುಶರ್ಮನನ್ನು ಮೇಲಕ್ಕೆತ್ತಿ ನೆಲದಮೇಲೆ ಕುಕ್ಕಿ, ಚೆನ್ನಾಗಿ ಮರ್ದಿಸಿ, ಅವನ ತಲೆಯಮೇಲೆ ಹೊಡೆದುದಲ್ಲದೆ, ಅವನ ಮೈಮೇಲೆ ತನ್ನ ಮೊಳ ಕಾಲನ್ನೂರಿ ಮುಷ್ಟಿಯಿಂದ ತಿವಿದನು. ಆ ಪೆಟ್ಟನ್ನು ತಡೆಯಲಾರದೆ ಸುಶ ರ್ಮನು ಮೂರ್ಛಿತನಾದನು. ಮಹಾರಥನಾದ ತಮ್ಮ ರಾಜನು ಭೀಮನ ಕೈಗೆ ಸಿಕ್ಕಿಬಿಟ್ಟುದನ್ನು ನೋಡಿ, ತ್ರಿಗರ್ತಸೈನ್ಯಗಳೆಲ್ಲವೂ ಭಯದಿಂದ ಚದರಿ ಪಲಾಯನವಮಾಡಿದುವು. ಆಮೇಲೆ ಪಾಂಡುಪುತ್ರರು, ಸುಶರ್ಮನು ಸೆರೆಹಿಡಿದಿದ್ದ ಗೋವುಗಳನ್ನೆಲ್ಲ ಹಿಂತಿರುಗಿಸಿದರು. ಸುಶರ್ಮನನ್ನು ಜಯಿಸಿ, ಸಮಸ್ತ ಧನದೊಡನೆ ಅವನನ್ನು ವಶಮಾಡಿಕೊಂಡು ಧರ್ಮ ರಾಜನಬಳಿಗೆ ಬಂದುನಿಂತರು. ಆ ಪಾಂಡವರಾದರೋ ಅಕಾರ್ಯಕ್ಕೆ ನಾಚುವವರು. ದೃಢವಾದ ವ್ರತವನ್ನು ಹಿಡಿದವರು. ವಿರಾಟನ ಕಷ್ಟ ವನ್ನು ಬಿಡಿಸಿ ಕಾಪಾಡಿದವರು. ಇಂತಹ ಮಹಾತ್ಮರಾದ ಪಾಂಡವರು ಜಯಶೀಲರಾಗಿ ರಾಜನಮುಂದೆ ಬಂದು ನಿಂತಾಗ, ಭೀಮನು ಹೀಗೆಂದು ಹೇಳುವನು. “ಮಹಾರಾಜಾ! ಪಾಪಿಯಾದ ಈ ಸುಶರ್ಮನು ನಮ್ಮಿಂದ ಬದುಕಿಹೋಗುವುದಕ್ಕೆ ಸರ್ವಥಾ ಯೋಗ್ಯನಲ್ಲ. ಯಾವಾಗಲೂ ದಯಾ

ನಮಗೆ ಹಿತಕರವಾದ ಕಾರ್ಯವೆಲ್ಲವೂ ಅದೇ! ನಮಗೆ ನಿನ್ನಿಂದಾಗಬೇಕಾದ ಬೇರೆ ಕಾರ್ಯವೇನೂ ಇಲ್ಲ. ನಿನ್ನಿಂದ ಧನವನ್ನೂ ನಾವು ಅಪೇಕ್ಷಿಸುವವರಲ್ಲ'' ಎಂದರು. ಇದನ್ನು ಕೇಳಿ ಸಂತುಷ್ಟನಾದ ಮತ್ಸ್ಯರಾಜನು, ಧರ್ಮರಾಜನನ್ನು ನೋಡಿ ಸಂತೋಷಾತಿಶಯದಿಂದುಂಟಾದ ಗದ್ಗದಸ್ವರದೊಡನೆ ತಿರುಗಿ ಹೀಗೆಂದು ಹೇಳುವನು. ''ಓ ಪರಂತಪಾ! ಅವಶ್ಯವಾಗಿ ನೀನು ಬರಬೇಕು. ನಿನಗೆ ಪಟ್ಟಾಭಿಷೇಕವನ್ನು ಮಾಡಿಸುವೆನು. ಇನ್ನು ಮೇಲೆ ನೀನೇ ನಮ್ಮ ಮತ್ಸ್ಯದೇಶಕ್ಕೆಲ್ಲಾ ರಾಜನು. ನಿನ್ನ ಮನಸ್ಸಿನಲ್ಲಿ ಬೇರೆ ಕೋರಿಕೆಯೇನಿದ್ದರೂ ಅದನ್ನು ತಿಳಿಸು. ಅದನ್ನು ನಡೆಸಿಕೊಡಲು ಸಿದ್ಧನಾಗಿರುವೆನು. ನಮ್ಮ ಸರ್ವಸ್ವಕ್ಕೂ ನೀನು ಸ್ವಾಮಿಯಾಗಿರುವೆ. ವ್ಯಾಘ್ರಪಾದ ಗೋತ್ರದಲ್ಲಿ ಹುಟ್ಟಿದ ಓ ಬ್ರಾಹ್ಮಣೋತ್ತಮನೇ! ರತ್ನಗಳನ್ನಾಗಲಿ, ಗೋವುಗಳನ್ನಾಗಲಿ, ಸ್ವರ್ಣವನ್ನಾಗಲಿ ಮುತ್ತುಗಳನ್ನಾಗಲಿ ಯಾವುದನ್ನು ಕೋರಿದರೂ ಕೊಡುವೆನು. ಸರ್ವಥಾ ನಿನಗೆ ವಂದನವು. ಈ ನನ್ನ ರಾಜ್ಯವೂ, ಈ ನನ್ನ ಜೀವವೂ ನಿಮ್ಮದೆಂದೇ ನಾನು ಭಾವಿಸಿರುವೆನು. ನಮಗೆ ಯಾವನು ಮನಸ್ಸಿಗೆ ಕಳವಳವನ್ನು ತಂದಿಟ್ಟನೋ, ಅಂತಹ ಶತ್ರುವು ನಿಮ್ಮಿಂದ ನಮಗೆ ಕೈವಶನಾದನು'' ಎಂದನು. ಇದನ್ನು ಕೇಳಿ ತಿರುಗಿ ಧರ್ಮರಾಜನು ''ಎಲೈ ಮತ್ಸ್ಯರಾಜನೆ! ನಿನ್ನ ಪ್ರಿಯವಾಕ್ಯದಿಂದ ಸಂತುಷ್ಟನಾದೆನು. ನೀನು ಯಾವಾಗಲೂ ಮೃದುಸ್ವಭಾವವುಳ್ಳವನು. ಮತ್ತು ಪ್ರಸನ್ನಮುಖವುಳ್ಳವನು. ಈ ಸುಸ್ವಭಾವಕ್ಕಾಗಿ ನಾನು ಸಂತೋಷಿಸುವೆನು'' ಎಂದನು. ಆಗ ವಿರಾಟನು ತಿರುಗಿ ಕಂಕನನ್ನು ನೋಡಿ ''ಓ ವಿಪ್ರೋತ್ತಮಾ! ಶೂದ್ರನಾದ ಆ ವಲಲನು ಯುದ್ಧದಲ್ಲಿ ನಡೆಸಿದ ಕಾರ್ಯವು ಅತ್ಯಾಶ್ಚರ್ಯವನ್ನುಂಟುಮಾಡುವುದು. ಆ ಶೂದ್ರನೇ ನನ್ನನ್ನು ಯುದ್ಧದಲ್ಲಿ ಕಾಪಾಡಿದವನು. ಇವೆಲ್ಲಕ್ಕೂ ಮುಖ್ಯ ಕಾರಣಭೂತನು ನೀನು! ಆದುದರಿಂದ ನಿನಗೆ ಬೇಕಾದುದನ್ನು ಕೇಳು. ನಿನಗೆ ಮಂಗಳವಾಗಲಿ. ನನ್ನಿಂದ ನಿನಗೆ ಆಗಬೇಕಾದುದೇನು ತಿಳಿಸು. ಉತ್ಕೃಷ್ಟವಾದ ರತ್ನಗಳನ್ನಾಗಲಿ, ಶಯನಗಳನ್ನಾಗಲಿ, ಆಸನಗಳನ್ನಾಗಲಿ, ವಾಹನಗಳನ್ನಾಗಲಿ, ಒಳ್ಳೆಯ ಅಲಂಕೃತರಾದ ಕನ್ಯೆಯರನ್ನಾಗಲಿ, ಆನೆಕುದುರೆಗಳನ್ನಾಗಲಿ, ರಥಗಳನ್ನಾಗಲಿ, ಅನೇಕ ರಾಷ್ಟ್ರಗಳನ್ನಾಗಲಿ ನನ್ನ ಮನಃ

ಪ್ರೀತಿಯಿಂದ ನಿಮಗೆ ಒಪ್ಪಿಸುವೆನು. ನನ್ನಲ್ಲಿ ಅಭಿಮಾನವಿಟ್ಟು ಇವೆಲ್ಲವನ್ನೂ ನೀನು ಅಂಗೀಕರಿಸಬೇಕು" ಎಂದನು. ಇದನ್ನು ಕೇಳಿ ತಿರುಗಿ ಯುಧಿಷ್ಠಿರನು "ಓ ಪರಂತಪಾ! ನಾನು ಮೊದಲೇ ಹೇಳಿದೆನಲ್ಲವೆ! ನೀನು ಶತ್ರುಗಳ ಕೈಯಿಂದ ತಪ್ಪಿಬಂದುದೇ ನನಗೆ ಎಲ್ಲಕ್ಕಿಂತಲೂ ಪ್ರಿಯವು. ಇನ್ನು ನೀನು ಸಂತೋಷದಿಂದ ಪುರಕ್ಕೆ ಹೋಗಿ ಪತ್ನೀಪುತ್ರರೊಡನೆ ಸುಖವಾಗಿರಬೇಕು. ಇದೇ ನನಗೆ ಎಣೆಯಿಲ್ಲದ ಪ್ರೀತಿಯನ್ನುಂಟುಮಾಡುವುದು. ನಿನ್ನಿಂದ ವರವನ್ನು ಕೇಳಬೇಕೆಂದು ನಿರ್ಬಂಧಿಸುವೆಯಲ್ಲವೆ! ಈ ಸುಶರ್ಮನನ್ನು ನಿರ್ಬಂಧಿಸದೆ ಅವನ ಸೈನ್ಯ ವಾಹನ ಪರಿವಾರಗಳೊಡನೆ ಇಲ್ಲಿಂದ ಅವನ ಪಟ್ಟಣಕ್ಕೆ ಕಳುಹಿಸಿಕೊಡು. ಇದೇ ನಾನು ನಿನ್ನಲ್ಲಿ ಕೇಳಬೇಕಾದ ವರವು" ಎಂದನು. ಇದನ್ನು ಕೇಳಿ ವಿರಾಟನು "ಎಲೈ ವಿಪ್ರೋತ್ತಮನೆ! ಆ ಸುಶರ್ಮನು ತನ್ನ ಇಷ್ಟವಿದ್ದಂತೆ ಹೋಗಲು ನನ್ನ ಅಡ್ಡಿಯಿಲ್ಲ" ಎಂದನು. ಆಮೇಲೆ ಕಂಕನು ವಿರಾಟನನ್ನು ಕುರಿತು "ಓ ರಾಜಾ! ಇಗಲೇ ನಿನ್ನ ದೂತರನ್ನು ನಿನ್ನ ನಗರಕ್ಕೆ ಕಳುಹಿಸು. ಅವರು ನಾವು ಜಯಿಸಿದ ವೃತ್ತಾಂತವನ್ನು ನಿನ್ನ ಆಪ್ತಮಿತ್ರರಿಗೆಲ್ಲ ತಿಳಿಸಲಿ. ಊರಿನಲ್ಲೆಲ್ಲ ನಮ್ಮ ಜಯವನ್ನು ಉದ್ಘೋಷಿಸಲಿ" ಎಂದನು. ಆಗ ವಿರಾಟನು ದೂತರನ್ನು ಕರೆಸಿ, "ಎಲೈ ದೂತರೇ! ಈಗಲೇ ನೀವು ಪಟ್ಟಣಕ್ಕೆ ಹೋಗಿ, ನಮಗೆ ಯುದ್ಧದಲ್ಲಿ ಜಯವುಂಟಾದುದನ್ನು ತಿಳಿಸಿರಿ. ನಾವು ಇಲ್ಲಿಂದ ಬರುವಷ್ಟರಲ್ಲಿ ಒಳ್ಳೇ ಅಲಂಕೃತರಾದ ಕನ್ಯೆಯರೂ, ವೇಶ್ಯೆಯರೂ, ಸಮಸ್ತ ವಾದ್ಯಗಳೂ, ಪುರಜನರೂ ನಮ್ಮನ್ನು ಇದಿರುಗೊಳ್ಳುವುದಕ್ಕೆ ಬರಲಿ," ಎಂದನು. ಒಡನೆಯೇ ವೇಗಶಾಲಿಗಳಾದ ಕೆಲವು ದೂತರು ಆ ರಾತ್ರಿಯೇ ಹೊರಟು, ಒಂದೇ ಪ್ರಯಾಣವಾಗಿ ದಾರಿನಡೆದು, ಸೂರ್ಯೋದಯದ ಹೊತ್ತಿಗೆ ನಗರಪ್ರವೇಶವನ್ನು ಮಾಡಿದರು. ಅಲ್ಲಿ ವಿರಾಟನ ವಿಜಯ ವೃತ್ತಾಂತವನ್ನು ಜನರೆಲ್ಲರಿಗೂ ತಿಳಿಸಿ, ಅನೇಕ ಧ್ವಜಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ ಆ ಪಟ್ಟಣವನ್ನು ಅಲಂಕರಿಸಿ, ಭೂಮಿಯಲ್ಲಿ ಎಣೆಯಿಲ್ಲದ ಶೋಭಾತಿಶಯದಿಂದ ಪ್ರಕಾಶಿಸುವಂತೆ ಮಾಡಿದರು.

ಇದು ಮೂವತ್ತಾರನೆಯ ಅಧ್ಯಾಯವು.

---

ದುರ್ಯೋಧನನು ಭೀಷ್ಮಾದಿಗಳೊಡನೆ ವಿರಾಟನಗರದ ಉತ್ತರ ಭಾಗಕ್ಕೆ ಬಂದು, ಅಲ್ಲಿ ಗೋವುಗಳನ್ನು ಹಿಡಿದುಕೊಳ್ಳಲು, ಹಸುಗಳನ್ನು ಕಾಯುತಿದ್ದ ಗೋಪಾಲನೊಬ್ಬನು, ವಿರಾಟಪುತ್ರನಾದ ಉತ್ತರನ ಬಳಿಗೆ ಬಂದು ಆ ವೃತ್ತಾಂತವನ್ನು ತಿಳಿಸಿ ಮೊರೆ ಯಿಟ್ಟದು.

ಓ ಜನಮೇಜಯರಾಜಾ ಕೇಳು! ಅತ್ತಲಾಗಿ ತ್ರಿಗರ್ತಸೇನೆಗಳಿಂದ ಪಶುಗಳನ್ನು ಬಿಡಿಸಿಕೊಳ್ಳುವುದಕ್ಕಾಗಿ ವಿರಾಟನು ತನ್ನ ಸೈನ್ಯಗಳೊಡನೆ ಪುರದ ದಕ್ಷಿಣದಿಕ್ಕಿಗೆ ಹೋದಮೇಲೆ, ದುರ್ಯೋಧನನು ವಿರಾಟನಗರವನ್ನು ಮುತ್ತುವುದಕ್ಕಾಗಿ ತನ್ನ ಮಂತ್ರಿಗಳೊಡನೆ ಉತ್ತರಭಾಗದಿಂದ ದಂಡೆತ್ತಿಬಂದನು. ಆ ದುರ್ಯೋಧನನೊಡನೆ, ಭೀಷ್ಮದ್ರೋಣರೂ, ಕರ್ಣನೂ, ಕೃಪನೂ, ಅಶ್ವತ್ಥಾಮನೂ, ಶಕುನಿಯೂ, ದುರ್ಯೋಧನನ ತಮ್ಮಂದಿರಾದ ದುಶ್ಶಾಸನಾದಿಗಳೂ, ಶಲ್ಯ, ವಿವಿಂಶತಿ, ವಿಕರ್ಣ, ಚಿತ್ರಸೇನ, ದುಸ್ಸಹ, ದುರ್ಮುಖ ಮೊದಲಾಗಿ ಇನ್ನೂ ಅನೇಕಮಹಾರಥರೂ ತಮ್ಮತಮ್ಮ ಸೇನಾಸಮೇತರಾಗಿ ಹೊರಟರು. ಇವರೆಲ್ಲರೂ ಒಂದಾಗಿ ಸೇರಿ ಮತ್ಸ್ಯದೇಶಕ್ಕೆ ಬಂದು, ಹಸುಗಳನ್ನು ಕಾಯುತಿದ್ದ ಗೊಲ್ಲರನ್ನು ಹೊಡೆದೋಡಿಸಿ ವಿರಾಟನ ಗೋಧನವನ್ನೆಲ್ಲ ಸೆರೆಹಿಡಿದರು. ಹೀಗೆ ಕೌರವರು ವಿರಾಟರಾಜನ ಲಕ್ಷಾಧಿಕ ಗೋವುಗಳನ್ನು ತಡೆದು ನಿಲ್ಲಿಸಿ, ಸುತ್ತಲೂ ರಥಸಮೂಹಗಳಿಂದ ಆವರಿಸಿಕೊಂಡು, ಗೋಪಾಲಕರನ್ನು ಸಿಕ್ಕಿದ ಕಡೆಗಳಲ್ಲಿ ಹೊಡೆದಟ್ಟುತಿದ್ದರು. ಭಯಂಕರವಾದ ಈ ಹೊಡೆದಾಟದಲ್ಲಿ, ಮಹಾರಥರಿಂದ ಪೆಟ್ಟುತಿಂದ ಗೊಲ್ಲರ ಆಕ್ರಂದನವು ನಾನಾಕಡೆಗಳಿಂದ ಪ್ರಬಲವಾಗಿ ಕೇಳಬಂದಿತು. ಆ ಗೊಲ್ಲರಿಗೆಲ್ಲಾ ಯಜಮಾನನಾಗಿದ್ದವನು, ಈ ಆಕ್ರಂದನವನ್ನು ಕೇಳಿ ಭಯಪಟ್ಟು, ಒಡನೆಯೇ ಒಂದು ರಥವನ್ನೇರಿ ಅತಿವೇಗದಿಂದ ಪಟ್ಟಣಕ್ಕೆ ಹೊರಟನು. ದೈನ್ಯದಿಂದ ಮೊರೆಯಿಡುತ್ತಾ ರಾಜಧಾನಿಗೆ ಬಂದು, ಅರಮನೆಯ ಬಾಗಿಲಲ್ಲಿ ಬಂಡಿಯಿಂದಿಳಿದು, ರಾಜನಿಗೆ ತಿಳಿಸುವುದಕ್ಕಾಗಿ ಒಳಗೆ ಪ್ರವೇಶಿಸುವಾಗ, ನಡುದಾರಿಯಲ್ಲಿಯೇ ವಿರಾಟನ ಮಗನಾದ ಭೂಮಿಂಜಯನೆಂಬವನನ್ನು ಕಂಡನು. ಈ ಭೂಮಿಂಜಯನೆಂಬವನು ಸ್ವಭಾ

ವದಲ್ಲಿಯೇ ಆತ್ಮಾಭಿಮಾನವುಳ್ಳವನು. ಅವನನ್ನು ಕಂಡೊಡನೆ ಗೊಲ್ಲರ ಯಜಮಾನನು ನಡೆದ ಸಂಗತಿಯನ್ನೆಲ್ಲ ತಿಳಿಸಿ, “ಓ ರಾಜಕುಮಾರಾ! ಕೌರವರು ಬಂದು ನಮ್ಮ ಲಕ್ಷಾಧಿಕಗೋವುಗಳನ್ನೆಲ್ಲ ಹಿಡಿದುಕೊಂಡು ಹೋಗುತ್ತಿರುವರು. ಏಳು! ಬೇಗನೆ ಹೊರಡು! ನಮ್ಮ ಗೋವುಗಳನ್ನು ಬಿಡಿಸಿಕೊಂಡು ಬರುವ ಪ್ರಯತ್ನವನ್ನು ಮಾಡು! ವಿಳಂಬಮಾಡದೆ ನೀನೇ ಬೇಗನೆ ಹೊರಟು ಬಾ! ನಿನಲ್ಲವೇ ಇನ್ನುಮೇಲೆ ಈ ನಮ್ಮ ರಾಷ್ಟ್ರಕ್ಕೆ ಮೇಲ್ಮೆಯನ್ನು ತರತಕ್ಕವನು! ಮಹಾರಾಜನು ತಾನಿಲ್ಲದ ವೇಳೆಯಲ್ಲಿ ನಿನ್ನನ್ನಲ್ಲವೇ ಈ ರಾಜ್ಯರಕ್ಷಣೆಗಾಗಿ ನಿಯಮಿಸಿಹೋದನು? ರಾಜನು ಸಭಾಜನರ ಮುಂದೆ ಯಾವಾಗಲೂ ನಿನ್ನ ಪೌರುಷವನ್ನುಕುರಿತು ಬಹಳವಾಗಿ ಹೊಗಳುತ್ತಲೂ ಇರುವನು. ನೀನೇ ತನಗೆ ಅನುರೂಪನಾದ ಪುತ್ರನೆಂದೂ, ಮಹಾಶೂರನೆಂದೂ, ಕುಲೋದ್ಧಾರಕನೆಂದೂ, ಬಾಣ ಪ್ರಯೋಗಗಳಲ್ಲಿಯೂ, ಮಂತ್ರಾಸ್ತ್ರಗಳಲ್ಲಿಯೂ ನಿಪುಣನೆಂದೂ ಎಲ್ಲರ ಮುಂದೆ ಹೇಳಿಕೊಳ್ಳುತ್ತಿರುವನು. ಅಲ್ಲದೆ ನಿನ್ನ ತಂದೆಯು ಆಗಾಗ ಸಭೆ ಯಲ್ಲಿ “ನನ್ನ ಮಗನು ಯುದ್ಧದಲ್ಲಿ ಬಹಳ ಸಮರ್ಥನಾದ ವೀರನು. ಅಂತಹ ಕೌರವರೊಡನೆಯೂ ಯುದ್ಧಮಾಡಬಲ್ಲವನು” ಎಂದು ಕೂಡ ಹೇಳಿರುವನು. ಆದುದರಿಂದ, ಆ ರಾಜನ ಮಾತನ್ನು ಸುಳ್ಳಾಗಿಸದೆ ಸತ್ಯ ವನ್ನಾಗಿ ಮಾಡು. ನಿನ್ನ ತಂದೆಯು ಹೇಳಿದ ಮಾತನ್ನು ನೋಡಿದರೆ, ನಿನಗೆ ಯುದ್ಧದಲ್ಲಿ ಜಯವು ನಿಶ್ಚಯವು. ನೀನು ಹೋದರೆ ನಿಶ್ಚಯ ವಾಗಿ ಕೌರವರು ಹತರಾದಂತೆಯೇ! ಇದರಲ್ಲಿ ಸಂದೇಹವಿಲ್ಲ. ಇನ್ನು ಹೊರಡು. ಪಶುಪತಿಯಾದ ರುದ್ರನಂತೆ ಕೌರವರನ್ನು ಜಯಿಸಿ, ಗೋವು ಗಳನ್ನು ಹಿಂತಿರುಗಿಸಿಕೊಂಡು ಬಾ! ಓ ರಾಜಕುಮಾರಾ! ಆ ಕೌರವರ ಸೈನ್ಯವನ್ನು ನಿನ್ನ ಬಾಣಾಗ್ನಿಯಿಂದ ದಹಿಸು! ನೀನು ಆನೆಯು ಸಲಗ ನಂತೆ ಮುಂದೆಬಿದ್ದು ಹೋಗಿ, ಬಗ್ಗಿದ ಗಿಣ್ಣುಗಳಿಂದಲೂ, ಚಿನ್ನದ ಹಿಡಿ ಗಳಿಂದಲೂ ಕೂಡಿದ ನಿನ್ನ ವಿಚಿತ್ರಬಾಣಗಳಿಂದ ಆ ಶತ್ರುಸೈನ್ಯವನ್ನು ಛಿನ್ನಭಿನ್ನವಾಗಿ ಮಾಡು. ನಾಣಿನ ತುದಿಗಳೆಂಬ ಬಿರಡೆಗಳಿಂದಲೂ, ಮೌರ್ವಿ (ಹೆದೆ) ಯೆಂಬ ತಂತಿಯಿಂದಲೂ, ಚಾಪದಂಡವೆಂಬ ದಂಡ ದಿಂದಲೂ, ಬಾಣಗಳೆಂಬ ಸ್ವರಸ್ಥಾನಗಳಿಂದಲೂ ಶೋಭಿತವಾಗಿ, ಮಹಾ

ನೆರೆದಿದ್ದರು. ಆ ಗುಂಪಿನಲ್ಲಿ ಎಲ್ಲರೂ ಕೇಳುವಂತೆ ಗೋಪಾಲನು ಬಂದು ಯುದ್ಧಕ್ಕೆ ಹೊರಡಬೇಕೆಂದು ಉತ್ತರನನ್ನು ನಿರ್ಬಂಧಿಸಿದಾಗ, ರಾಜಕುಮಾರನಿಗೆ ಅದನ್ನು ನಿರಾಕರಿಸಲು ಸಾಧ್ಯವಿಲ್ಲದೆ ತೊಡಕಿನಲ್ಲಿ ಸಿಕ್ಕಿಬಿದ್ದಂತಾಯಿತು. ಆಗ ಉತ್ತರನು ಅಂತಃಪುರಮಧ್ಯದಲ್ಲಿ ತನ್ನ ಹೆಮ್ಮೆಯನ್ನು ತೋರ್ಪಡಿಸಿಕೊಳ್ಳುತ್ತ, ಆ ಗೊಲ್ಲನನ್ನು ಕುರಿತು ಹೀಗೆಂದು ಹೇಳುವನು. "ಆಹಾ! ಈಗೇನುಮಾಡಲಿ! ಕುದುರೆಗಳನ್ನು ನಡೆಸುವುದರಲ್ಲಿ ಒಳ್ಳೇ ನಿಪುಣನಾದ ಸಾರಥಿಯೊಬ್ಬನುಮಾತ್ರ ಈಗ ನನಗೆ ಇದ್ದಿದ್ದರೆ, ನಾನು ಈ ಕ್ಷಣವೇ ನನ್ನ ದೃಢಧನುಸ್ಸನ್ನು ಹಿಡಿದು ನಮ್ಮ ಗೋವುಗಳನ್ನು ಬಿಡಿಸುವುದಕ್ಕಾಗಿ ಬೆನ್ನಟ್ಟಿ ಹೋಗುತಿದ್ದೆನು. ನನಗೆ ಅನುರೂಪನಾದ ಸಾರಥಿ ಯಾವನೆಂದೇ ತೋರಲಿಲ್ಲ. ಈಗಲೇ ನೀವು ಎಲ್ಲಿಯಾದರೂ ನನಗೆ ತಕ್ಕಂತೆ ನಿಪುಣನಾದ ಸಾರಥಿಯೊಬ್ಬನನ್ನು ನೋಡಿರಿ. ಇದಕ್ಕೆಮೊದಲು ಸ್ವಲ್ಪ ಹೆಚ್ಚುಕಡಿಮೆಯಾಗಿ ಇಪ್ಪತ್ತೆಂಟು ದಿನಗಳೋ, ಕೊನೆಗೆ ಒಂದು ತಿಂಗಳ ಕಾಲವೋ ಎಡೆಬಿಡದೆ ನಡೆದ ಮಹಾಯುದ್ಧವಾವುದುಂಟೋ, ಅದರಲ್ಲಿ ನಮ್ಮ ಸಾರಥಿಯು ಕೊಲ್ಲಲ್ಪಟ್ಟನು. ನಾನೇನೋ ಯುದ್ಧಕ್ಕೆ ಸಿದ್ಧನಾಗಿಯೇ ಇರುವೆನು. ನಾನು ಯುದ್ಧಕ್ಕೆ ಹೊರಟುಬಿಟ್ಟರೆ ನನಗೆ ಸಾರಥ್ಯಮಾಡುವನಾವನು? ನಿಪುಣನಾದ ಸಾರಥಿಯು ಮಾತ್ರ ನನಗೆ ದೊರೆತಪಕ್ಷದಲ್ಲಿ, ನನ್ನ ಸಿಹ್ಮಧ್ವಜವನ್ನು ರಥದಮೇಲೇರಿಸಿ, ಈಗಲೇ ರಣರಂಗಕ್ಕೆ ಹೋಗುವೆನು. ಆನೆಗಳಿಂದಲೂ, ಕುದುರೆಗಳಿಂದಲೂ, ರಥಗಳಿಂದಲೂ ತುಂಬಿದ ಶತ್ರುಸೈನ್ಯವನ್ನು ಪ್ರವೇಶಿಸಿ, ನನ್ನ ಶಸ್ತ್ರಪ್ರತಾಪದಿಂದ ಕೌರವರೆಲ್ಲರನ್ನೂ ನಿರ್ವೀರ್ಯರನ್ನಾಗಿ ಮಾಡಿ, ನಮ್ಮ ಪಶುಗಳನ್ನು ಹಿಂದಕ್ಕೆ ತರುವೆನು. ಆ ದುರ್ಯೋಧನನನ್ನೂ, ಭೀಷ್ಮನನ್ನೂ, ಸೂರ್ಯಪುತ್ರನಾದ ಕರ್ಣನನ್ನೂ, ಕೃಪನನ್ನೂ, ಪುತ್ರಸಹಿತನಾದ ದ್ರೋಣನನ್ನೂ, ಇನ್ನೂ ಶತ್ರುಸೈನ್ಯದಲ್ಲಿ ಕಲೆತಿರುವ ಮಹಾಧನುರ್ಧಾರಿಗಳನ್ನೂ ಇಂದ್ರನು ದಾನವರನ್ನು ಹೇಗೋ ಹಾಗೆ ಯುದ್ಧರಂಗದಿಂದ ಓಡಿಸಿ, ಈ ಮುಹೂರ್ತದಲ್ಲಿಯೇ ನಮ್ಮ ಗೋವುಗಳನ್ನು ಹಿಂತಿರುಗಿಸುವೆನು. ಆ ಕೌರವರು ನಮ್ಮ ಗೋಧನಕ್ಕೆ ಯಾರೂ ರಕ್ಷಕರಿಲ್ಲವೆಂದು ತಿಳಿದೇ ಅವುಗಳನ್ನು ಹಿಡಿದುಕೊಂಡು ಹೋಗುತ್ತಿರುವರು. ಅಲ್ಲಿ ನನ್ನಂತ

ವನು ಇಲ್ಲದಿದ್ದಾಗ ಅವರು ಏನನ್ನು ತಾನೇ ಮಾಡದಿರುವರು? ಆದ ರೇನು? ಇರಲಿ! ಯುದ್ಧಕ್ಕೆ ಸೇರಿರುವ ಕುರುಗಳೆಲ್ಲರೂ ನನ್ನ ಪರಾಕ್ರಮ ವನ್ನು ಈಗಲೇ ನೋಡುವರು. ಆ ಕೌರವರು ನನ್ನನ್ನು ಕುಂತೀಪುತ್ರನಾದ ಆ ಅರ್ಜುನನೆಂದು ತಿಳಿದರೇನು?'' ಎಂದು ಆರ್ಭಟಿಸಿದನು.

ಓ ಜನಮೇಜಯರಾಜಾ! ಹೆಂಗಸರ ಗುಂಪಿನಲ್ಲಿ ಆತ್ಮಸ್ತುತಿರೂಪ ವಾದ ಈ ಮಾತುಗಳನ್ನು ಕೇಳಿ, ಅಲ್ಲಿದ್ದ ದ್ರೌಪದಿಯು ಸಹಿಸಲಾರದೆ ಹೋದಳು. ಅದರಲ್ಲಿಯೂ ವಿರಾಟಪುತ್ರನು ಅರ್ಜುನನ ಹೆಸರನ್ನೆತ್ತಿ ದುದು ಅವಳಿಗೆ ಸಹಿಸದಂತಾಯಿತು. ಅಂತಃಪುರದಲ್ಲಿ ನಾಟ್ಯಾಚಾರ್ಯ ನಾಗಿದ್ದ ಅರ್ಜುನನಿಗೂಕೂಡ ಉತ್ತರನ ವೀರವಾದಗಳು ಕಿವಿಗೆ ಬಿದ್ದ ವು. ಆ ಸಮಯವು ಕಳೆದು ಸ್ವಲ್ಪ ಹೊತ್ತಿನಮೇಲೆ, ಅರ್ಜುನನು ತನಗೆ ಪ್ರಿಯಪತ್ನಿಯಾಗಿಯೂ, ಸತ್ಯಋಜುತ್ವಾದಿಗುಣಗಳಿಂದ ಕೂಡಿದವಳಾಗಿ ಯೂ, ತನಗೆ ಹಿತೈಷಿಣಿಯಾಗಿಯೂ ಇರುವ ದ್ರುಪದಪುತ್ರಿಯನ್ನು ಏಕಾಂ ತದಲ್ಲಿ ಕರೆದು ಹೀಗೆಂದು ಹೇಳುವನು. “ಎಲೆ ಪಾಂಚಾಲಿ! ಓ ಶುಚಿಸ್ಮಿತೆ! ರಾಜಕುಮಾರಿಯಾದ ಉತ್ತರೆಯೊಡನೆ ನೀನು, ನನ್ನನ್ನು ನಿರ್ದೇಶಿಸಿ, “ಈ ಬೃಹನ್ನಳೆಯು ಪೂರ್ವದಲ್ಲಿ ಸವ್ಯಸಾಚಿಯೆನಿಸಿದ ಅರ್ಜುನನಿಗೆ ಖಾಂಡ ವವನಸಂಬಂಧವಾಗಿ ಇಂದ್ರನೊಡನೆ ಯುದ್ಧವು ಸಂಭವಿಸಿದಾಗ ಸಾರಥಿಯಾ ಗಿದ್ದಳು. ಅವಳನ್ನು ಸಾರಥಿಯಾಗಿಟ್ಟುಕೊಂಡರೆ, ನಿನ್ನಣ್ಣನಿಗೆ ದೊಡ್ಡ ಜಯವುಂಟಾಗುವುದು'' ಎಂದು ಹೇಳು'' ಎಂದನು. ಅರ್ಜುನನಿಂದ ಪ್ರೇರಿ ಸಲ್ಪಟ್ಟ ಪಾಂಚಾಲಿಯು, ಒಡನೆಯೇ ಉತ್ತರೆಯ ಮನೆಗೆ ಬಂದಳು. ಆಗ ದ್ರೌಪದಿಗೆ, ಸತ್ಯಧರ್ಮಪರಾಯಣನೂ, ಯಾವಾಗಲೂ ಋಜುಮಾರ್ಗದ ಲ್ಲಿಯೇ ನಡೆಯತಕ್ಕವನೂ ಆದ ತನ್ನ ಪತಿ ಧರ್ಮರಾಜನು, ರಾಹುವಿ ನಿಂದ ಬಿಡಲ್ಪಟ್ಟ ಚಂದ್ರನಂತೆ, ಅಜ್ಞಾತವಾಸನಿಯಮದಿಂದ ಮುಕ್ತನಾದ ನೆಂದು ಮನಸ್ಸಿಗೆ ತಿಳಿಯಿತು. ಇದುವರೆಗೆ ತನ್ನ ಪತಿಗಳು ಅನುಭವಿಸಿದ ಕಷ್ಟವನ್ನು ನೆನೆಸಿಕೊಂಡು, ಸಹಿಸಲಾರದೆ, ಸಖಿಯರನಡುವೆ ವಿಲಾಸ ದಿಂದ ಕುಳಿತಿದ್ದ ಉತ್ತರೆಯನ್ನು ಕಂಡು ಹೀಗೆಂದು ಹೇಳುವಳು.

“ರಾಜಪುತ್ರೀ! ಆಕಾರದಲ್ಲಿ ಆನೆಯ ಸಲಗದಂತೆ ಕಾಣುತ್ತ, ಒಳ್ಳೇ ಯೌವನವಯಸ್ಕನಾಗಿ, 'ತಾನು ಬೃಹನ್ನಳೆ'ಯೆಂದು ಹೇಳಿಕೊಂಡು

ಳಾದ ಸೈರಂಧ್ರಿಯೇ ಬೃಹನ್ನಳೆಯನ್ನು ಬಹಳವಾಗಿ ಶ್ಲಾಘಿಸಿ ಈ ರಹಸ್ಯವನ್ನು ನನಗೆ ತಿಳಿಸಿದಳು'' ಎಂದಳು. ಈ ಮಾತನ್ನು ಕೇಳಿ ಉತ್ತರನು ''ಸೈರಂಧ್ರೀ! ನನ್ನ ವ್ರತವೆಂತದೆಂಬುದನ್ನು ತಿಳಿದೇ ಇರುವೆಯಷ್ಟೆ? ನಾನು ನಪುಂಸಕರೊಡನೆ ಸಂಭಾಷಣೆ ಮಾಡತಕ್ಕವನಲ್ಲ. ಇದು ನನ್ನ ನಿಯಮವು. ಆದುದರಿಂದ, ನಾನಾಗಿ ಅವಳಿಗೆ ಕುದುರೆಗಳನ್ನು ನಡೆಸು'' ಎಂದು ಹೇಳಲಾರೆನು, ಇದಕ್ಕೇನು ಮಾಡಲಿ'' ಎಂದನು. ಅದಕ್ಕಾ ಸೈರಂಧ್ರಿಯು ''ರಾಜಕುಮಾರಾ! ಭಯಕಾಲವು ಬಂದಿರುವಾಗ ವ್ರತವಾವುದು? ಅವ್ರತವಾವುದು? ಅಂತಹ ಕಾಲದಲ್ಲಿ ಪ್ರಾಜ್ಞನಾದವನು ತನ್ನ ವಿಪತ್ತನ್ನು ದಾಟುವುದಕ್ಕಾಗಿ ಸಮಯವು ಬಂದಂತೆ ಹೇಗೋ ಪ್ರಯತ್ನಿಸಬೇಕೆಂದು ಧರ್ಮಜ್ಞರು ಹೇಳುವರು. ಆದುದರಿಂದ ನೀನೇ ಬೃಹನ್ನಳೆಯನ್ನು ಕರೆಸಿ ಕೇಳು. ನಿನ್ನ ತಂಗಿಯಾದ ಉತ್ತರೆಯ ಮೂಲಕವಾಗಿ ಹೇಳಿಕಳುಹಿಸಿದರೆ, ಅವಳ ಮಾತನ್ನು ಬೃಹನ್ನಳೆಯು ತಪ್ಪದೆ ನಡೆಸುವಳು. ಇದರಲ್ಲಿ ಸಂದೇಹವಿಲ್ಲ. ಆ ಬೃಹನ್ನಳೆಯು ಮಾತ್ರ ನಿನಗೆ ಸಾರಥಿಯಾದರೆ, ನೀನು ಕುರುಗಳನ್ನೆಲ್ಲ ಜಯಿಸಿ, ಗೋವುಗಳನ್ನು ಹಿಂತಿರುಗಿಸಿಕೊಂಡು ಬರುವುದರಲ್ಲಿ ಸಂದೇಹವೇ ಇಲ್ಲ,'' ಎಂದಳು.

ಓ ಜನಮೇಜಯರಾಜಾ! ಸೈರಂಧ್ರಿಯ ಮಾತನ್ನು ಕೇಳಿ ಉತ್ತರನು ತನ್ನ ತಂಗಿಯನ್ನು ಕುರಿತು ''ವತ್ಸೇ! ನೀನು ಹೋಗಿ ಬೃಹನ್ನಳೆಯನ್ನು ಇಲ್ಲಿಗೆ ಕರೆದುಕೊಂಡು ಬಾ'' ಎಂದನು. ಒಡನೆಯೇ ಯಶಸ್ವಿನಿಯಾದ ಉತ್ತರೆಯು, ಅಣ್ಣನಾಜ್ಞೆಯಂತೆ, ಬೃಹನ್ನಳೆಯ ಸಮೀಪಕ್ಕೆ ಆತುರದಿಂದ ಓಡಿದಳು. ಉತ್ತರೆಯು ಅಲ್ಲಿಂದ ಹೊರಟಾಗ, ಅವಳ ನಡೆಯ ಸೊಬಗನ್ನು ಕೇಳಬೇಕೆ? ಕಂಠದಲ್ಲಿ ಸುವರ್ಣಮಾಲಿಕೆಯು ತೂಗಾಡುತ್ತಿರುವುದು. ಅಂದವಾದ ಹುಬ್ಬು! ಮುಖದಲ್ಲಿ ಮಂಗಳಸೂಚಕವಾದ ಪ್ರಸನ್ನತೆ! ದೇಹದಲ್ಲಿ ವಜ್ರಖಚಿತಗಳಾದ ಸುವರ್ಣಾಭರಣಗಳು ಥಳಥಳಿಸುತ್ತಿರುವುವು. ಕಿವಿಗಳಲ್ಲಿ ಮುತ್ತು ವಜ್ರಗಳಿಂದ ಕೆತ್ತಲ್ಪಟ್ಟ ಸುವರ್ಣಕುಂಡಲಗಳು ಝುಗಝುಗಿಸುತ್ತಿರುವುವು. ಮೃದುವಾದ ನಡೆ! ಮೈಯಲ್ಲಿ ಪ್ರದಕ್ಷಿಣಾಕಾರವಾಗಿ ಉತ್ತಮಲಕ್ಷಣ ಸೂಚಕಗಳಾದ ಸುಳಿಗಳು! ಅಲಂಕಾ

ಶ್ರೇಷ್ಠನೂ ಆದ ಧನಂಜಯನು, ಉತ್ತರೆಯನ್ನು ನೋಡಿ "ಎಲೆ ಶುಚಿಸ್ಮಿತೆ! ನೀನು ಕೋರಿದಂತೆಯೇ ನಡೆಸುವೆನು. ನೀನು ಹೇಳಿದ ಸ್ಥಳಕ್ಕೆ ಹೋಗಲು ನಾನು ಸಿದ್ಧನಾಗಿರುವೆನು. ಅಷ್ಟೇಕೆ? ಉರಿಯುವ ಬೆಂಕಿಯಲ್ಲಿ ಪ್ರವೇಶಿಸಬೇಕೆಂದು ನೀನು ಹೇಳಿದರೂ, ಅದಕ್ಕೂ ನಾನು ಸಿದ್ಧನಾಗಿರುವೆನು. ಎಲೆ ಸುಂದರಿ! ಈಗ ನಾನು ಮಾಡಬೇಕಾದುದೇನು? ಹೇಳು. ನನ್ನ ವಿಷಯದಲ್ಲಿ ನೀನು ಸಂದೇಹಪಟ್ಟು ಆತ್ಮಹತ್ಯೆಯನ್ನು ಮಾಡಿಕೊಂಡು ಯಮಪುರಿಗೆ ಹೋಗಬೇಕಾದಷ್ಟು ಕಷ್ಟವೇಕೆ?" ಎಂದು ಸಮಾಧಾನವಾಕ್ಯವನ್ನು ಹೇಳಿದನು. ಅರ್ಜುನನು ಉತ್ತರೆಗೆ ಇಷ್ಟುಮಾತ್ರವನ್ನು ಹೇಳಿ, ಆಗಲೇ ಅಲ್ಲಿಂದ ಉತ್ತರನಬಳಿಗೆ ಹೊರಟನು. ಅರ್ಜುನನು ಹೊರಟುಬರುವಾಗ ಅವನ ಬೆಡಗನ್ನು ಕೇಳಬೇಕೆ? ಬೃಹನ್ನಳೆಯೆಂಬ ಹೆಸರಿಗೂ, ನಪುಂಸಕವೇಷಕ್ಕೂ ತಕ್ಕಂತೆ ಮೈಮೇಲೆ ಆಭರಣಗಳು! ಮುಖದಲ್ಲಿ ದಿವ್ಯವಾದ ಕಳೆ! ಆನೆಯ ಸಲಗನಂತೆ ತೋರುವ ಗಂಭೀರಾಕೃತಿ! ಆನೆಯ ಸುಂಡಿಲಂತೆ ದುಂಡಗೆ ನೀಡಿದ ತೋಳುಗಳು! ಕಮಲದಳದಂತೆ ವಿಶಾಲವಾದ ಕಣ್ಣುಗಳು! ಕವಾಟದಂತೆ ವಿಸ್ತಾರವಾದ ಎದೆ! ಉಬ್ಬಿದ ಹೆಗಲು! ಇಂತಹ ವೀರಯೋಗ್ಯವಾದ ರಾಜಲಕ್ಷಣಗಳಿಂದೊಪ್ಪುತ್ತ, ಆನೆಯಂತೆ ಗಂಭೀರವಾಗಿ ತನ್ನ ಕಡೆಗೆ ನಡೆದುಬರುತ್ತಿದ್ದ ಮಹಾಬಲಾಢ್ಯನಾದ ಅರ್ಜುನನ್ನು ಕಂಡೊಡನೆ ಉತ್ತರನು, ಅತ್ಯಾದರದಿಂದ ಅವನನ್ನು ಸಮೀಪಕ್ಕೆ ಕರೆದು, ಮಾತಾಡಿಸತೊಡಗಿದನು. ಗಂಡಾನೆಯನ್ನು ಹಿಂಬಾಲಿಸಿ ಬರುವ ಹೆಣ್ಣಾನೆಯಂತೆ ಮತ್ತಗಜದಂತೆ ನಡೆದುಬರುತ್ತಿದ್ದ ಆ ಅರ್ಜುನನನ್ನು, ವಿಶಾಲಾಕ್ಷಿಯಾದ ಉತ್ತರೆಯೂ ಹಿಂಬಾಲಿಸಿಬರುತಿದ್ದಳು. ರಾಜಪುತ್ರನಾದ ಉತ್ತರನು, ಅರ್ಜುನನನ್ನು ದೂರದಿಂದ ಕಂಡಾಗಲೇ ಆತುರದಿಂದ "ಓ ಬೃಹನ್ನಳೇ! ನಿನ್ನನ್ನು ಸಾರಥಿಯಾಗಿಟ್ಟುಕೊಂಡೇ ಹಿಂದೆ ಅರ್ಜುನನು ಖಾಂಡವನದಲ್ಲಿ ಅಗ್ನಿಯನ್ನು ತೃಪ್ತಿಗೊಳಿಸಿದನಂತೆ! ಧನಂಜಯನೆನಿಸಿದ ಆ ಪಾರ್ಥನು, ನಿನ್ನ ಬಲದಿಂದಲೇ ಸಮಸ್ತ ಭೂಮಿಯನ್ನೂ ಜಯಿಸಿದನಂತೆ! ಈ ವಿಚಾರವನ್ನೆಲ್ಲ ಸೈರಂಧ್ರಿಯು ನಮಗೆ ಹೇಳಿರುವಳು. ಅವಳು ಪಾಂಡವರನ್ನು ಚೆನ್ನಾಗಿ ಬಲ್ಲವಳು. ಇಂದ್ರನಿಗೆ ಪ್ರಸಿದ್ಧ ಪರಾಕ್ರಮವುಳ್ಳ ಮಾತಲಿಯೂ,

ಒಪ್ಪಿಕೊಳ್ಳುವಂತೆ ಆ ಕವಚವನ್ನು ಕೈಗೆ ತೆಗೆದುಕೊಂಡು ಉತ್ತರನನ್ನು ಕುರಿತು “ಓ ರಾಜಕುಮಾರಾ! ನಿನಗೆ ಯುದ್ಧದಲ್ಲಿ ಶೌರ್ಯವಿದ್ದರೆ, ಮತ್ತು ಶತ್ರುಗಳನ್ನು ಕೊಲ್ಲುವುದು ಸಾಧ್ಯವೆಂದು ನಿನಗೆ ತೋರಿದರೆ, ನೀನು ಹೋದಕಡೆಗೆ ನಾನೂ ನಿನ್ನನ್ನು ಹಿಂಬಾಲಿಸಿಬರುವುದಕ್ಕೇನೂ ಅಡ್ಡಿಯಿಲ್ಲ” ಎಂದನು. ಎಲ್ಲವನ್ನೂ ಬಲ್ಲವನಾಗಿದ್ದರೂ, ತಾನು ಏನೂ ತಿಳಿಯದವನೆಂದು ತೋರಿಸುವುದಕ್ಕಾಗಿ ಉತ್ತರೆಯ ಮುಂದೆ ಹಾಸ್ಯಾಸ್ಪದಗಳಾದ ಹಲವು ಚೇಷ್ಟೆಗಳನ್ನೂ ಮಾಡಿದನು. ವೀರಾಗ್ರೇಸರನಾದ ಆ ಅರ್ಜುನನು, ಉತ್ತರನು ತನ್ನ ಕೈಗೆ ಕೊಟ್ಟ ಕವಚವನ್ನು ಮೊದಲು ತಲೆಕೆಳಗಾಗಿ ಹಿಡಿದು ತೊಟ್ಟುಕೊಳ್ಳುವುದಕ್ಕೆ ಯತ್ನಿಸಲು, ಅಲ್ಲಿದ್ದ ಸ್ತ್ರೀಯರೆಲ್ಲರೂ ಗೊಳ್ಳೆಂದು ನಕ್ಕುಬಿಟ್ಟರು. ಆಮೇಲೆ ಕವಚವನ್ನು ಅಡ್ಡಲಾಗಿ ತೊಟ್ಟುಕೊಳ್ಳುವುದಕ್ಕೆ ಯತ್ನಿಸಿದನು. ತಿರುಗಿ ಮತ್ತೊಮ್ಮೆ ಕವಚವನ್ನು ತಲೆಕೆಳಗಾಗಿ ಹಿಡಿದನು. ಆ ಕವಚವನ್ನು ಮೇಲಕ್ಕೆತ್ತಿ ಮೇಲಿಂದ ಕೆಳಕ್ಕೆ ತೊಡಲು ಯತ್ನಿಸಿದನು. ಅರ್ಜುನನು ಮಾಡಿದ ಈ ಅಸಂಬದ್ಧಕಾರ್ಯಗಳನ್ನೆಲ್ಲ ನೋಡಿ, ಅಲ್ಲಿ ಪ್ರಾಯದ ಹೆಮ್ಮೆಯಿಂದಿದ್ದ ಹೆಂಗಸರನೇಕರು ಕೇಕೆಹಾಕಿ ನಗುತಿದ್ದರು. ಅವರ ಹಾಸ್ಯವನ್ನೂ ಲಕ್ಷ್ಯಮಾಡದೆ ಅರ್ಜುನನು ಅಜ್ಞತೆಯನ್ನೇ ನಟಿಸುತಿದ್ದರೂ, ಉತ್ತರನು ತಾನು ಮಾತ್ರ ಅವನನ್ನೇನೂ ಹಾಸ್ಯಮಾಡಿ ಅಪಮಾನಿಸದೆ ಸುಮ್ಮನಿದ್ದನು. ಕೊನೆಗೆ ಸುವರ್ಣಮಯವಾದ ಅಂಚಿನಿಂದ ಕೂಡಿ, ಅಗ್ನಿಯಂತೆ ಜಾಜ್ವಲ್ಯಮಾನವಾಗಿ, ಸಾವಿರಾರು ಕಿರಣಧಾರೆಗಳನ್ನು ಎರಚುವಂತಿರುವ ಆ ಕವಚವನ್ನು ಅರ್ಜುನನ ಕೈಯಿಂದ ತೆಗೆದುಕೊಂಡು, ತಾನೇ ಅದನ್ನು ಅವನಿಗೆ ತೊಡಿಸಿದನು. ಆಮೇಲೆ ಅರ್ಜುನನು, ಚಿನ್ನದ ಕವಚಗಳಿಂದ ಹೊದಿಸಲ್ಪಟ್ಟ ಒಳ್ಳೇ ಕುದುರೆಗಳನ್ನು ಆರಿಸಿತಂದು, ಉತ್ತರನ ರಥಕ್ಕೆ ಹೂಡಿದನು. ಮತ್ತು ಚಿನ್ನದ ಕುಚ್ಚುಗಳಿಂದಲಂಕೃತವಾದ ಕೇಸರಗಳುಳ್ಳ ಸುವರ್ಣಮಯವಾದ ಸಿಂಹವನ್ನು ತರಿಸಿ ಧ್ವಜಕ್ಕೆ ಕಟ್ಟಿಸಿದನು. ಉತ್ತಮ ಧನುಸ್ಸುಗಳೂ, ವಿಚಿತ್ರಬಾಣಗಳೂ, ಅನೇಕವಿಧಗಳಾದ ಆಯುಧಗಳೂ ರಥದಲ್ಲಿ ಇರಿಸಲ್ಪಟ್ಟುವು. ಬೃಹನ್ನಳೆಯು ಸಾರಥ್ಯಕ್ಕಾಗಿ ರಥದಲ್ಲಿ ಕುಳಿತಮೇಲೆ, ಉತ್ತರನೂ ಆ ರಥವನ್ನೇರಿ ಹೊರಡಲುದ್ಯುಕ್ತನಾದನು. ಆಗ

ಅವನ ತಂಗಿಯಾದ ಉತ್ತರೆಯು ಇತರ ರಾಜಕನ್ಯೆಯರೊಡನೆಯೂ, ತನ್ನ ಸಖಿಯರೊಡನೆಯೂ ಮುಂದೆ ಬಂದು, ರಥದಲ್ಲಿ ಸಾರಥ್ಯಕ್ಕಾಗಿ ಕುಳಿತಿದ್ದ ಅರ್ಜುನನನ್ನು ನೋಡಿ "ಬೃಹನ್ನಳೇ! ನೀವು ಯುದ್ಧದಲ್ಲಿ ಭೀಷ್ಮ, ದ್ರೋಣಾದಿ ಕೌರವರನ್ನೆಲ್ಲ ಜಯಿಸಿದಮೇಲೆ, ಅಲ್ಲಿಂದ ನಮ್ಮ ಆಟದ ಬೊಂಬೆಗಳಿಗೆ ತೊಡಿಸುವುದಕ್ಕಾಗಿ ವಿಚಿತ್ರ ವಸ್ತ್ರಗಳನ್ನೂ, ರತ್ನಾಭರಣಗಳನ್ನೂ ತಂದುಕೊಡಬೇಕು" ಎಂದರು. ಕನ್ಯೆಯರು ಹೇಳಿದ ಮಾತನ್ನು ಕೇಳಿ ನಗುತ್ತ ಅರ್ಜುನನು ಅವರನ್ನು ಕುರಿತು ಮೇಘಗಂಭೀರಸ್ವರದಿಂದ "ಓ ಶುಭಾಂಗಿಯರೇ! ಅದಕ್ಕೆ ತಡೆಯೇನು? ರಾಜಕುಮಾರನಾದ ಈ ಉತ್ತರನು ಯುದ್ಧದಲ್ಲಿ ಮಹಾರಥರನ್ನು ಜಯಿಸುವನಾದರೆ, ನಿಮಗೆ ಬೇಕಾದಷ್ಟು ಬಟ್ಟೆಗಳನ್ನೂ, ಆಭರಣಗಳನ್ನೂ ತಂದುಕೊಡುವೆನು" ಎಂದನು.

ಓ ಜನಮೇಜಯರಾಜಾ! ಆಮೇಲೆ ಉತ್ತರನು ವೈಡೂರ್ಯಖಚಿತವಾದ ಮತ್ತು ಉತ್ತಮವಾದ ಸುವರ್ಣಕವಚವೊಂದನ್ನು ಮೈಗೆ ತೊಟ್ಟುಕೊಂಡು, ರಥವನ್ನೇರಿ ಕುಳಿತನು. ಉತ್ತರನೂ, ಬೃಹನ್ನಳೆಯೂ ರಥವನ್ನೇರಿ ಕುಳಿತಮೇಲೆ, ಅನೇಕ ಮಹಾಜನರೂ, ಹೆಂಗಸರೂ, ಕನ್ನಿಕೆಯರೂ, ವ್ರತನಿಷ್ಠರಾದ ಬ್ರಾಹ್ಮಣರೂ, ಪ್ರದಕ್ಷಿಣವಾಗಿ ಸುತ್ತಿಬಂದು, ಮಂಗಳಕಾರ್ಯಗಳನ್ನು ಮಾಡುತ್ತ, "ಬೃಹನ್ನಳೆ! ಹಿಂದೆ ಖಾಂಡವವನ ದಹನ ಕಾಲದಲ್ಲಿ ಮಹಾವೃಷಭದಂತೆ ಗಂಭೀರವಾದ ನಡೆಯುಳ್ಳ ಆ ಅರ್ಜುನನಿಗೆ ಯಾವ ಮಂಗಳವುಂಟಾಯಿತೋ, ಅದೇ ವಿಧವಾದ ಮಂಗಳವು, ಈಗ ಉತ್ತರನೊಡನೆ ಕುರುಗಳನ್ನಿದಿರಿಸುವುದಕ್ಕಾಗಿ ಹೋಗುವ ನಿನಗೂ ಉಂಟಾಗಲಿ!" ಎಂದು ಶುಭಾಶಂಸೆಗಳನ್ನು ಮಾಡಿದರು.

ಇದು ಮೂವತ್ತೆಂಟನೆಯ ಅಧ್ಯಾಯವು.



ಉತ್ತರನು ಕೌರವಸೈನ್ಯವನ್ನು ಕಂಡು ಭಯಪಟ್ಟು
ರಥದಿಂದ ದುಮುಕಿ ಓಡಿದುದು. ಅರ್ಜುನನು
ಅವನನ್ನು ಬೆನ್ನಟ್ಟಿ ಹಿಡಿದುತಂದುದು.
ಅರ್ಜುನನ ವೇಷವನ್ನು ನೋಡಿ
ಕೌರವರ ಸಂದೇಹವು.

ಓ ಜನಮೇಜಯರಾಜಾ! ಕೇಳು! ಆಮೇಲೆ ಉತ್ತರನು ರಾಜಧಾನಿಯಿಂದ ಹೊರಟು ರಣರಂಗವನ್ನು ಸಮೀಪಿಸುವವರೆಗೆ ಎಲ್ಲಿಯೂ ಭಯವಿಲ್ಲದೆ, ಕುರುಗಳಿದ್ದ ಕಡೆಗೆ ಬೇಗನೆ ರಥವನ್ನು ನಡೆಸುವಂತೆ ತಾನೇ ತ್ವರೆಪಡಿಸಿದುದಲ್ಲದೆ, ಸಾರಥಿಯಾದ ಬೃಹನ್ನಳೆಯನ್ನು ಕುರಿತು “ಓ ಸಾರಥೀ! ನಮ್ಮನ್ನು ಜಯಿಸಬೇಕೆಂದು ಗುಂಪುಕಟ್ಟಿಕೊಂಡು ಬಂದಿರುವ ಕೌರವರೆಲ್ಲರನ್ನೂ ಜಯಿಸಿ, ನಮ್ಮ ಗೋವುಗಳನ್ನೆಲ್ಲ ನಿಮಿಷಮಾತ್ರದಲ್ಲಿ ಹಿಂತಿರುಗಿಸಿಕೊಂಡು ಬಂದುಬಿಡುವೆನು ನೋಡು” ಎಂದು ಆರ್ಭಟಿಸಿದನು. ಒಡನೆಯೇ ಅರ್ಜುನನು ಕುದುರೆಗಳನ್ನು ತಟ್ಟಿ ಬಿಡಲು, ಕುದುರೆಗಳು ಕಾಲಿನಿಂದ ಆಕಾಶವನ್ನು ಕೆರೆಯುವಂತೆ ಹಾರಿಹಾರಿ ವಾಯುವೇಗದಿಂದ ಓಡಿದುವು. ಉತ್ತರನು ಸಾರಥಿಯಾದ ಅರ್ಜುನನೊಡನೆ ಕೌರವರಿದ್ದ ಸ್ಥಳಕ್ಕೆ ಬಹಳ ದೂರವಿಲ್ಲದಂತೆ ಬಂದುಸೇರಿದರು. ಆಗ ಪ್ರಬಲವಾದ ಕುರುಸೈನ್ಯವು ಅವರ ಕಣ್ಣಿಗೆ ಕಾಣಿಸಿತು. ಶೂರರಾದ ಅವರಿಬ್ಬರೂ ಶ್ಮಶಾನಕ್ಕೆ ಪಕ್ಕವಾದ ದಾರಿಯಿಂದ ಹೊರಟು ಅಲ್ಲಿ ನೆರೆದಿದ್ದ ಕೌರವರನ್ನು ಕಂಡರು. ಆ ಕುರುಸೈನ್ಯವು ಅಪಾರಸಮುದ್ರದಂತೆ ವಿಸ್ತಾರವಾಗಿದ್ದಿತು. ಅನೇಕ ವೃಕ್ಷಗಳಿಂದ ದಟ್ಟವಾದ ಕಾಡಿನಂತೆಯೂ, ಆಕಾಶದಲ್ಲಿಯೇ ಹಾರಿಬರುವಂತೆಯೂ ಮುಂದೆ ಸಾಗಿಬರುತ್ತಿರುವ ಆ ಸೈನ್ಯದ ತುಳಿತದಿಂದ ಮೇಲಕ್ಕೆದ್ದ ನೆಲದ ಧೂಳಿಯು, ಆಕಾಶವನ್ನೆಲ್ಲ ಆವರಿಸಿ, ಸಮಸ್ತ ಪ್ರಾಣಿಗಳ ಕಣ್ಣನ್ನೂ ಕೆಡಿಸುವಂತಿದ್ದಿತು. ರಥ ಗಜ ತುರಗ ಪದಾತಿಗಳೆಂಬ ಚತುರಂಗಗಳಿಂದ ಕೂಡಿ, ಭೀಷ್ಮ, ದ್ರೋಣ, ಕೃಪ, ಕರ್ಣ, ದುರ್ಯೋಧನಾದಿ ವೀರರಿಂದಲೂ, ಮಹಾಧನುರ್ಧಾರಿಯೂ, ಧೀಮಂತನೂ ಆದ ಅಶ್ವತ್ಥಾಮನಿಂದಲೂ ರಕ್ಷಿತವಾಗಿದ್ದ ಆ ಸೈನ್ಯವನ್ನು

ನೋಡಿದೊಡನೆ, ಉತ್ತರನಿಗೆ ಭಯದಿಂದ ಬುದ್ಧಿಯು ತಬ್ಬಿಬ್ಬಾಗಿ, ಮೈ ಯಲ್ಲಿ ರೋಮಾಂಚವು ಹುಟ್ಟಿತು. ದೇಹದಲ್ಲಿ ನಡುಕವು ಕಂಡಿತು. ಆ ಸೈನ್ಯವನ್ನು ನೋಡಲಾರದೆ ಉತ್ತರನು, ಕಣ್ಣುಗಳನ್ನು ಮುಚ್ಚಿಕೊಂಡೇ ಅರ್ಜುನನ್ನು ಕುರಿತು ಹೀಗೆಂದು ಹೇಳುವನು, “ಬೃಹನ್ನಳೆ! ನನ್ನಿಂದಾ ಗದು! ಈ ಕೌರವರೊಡನೆ ಯುದ್ಧಮಾಡುವುದಕ್ಕೆ ನನ್ನಿಂದ ಸಾಧ್ಯವಿಲ್ಲ! ಆ ಸೈನ್ಯವನ್ನು ನೋಡಿದೊಡನೆ ಭಯದಿಂದ ನನ್ನ ಮೈಯೆಲ್ಲ ರೋ ಮಾಂಚಿತವಾಗಿದೆ ನೋಡು. ಅನೇಕಮಹಾವೀರರಿಂದ ಕೂಡಿ, ಅತಿ ಕ್ರೂರವಾದ ಈ ಸೈನ್ಯವನ್ನು ದೇವತೆಗಳಿಗಾದರೂ ಇದಿರಿಸಲು ಸಾಧ್ಯವಲ್ಲ. ಇಷ್ಟು ಭಯಂಕರವಾದ ಕೌರವಸೈನ್ಯಕ್ಕೆ ಇದಿರಾಗಿ ನಿಂತು ಯುದ್ಧಮಾಡು ವುದಕ್ಕೆ ನಾನು ಸಮರ್ಥನೆ? ಅಯ್ಯೋ! ಅವರ ಕೈಯಲ್ಲಿರುವ ಭಯಂಕರ ವಾದ ಬಿಲ್ಲನ್ನು ನೋಡು! ಅಂತಹ ಕುರುಸೈನ್ಯದಲ್ಲಿ ಪ್ರವೇಶಿಸುವುದಕ್ಕೆ ನನಗೆ ಸರ್ವಥಾ ಸಮ್ಮತವಿಲ್ಲ. ಇಂದ್ರನೊಡಗೂಡಿದ ದೇವತೆಗಳಿಗಾದರೂ ಆ ಸೈನ್ಯಕ್ಕಿದಿರಾಗಿ ಹೋಗಲು ಸಾಧ್ಯವಿಲ್ಲ. ಇನ್ನು ಮನುಷ್ಯರ ಪಾಡೇ ನು! ರಥಗಳು, ಆನೆಗಳು, ಕುದುರೆಗಳು, ಪದಾತಿಗಳು, ಧ್ವಜಗಳು ಇವು ಗಳಿಂದ ದಟ್ಟವಾದ ಆ ಸೈನ್ಯವನ್ನು ಕಣ್ಣಿಂದ ನೋಡುವಾಗಲೇ ನನ್ನ ಮನಸ್ಸು ನಡುಗುತ್ತಿದೆ. ಆ ಸೇನೆಯಲ್ಲಿರತಕ್ಕವರಾದರೂ ಒಬ್ಬರಿಬ್ಬರೇ! ಭೀಷ್ಮ, ದ್ರೋಣ, ಕೃಪ, ಕರ್ಣ, ವಿವಿಂಶತಿ, ಅಶ್ವತ್ಥಾಮ, ವಿಕರ್ಣ, ಸೋ ಮದತ್ತ, ಬಾಹ್ಲಿಕ, ಮೊದಲಾದ ವೀರಾಧಿವೀರರು ಅದರಲ್ಲಿರುವರು. ರಾಜ ನಾದ ದುರ್ಯೋಧನನೂ, ವೀರನಾದ ದುರ್ಮರ್ಷಣನೂ ಆ ಸೈನ್ಯದಲ್ಲಿ ರುವುದನ್ನು ನೋಡು. ಎಲ್ಲರೂ ಮಹಾಧೀರರು! ಮಹಾಧನುರ್ಧಾರಿ ಗಳು! ಎಲ್ಲರೂ ಯುದ್ಧವಿಶಾರದರು. ಒಬ್ಬೊಬ್ಬರೂ ಕೊಬ್ಬಿದ ಮದ ದಾನೆಗಳಂತಿರುವರು. ರಥದಮೇಲೆ ತಮ್ಮತಮ್ಮ ಧ್ವಜಗಳನ್ನೂ, ಪತಾ ಕೆಗಳನ್ನೂ ಹೇಗೆ ಏರಿಸಿರುವರು ನೋಡು! ಎಲ್ಲರೂ ಒಳ್ಳೆಯ ನೀತಿ ಯನ್ನು ಬಲ್ಲವರು. ಸಮಸ್ತ ಸನ್ನಾಹಗಳನ್ನೂ ಸಿದ್ಧಪಡಿಸಿಕೊಂಡಿರುವರು. ಸಮಸ್ತ ವಿಷಯಗಳಲ್ಲಿಯೂ ನಿಶ್ಚಯಜ್ಞಾನವುಳ್ಳವರು. ಇಂತಹ ಮಹಾ ಶೂರರನ್ನು ಯುದ್ಧದಲ್ಲಿ ಜಯಿಸಬೇಕೆಂದು ನಾನು ಬುದ್ಧಿಯಿಲ್ಲದೆ ಇಲ್ಲಿಗೆ ಬಂದಂತಾಯಿತು. ಕೈಯಲ್ಲಿ ಆಯುಧಗಳನ್ನೆಲ್ಲ ಸಿದ್ಧವಾಗಿ ಹಿಡಿದು, ಸೈನ್ಯ

ವನ್ನು ವ್ಯೂಹಗಳನ್ನಾಗಿ ಮಾಡಿಕೊಂಡು ಬಂದಿರುವ ಆ ಕುರುಗಳನ್ನು ನೋಡಿದಮಾತ್ರದಲ್ಲಿಯೇ ನನ್ನ ಮೈಯಲ್ಲಿ ರೋಮಾಂಚವೆದ್ದಿದೆ. ನನ್ನ ಮನಸ್ಸಿಗೇನೋ ಮಯಕವು ಬರುವಂತಿದೆ. ಇನ್ನೇನುಗತಿ,'' ಎಂದನು.

ಜನಮೇಜಯರಾಜೇಂದ್ರಾ! ಹೀಗೆ ಧನುರ್ಧಾರಿಗಳಾಗಿ ಬಂದಿದ್ದ ಕೌರವರ ದೊಡ್ಡ ಸೈನ್ಯವನ್ನು ನೋಡಿನೋಡಿ ಮೂಢನಾದ ಉತ್ತರನು, ಅರ್ಜುನನಮುಂದೆ ಭಯದಿಂದ ರೋದಿಸುವುದಕ್ಕೆ ತೊಡಗಿದನು. "ಓ ಸಾರಥೀ! ನನ್ನ ತಂದೆಯು ತ್ರಿಗರ್ತರನ್ನು ಇದಿರಿಸುವುದಕ್ಕಾಗಿ ಸೈನ್ಯಗಳನ್ನೆಲ್ಲ ತನ್ನೊಡನೆ ಕರೆದುಕೊಂಡು ಹೋದನು. ಜನಶೂನ್ಯವಾದ ಈ ನಗರದಲ್ಲಿ ನನ್ನನ್ನು ಬಿಟ್ಟುಹೋಗಿರುವನು. ನನ್ನ ಸಹಾಯಕ್ಕೆ ಇಲ್ಲಿ ಸೈನಿಕರೂ ಇಲ್ಲ. ಇಲ್ಲಿ ನಾನು ಏಕಾಕಿಯಾಗಿರುವೆನು. ಇನ್ನೂ ಬಾಲನು. ನನಗೆ ಅಸ್ತ್ರಗಳಲ್ಲಿ ಪರಿಶ್ರಮವೂ ಇಲ್ಲವು. ಇಂತಹ ನಾನು ಅಸ್ತ್ರವಿದ್ಯೆಯಲ್ಲಿ ಸುಶಿಕ್ಷಿತರಾದ ಅನೇಕಮಂದಿ ವೀರರನ್ನು ಇದಿರಿಸಿ ನಿಲ್ಲಬೇಕೆಂದರೆ ಹೇಗೆತಾನೇ ಸಾಧ್ಯವು? ನನ್ನಿಂದ ಸಾಧ್ಯವಿಲ್ಲ ಓ ಬೃಹನ್ನಳೆ! ರಥವನ್ನು ಹಿಂತಿರುಗಿಸಿಬಿಡು'' ಎಂದು ದೈನ್ಯದಿಂದ ಪ್ರಾರ್ಥಿಸಿದನು. ಹೀಗೆ ತನ್ನ ಮುಂದೆ ಗೋಳಾಡುತ್ತಿರುವ ಉತ್ತರನನ್ನು ನೋಡಿ, ಲೋಕದಲ್ಲಿರುವ ಮಹಾರಥರಲ್ಲೆಲ್ಲಾ ಮೇಲೆನಿಸಿಕೊಂಡ ಅರ್ಜುನನು ನಗುತ್ತ ಹೀಗೆಂದು ಹೇಳುವನು. "ಓ ರಾಜಕುಮಾರಾ! ಭಯದಿಂದ ನೀನು ಹೀಗೆ ಕುಗ್ಗಿರುವೆಯಲ್ಲಾ! ಈ ನಿನ್ನ ಸ್ಥಿತಿಯು ಶತ್ರುಗಳಿಗೆ ಮತ್ತಷ್ಟು ಉತ್ಸಾಹಕರವಾಗುವುದು. ಯುದ್ಧರಂಗದಲ್ಲಿ ಶತ್ರುಗಳು ಇನ್ನೂ ನಮ್ಮ ನಮ್ಮಮೇಲೆ ಕೈಮಾಡಿ, ಸ್ವಲ್ಪವಾದರೂ ಯುದ್ಧಕಾರ್ಯವನ್ನು ತೋರಿಸಿಲ್ಲ. ಇಷ್ಟರಲ್ಲಿಯೇ ನಿನಗೆ ಈ ಭಯವುಂಟೇ? ನೀನಾಗಿಯೇ ನನ್ನನ್ನು ಕರೆಸಿ, ಕೌರವರ ಬಳಿಗೆ ನಿನ್ನನ್ನು ಕರೆದುಕೊಂಡು ಹೋಗೆಂದು ಹೇಳಿದೆಯಲ್ಲವೇ? ಅಲ್ಲಿಗೇ ನಾನು ಕರೆದುಕೊಂಡು ಹೋಗುವೆನು. ಅದೋ, ಅನೇಕವಾದ ಧ್ವಜಗಳು ಕಾಣುತ್ತಿರುವ ಆ ಸ್ಥಳದಲ್ಲಿಯೇ ಕೌರವರಿರುವರು. ಓ ಮಹಾಬಾಹೂ! ಮಾಂಸಾಶೆಯುಳ್ಳ ಹದ್ದುಗಳಂತೆ, ಪರಸ್ವಾಪಹಾರದಲ್ಲಿಯೇ ಆಸಕ್ತರಾಗಿ, ಕೊಲೆಗೆಲಸಕ್ಕೆ ಹಿಂಜರಿಯದ ಆತತಾಯಿಗಳೆ

ನಿಸಿದ ಆ ಕೌರವರನಡುವೆ ನಿನ್ನನ್ನು ತೆಗೆದುಕೊಂಡುಹೋಗಿ ಬಿಡಬೇಕೆಂದಿದ್ದೆನು. ಇಷ್ಟರಲ್ಲಿಯೇ ನೀನು ಹೆದರುವೆಯಾ? ಸಮುದ್ರದಂತೆ ಗಂಭೀರವಾಗಿರುವ ಆ ಕುರುಸೈನ್ಯಕ್ಕೆ ಹೋಗುವೆವು ಬಾ! ಓ ರಾಜಕುಮಾರಾ! ಹಿಂದೆ ನೀನು ಹೆಂಗಸರ ಗುಂಪಿನಲ್ಲಿ, ಅನೇಕಪುರುಷರೂ ಕೇಳುತ್ತಿದ್ದ ಹಾಗೆಯೇ, ಇಲ್ಲದ ಜಂಬವನ್ನು ಹೇಳಿಕೊಂಡು ಹೊರಟುಬಂದು, ಇಲ್ಲಿ ಯುದ್ಧಮಾಡಲಾರದೆ ಹೀಗೆ ಮಾತಾಡುತ್ತಿರುವೆಯಲ್ಲಾ. ನೀನು ಸ್ತ್ರೀಯರ ಮುಂದೆಯೂ, ಪುರುಷರ ಮುಂದೆಯೂ ಶಪಥಪೂರ್ವಕವಾಗಿ ನಿನ್ನ ಪೌರುಷವನ್ನು ಹೇಳಿಕೊಂಡು, ಒಡನೆಯೇ ರಥವನ್ನೇರಿ ಬಂದೆಯಲ್ಲವೇ? ಅದನ್ನಾದರೂ ನೀನು ಮನಸ್ಸಿಗೆ ತಂದುಕೊಳ್ಳಬೇಡವೇ? ನೀನು ಶತ್ರುಗಳಿಂದ ನಿಮ್ಮ ಗೋವುಗಳನ್ನು ಬಿಡಿಸಿಕೊಳ್ಳದೆ ಪಟ್ಟಣಕ್ಕೆ ಹಿಂತಿರುಗಿ ಹೋದರೆ, ವೀರರೂ, ಹೆಂಗಸರೂ, ಸಾಮಾನ್ಯಜನರೂ ನಿನ್ನನ್ನು ಹಾಸ್ಯಮಾಡುವುದಿಲ್ಲವೇ? ಉತ್ತರಾ! ನಿನ್ನ ಸಂಗತಿಯಾದರೂ ಹಾಗಿರಲಿ. ಸಾರಥ್ಯಕಾರ್ಯದಲ್ಲಿ ಮಹಾನಿಪುಣನೆಂದು ಸೈರಂಧ್ರಿಯು ನನ್ನನ್ನು ಅಷ್ಟುಬಗೆಯಿಂದ ಸ್ತೋತ್ರಮಾಡಿರುವಳು. ಈಗ ಗೋವುಗಳನ್ನು ಬಿಡಿಸಿಕೊಳ್ಳದೆ ಹಿಂತಿರುಗಿ ಪಟ್ಟಣಕ್ಕೆ ಹೋಗಬೇಕೆಂದರೆ ನನಗೇ ನಾಚಿಕೆಯಾಗಿರುವುದು. ನನಗೆ ಹಿಂತಿರುಗಿ ಹೋಗುವುದಕ್ಕೂ ಇಲ್ಲದಂತಾಗಿದೆ. ಸೈರಂಧ್ರಿಯ ಸ್ತೋತ್ರದಿಂದಲೂ ನಿನ್ನ ಪ್ರೋತ್ಸಾಹದಿಂದಲೂ ನಾನು ಇಲ್ಲಿಗೆ ಬಂದವನು. ಈಗ ನಾನು ಈ ಕುರುಗಳೊಡನೆ ಯುದ್ಧಮಾಡದೆ ಹೇಗೆ ತಾನೇ ಹಿಂತಿರುಗಬಹುದು? ಕುಮಾರಾ! ಮನಸ್ಸನ್ನು ದೃಢಮಾಡಿಕೊಂಡು ಸುಮ್ಮನಿರು'' ಎಂದನು.

ಅದಕ್ಕಾ ಉತ್ತರನು ''ಓ ಬೃಹನ್ನಳೆ! ಕೌರವರೆಲ್ಲರೂ ಗುಂಪಾಗಿ ಬಂದು ಮತ್ಸ್ಯದೇಶದ ಧನವನ್ನೆಲ್ಲಾ ತಮಗೆ ಇಷ್ಟಬಂದಂತೆ ಕೊಳ್ಳೆಹೊಡೆದುಕೊಂಡು ಹೋಗಲಿ. ಹೆಂಗಸರೂ, ಗಂಡಸರೂ ಬೇಕಾದ ಹಾಗೆ ನನ್ನನ್ನು ಹಾಸ್ಯಮಾಡಲಿ. ನನಗೆ ಈಗ ಈ ಯುದ್ಧದಿಂದೇನೂ ಆಗಬೇಕಾದುದಿಲ್ಲ. ನಮ್ಮ ಗೋವುಗಳು ಹೋದರೂ ಹೋಗಲಿ. ನಾನೇನೋ ಇಲ್ಲಿಂದ ಹಿಂತಿ

ರುಗಿ ನಿನ್ನ ಕಣ್ಣಿದಿರಾಗಿಯೇ ಪಟ್ಟಣಕ್ಕೆ ಹೋಗಿ ಸೇರಿಕೊಳ್ಳುವೆನು'' ಎಂದನು.

ಓ ಜನಮೇಜಯರಾಜಾ ಕೇಳು! ಹೀಗೆಂದು ಹೇಳಿ ಉತ್ತರನು, ತನ್ನ ಮಾನದ ಮೇಲೆಯೂ ದೃಷ್ಟಿಯನ್ನಿಡದೆ, ಮಹಾಭಯಗ್ರಸ್ತನಾಗಿ ತನ್ನ ಕೈಯಲ್ಲಿದ್ದ ಧನುರ್ಬಾಣಗಳನ್ನು ರಥದಲ್ಲಿಯೇ ಬಿಟ್ಟು, ರಥದಿಂದ ದುಮುಕಿ ಓಡುವುದಕ್ಕಾರಂಭಿಸಿದನು. ಅರ್ಜುನನು ಉತ್ತರನನ್ನು ಕೂಗಿ ಕರೆಯುತ್ತ, ''ಕ್ಷತ್ರಿಯರು ರಣರಂಗದಿಂದ ಹೀಗೆ ಪಲಾಯನಮಾಡುವುದು ಧರ್ಮವಲ್ಲ! ಶೂರರು ಇಂತಹ ಕಾರ್ಯವನ್ನು ಸಹಿಸಲಾರರು. ಯುದ್ಧಕ್ಕೆ ಬಂದಮೇಲೆ ಶತ್ರುಗಳ ಕೈಯಿಂದ ಸಾಯುವುದಾದರೂ ಉತ್ತಮವೇಹೊರತು ಭಯಪಟ್ಟು ಓಡಿಹೋಗುವುದು ಉಚಿತವಲ್ಲ'' ಎಂದು ಹೇಳುತ್ತ, ತಾನೂ ರಥದಿಂದ ಕೆಳಕ್ಕೆ ಧುಮುಕಿ, ಓಡಿಹೋಗುತ್ತಿರುವ ಆ ವಿರಾಟಪುತ್ರನನ್ನು ಹಿಡಿದುತರುವುದಕ್ಕಾಗಿ ಅವನ ಹಿಂದೆ ಓಡಿದನು. ಬೆನ್ನಹಿಂದೆ ಜಡೆಹಾಕಿ ಉದ್ದವಾದ ತಲೆಕೂದಲನ್ನೂ, ಮೈಮೇಲೆ ಧರಿಸಿದ ಎರಡು ಕೆಂಪುವಸ್ತ್ರಗಳನ್ನೂ ಹಾರಿಸುತ್ತ, ನೆಲವು ಜಗ್ಗುವಂತೆ ದಾಟುಗಾಲಿನಿಂದ ಉತ್ತರನನ್ನು ಹಿಂಬಾಲಿಸಿ ಓಡುತ್ತಿದ್ದಾಗ, ಅವನು ಅರ್ಜುನನೆಂದು ಯಾರಿಗೂ ತಿಳಿಯಲಿಲ್ಲ. ಆ ಸ್ತ್ರೀರೂಪವನ್ನು ನೋಡಿ ಕೆಲವು ಸೈನಿಕರು ಅಟ್ಟಹಾಸದಿಂದ ನಗುತ್ತಿದ್ದರು. ಕೌರವರೂ ಕೂಡ ಹೀಗೆ ವೇಗದಿಂದ ಓಡುತ್ತಿದ್ದ ಅರ್ಜುನನನ್ನು ನೋಡಿ, ಒಬ್ಬರಿಗೊಬ್ಬರು ''ಯಾವನಿವನು? ಹೀಗೆ ರಥವನ್ನು ಬಿಟ್ಟು ಓಡುತ್ತಿರುವನು? ಬೂದಿಮುಚ್ಚಿದ ಕೆಂಡದಂತೆ ಇವನಾವನೋ ವೇಷವನ್ನು ಮರೆಸಿಕೊಂಡಿರುವಂತಿದೆ. ಇವನಲ್ಲಿ ಕೆಲವು ಭಾಗವು ಪುರುಷನನ್ನೂ, ಕೆಲವು ಭಾಗವು ಸ್ತ್ರೀಯನ್ನೂ ಹೋಲುತ್ತಿರುವುದು' ಎಂದು ಹೇಳಿಕೊಳ್ಳುತ್ತಿದ್ದರು. ಆಗ ಕೌರವ ಪಾಂಡವರಿಬ್ಬರಿಗೂ ಆಚಾರ್ಯನೂ, ಬುದ್ಧಿಯಲ್ಲಿ ಶುಕ್ರಬೃಹಸ್ಪತಿಗಳಿಗೆ ಸಮಾನನೂ ಆದ ದ್ರೋಣಾಚಾರ್ಯನು ಅವರನ್ನು ಕುರಿತು ''ಎಲೈ ಸೈನಿಕರೇ! ಈಗ ಆ ವಿಚಾರದಿಂದ ನಿಮಗೇನು? ಓಡಿಹೋಗುತ್ತಿರುವ ಈ ವ್ಯಕ್ತಿಯಿಂದತಾನೇ ನಿಮಗೆ ಆಗಬೇಕಾದುದೇನು? ಯಾವನೋ ಒಬ್ಬನು ಭಯದಿಂದ ಯುದ್ಧ



ಕೌರವ ಸೈನ್ಯವನ್ನು ಕಂಡು ಭಯಪಟ್ಟು, ರಥದಿಂದ ಧುಮುಕಿ ಓಡಿಹೋಗುತ್ತಿದ್ದ ಉತ್ತರನನ್ನು ಅರ್ಜುನನು ಬೆನ್ನಟ್ಟಿ ಹಿಡಿದುದು.

ಯನ್ನೂ ಅನುಭವಿಸುವೆ. ನೀನು ಜಯಿಸಿಬಂದರೆ ರಾಜ್ಯಸುಖವುಂಟು. ಒಂದುವೇಳೆ ಯುದ್ಧದಲ್ಲಿ ಸತ್ತರೂ ಸ್ವರ್ಗಸುಖವನ್ನು ಪಡೆಯುವೆ. ರಣರಂಗದಿಂದ ಪಲಾಯನಮಾಡುವುದೇನೂ ಸರ್ವಥಾ ಶ್ರೇಯಸ್ಕರವಲ್ಲ. ಓ ರಾಜಕುಮಾರಾ! ನೀನು ಈಗಲೇ ಈ ಕುರುಗಳೆಲ್ಲರನ್ನೂ ಓಡಿಸಿ, ಜಯ ಹೊಂದುವುದಕ್ಕೆ ತಕ್ಕಂತೆ ನಾನು ಪ್ರಯತ್ನಿಸುವೆನು. ಇಲ್ಲಿ ನಾನು ನಿನಗೆ ಸಹಾಯಕನಾಗಿರುವೆನಲ್ಲವೇ? ಒಂದುವೇಳೆ ಶತ್ರುಗಳೊಡನೆ ಯುದ್ಧ ಮಾಡುವುದಕ್ಕೆ ನಿನಗೆ ಇಷ್ಟವಿಲ್ಲದಿದ್ದರೆ, ನನಗೆ ಸಾರಥಿಯಾಗಿದ್ದು ಕುದುರೆಗಳನ್ನಾದರೂ ನಡೆಸು. ನಾನು ಶತ್ರುಗಳೊಡನೆ ಯುದ್ಧಮಾಡುವೆನು. ನನ್ನ ಬಾಹುಬಲದಿಂದ ರಕ್ಷಿತನಾದ ನೀನು ಇತರರಿಗೆ ದುರ್ಜಯವಾಗಿಯೂ, ಭಯಂಕರವಾಗಿಯೂ, ಭಯಂಕರಪರಾಕ್ರಮವುಳ್ಳ ರಥಿಕರಿಂದ ರಕ್ಷಿತವಾಗಿಯೂ ಇರುವ ಆ ಸೈನ್ಯಕ್ಕಿದಿರಾಗಿ ಹೊರಡು. ರಾಜಕುಮಾರಾ! ಭಯಪಡಬೇಡ! ಶತ್ರುಗಳನ್ನು ನಾಶಮಾಡತಕ್ಕ ಕ್ಷತ್ರಿಯಜಾತಿಯಲ್ಲಿ ಹುಟ್ಟಿದವನಲ್ಲನೇ ನೀನು? ಆ ಕುರುಗಳೊಡನೆ ನಾನೇ ಯುದ್ಧಮಾಡಿ ನಿನ್ನ ಗೋವುಗಳನ್ನು ಹಿಂತಿರುಗಿಸಿಕೊಂಡು ಬರುವೆನು. ನಡೆ! ಬೇಗನೆ ರಥವನ್ನೇರು! ನನಗೆ ನೀನು ಸಾರಥಿಯಾಗು. ಯುದ್ಧಪ್ರಚಂಡರಾದ ಶೂರರೆಲ್ಲರನ್ನೂ ನಾನು ನಿಮಿಷಮಾತ್ರದಲ್ಲಿ ಯಮಪುರಿಗೆ ಕಳುಹಿಸುವೆನು'' ಎಂದನು. ಹೀಗೆಂದು ಹೇಳುತ್ತ ಅರ್ಜುನನು, ವಿರಾಟಪುತ್ರನಾದ ಉತ್ತರನಿಗೆ ಧೈರ್ಯವನ್ನು ಹೇಳಿ ಉತ್ಸಾಹಗೊಳಿಸಿದನು. ಉತ್ತರನಾದರೋ, ಮನಸ್ಸಿನಲ್ಲಿ ಭಯದಿಂದ ನಿಂತನೆಲೆಯಲ್ಲಿ ನಿಲ್ಲದೆ, ಅತ್ತಿತ್ತ ಹೊರಳಾಡುತ್ತಿರುವನು. ಅವನಿಗೆ ಈ ಪ್ರಪಂಚವೇ ಬೇಡವಾಗಿದ್ದಿತು. ಅವನು ಗಟ್ಟಿಯಾಗಿ ಅಳುತಿದ್ದನು. ಈ ಸ್ಥಿತಿಯಲ್ಲಿ ಅರ್ಜುನನು ತಾನೇ ಅವನನ್ನೆತ್ತಿ ರಥದಲ್ಲಿ ಕುಳ್ಳಿರಿಸಿದನು. ಮತ್ತು ಅವನಿಗೆ ಇನ್ನೂ ಅನೇಕವಿಧವಾಗಿ ಸಮಾಧಾನಹೇಳಿ ತನ್ನ ಸಾರಥಿಯಾಗಿರಲು ಅವನನ್ನೊಪ್ಪಿಸಿದನು. ಆಮೇಲೆ, ರಥವನ್ನೇರಿ, ತನ್ನ ಗಾಂಡೀವಧನುಸ್ಸನ್ನಿಟ್ಟಿದ್ದ ಬನ್ನಿಯಮರದ ಬಳಿಗೆ ಬಂದನು.

ಇದು ಮೂವತ್ತೊಂಭತ್ತನೆಯ ಅಧ್ಯಾಯವು.



ಅರ್ಜುನನ ನಿರ್ಬಂಧದಿಂದ ಉತ್ತರನು ಬನ್ನಿಯಮರದ ಮೇಲೇರಿ ಆಯುಧಗಳನ್ನು ತೆಗೆದುಕೊಟ್ಟುದು.

ಓ ಜನಮೇಜಯರಾಜೇಂದ್ರಾ! ಹೀಗೆ ನಪುಂಸಕವೇಷದಿಂದ ತನ್ನ ರೂಪವನ್ನು ಮರೆಸಿಕೊಂಡಿದ್ದ ಅರ್ಜುನನು, ಉತ್ತರನನ್ನು ರಥದ ಮೇಲೇರಿಸಿಕೊಂಡು, ತಾನೂ ರಥದಲ್ಲಿ ಕುಳಿತು, ರಥಿಕೋತ್ತಮನಂತೆ ಕಾಣುತ್ತ, ಬನ್ನಿಯ ಮರದಕಡೆಗೆ ಹೋಗುತ್ತಿರುವುದನ್ನು, ಕೌರವಸೈನ್ಯದಲ್ಲಿ ರಥಿಕಶ್ರೇಷ್ಠರೆನಿಸಿದ ಭೀಷ್ಮದ್ರೋಣಾದಿಗಳೆಲ್ಲರೂ ನೋಡಿದರು. ಮೊದಲಿಂದಲೂ ಅರ್ಜುನನ ವಿಷಯದಲ್ಲಿ ತಮಗಿದ್ದ ಬೆಜ್ಜರದಿಂದ ಎಲ್ಲರಿಗೂ ಅಂಜಿಕೆ ಹುಟ್ಟಿತು. ಈ ಭಯದಿಂದ ಕೌರವಸೈನಿಕರಿಗೆಲ್ಲ ಯುದ್ಧದಲ್ಲಿ ಉತ್ಸಾಹವಿಲ್ಲದಿರುವುದನ್ನೂ, ಅಲ್ಲಲ್ಲಿ ಆಶ್ಚರ್ಯಕರಗಳಾಗಿ ತೋರುತ್ತಿರುವ ಉತ್ಪಾತಗಳನ್ನೂ ನೋಡಿ, ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ದ್ರೋಣಾಚಾರ್ಯನು ಕೌರವರನ್ನು ಸಂಬೋಧಿಸಿ ಹೀಗೆಂದು ಹೇಳುವನು. "ಎಲೈ ವೀರರೇ! ನಮ್ಮ ಮುಂದೆ ಕಾಣಿಸುತ್ತಿರುವ ಭಯಂಕರಗಳಾದ ಉತ್ಪಾತಗಳನ್ನು ನೋಡಿರಿ. ಗಾಳಿಯು ಸುಖಸ್ಪರ್ಶವನ್ನು ಬಿಟ್ಟು, ಭಯಂಕರವಾಗಿ ಮೊರೆಯುತ್ತ ಕ್ರೂರವಾಗಿ ಬೀಸುತ್ತಿರುವುದು. ಆಕಾಶದಿಂದ ಬೂದಿಯ ಮಳೆಯು ಬಿದ್ದಂತೆ ಒಂದು ವಿಧವಾದ ಮಬ್ಬು ಅಂತರಿಕ್ಷವನ್ನೆಲ್ಲ ಆವರಿಸಿದೆ! ಅದೋ! ಮೇಘಗಳು ವಿಕಾರವರ್ಣದಿಂದ ನೋಡುವುದಕ್ಕೆ ಆಶ್ಚರ್ಯವನ್ನುಂಟುಮಾಡುತ್ತಿವೆ. ನಮ್ಮ ಶಸ್ತ್ರಗಳು ಒರೆಗಳಿಂದ ತಾವಾಗಿ ಸಡಿಲಿ ಬೀಳುತ್ತಿರುವುವು. ಅದೋ! ದಿಕ್ಕುಗಳೆಲ್ಲ ಉರಿಯುವಂತೆ ಕಾಣುತ್ತ, ಅಲ್ಲಲ್ಲಿ ನರಿಗಳು ಭಯಂಕರಧ್ವನಿಯಿಂದ ಗೋಳಿಡುತ್ತಿರುವುವು. ನಮ್ಮ ಕುದುರೆಗಳು ಇದ್ದಕ್ಕಿದ್ದಹಾಗೆ ಕಣ್ಣೀರನ್ನು ಸುರಿಸುತ್ತಿರುವುವು. ಗಾಳಿ ಮುಂತಾದ ಕಾರಣಗಳೇನೂ ಇಲ್ಲದೆಯೇ, ಧ್ವಜಗಳು ನಡುಗುತ್ತಿರುವುವು. ಈ ಮುಂದೆ ಕಾಣುವ ದುರ್ನಿಮಿತ್ತಗಳನ್ನು ನೋಡಿದರೆ, ಮುಂದೆ ಭಯಂಕರವಾದ ಒಂದು ಯುದ್ಧವು ನಮ್ಮನ್ನು ಇದಿರುನೋಡುತ್ತಿರುವುದಾಗಿ ತೋರುವುದು. ನೀವೆಲ್ಲರೂ ಎಚ್ಚರಿಕೆಯಿಂದಿರಿ! ನಮ್ಮ ರಾಜನನ್ನು ನಿರಪಾಯವಾಗಿ ಕಾಪಾಡಿಕೊಳ್ಳಿರಿ! ನಿಮ್ಮ ಸೈನ್ಯಗಳನ್ನು ವ್ಯೂಹರೂಪ

ವಾಗಿ ನಿಲ್ಲಿಸಿರಿ. ಏನೋ ಮಹಾವಿಪತ್ತು ನಮಗಿದಿರಾಗಿರುವುದೆಂದು ಭಾವಿಸಿರಿ. ಗೋಧನವನ್ನು ರಕ್ಷಿಸಿಕೊಳ್ಳಿರಿ! ಮಹಾಧನುರ್ಧರನೂ, ಎಲ್ಲಾ ಶಸ್ತ್ರಧಾರಿಗಳಲ್ಲಿ ಮೇಲೆಸಿದವನೂ, ವೀರನೂ ಆದ ಆ ಅರ್ಜುನನೇ ನಪುಂಸಕವೇಷದಿಂದ ಇಲ್ಲಿಗೆ ಬಂದಿರುವನು. ಇದರಲ್ಲಿ ಸಂದೇಹವೇ ಇಲ್ಲ'' ಎಂದು ಹೇಳಿ, ಭೀಷ್ಮನ ಕಡೆಗೆ ತಿರುಗಿ, "ಎಲೈ ಗಂಗಾಪುತ್ರನೆ! (ಲಂಕೇಶ್ವರನಾದ ರಾವಣನ ಅಶೋಕವನಕ್ಕೆ ವೈರಿಯಾದ) ಹನುಮಂತನನ್ನು ಧ್ವಜದಲ್ಲಿ ಉಳ್ಳವನೂ, (ಅರ್ಜುನವೆಂಬ) ವೃಕ್ಷಪರ್ಯಾಯವಾದ ಹೆಸರುಳ್ಳವನೂ, ಇಂದ್ರಪುತ್ರನೂ, ನಡತೆಯಲ್ಲಿ ದೇವರಾಜನಂತೆಯೂ, ಒಂದೊಂದು ಸಮಯದಲ್ಲಿ ಹೆಂಗಸಿನಂತೆಯೂ ಕಾಣುವ ಧೀರನು (ಅದೋ ಬಂದಿರುವನು)'' ಎಂಬೀ ವಾಕ್ಯಗಳನ್ನು (ಬೇರೆಯವರಿಗೆ ಅರ್ಥವಾಗದಂತಿರುವ) *ಸಂಜ್ಞೆಯ ಮಾತಿನಿಂದ ಅವನಿಗೆ ತಿಳಿಸಿದನು.

ಓ ಜನಮೇಜಯರಾಜನೇ! ದ್ರೋಣಾಚಾರ್ಯನು ಹೀಗೆಂದು ಹೇಳಿ ಸುಮ್ಮನಾದಮೇಲೆ ಭೀಷ್ಮನು, ದ್ರೋಣನ ಮಾತಿಗೆ ಉತ್ತರವಾಗಿ, ತಾನೂ ಸಂಜ್ಞೆಯಿಂದ ಹೀಗೆಂದು ಹೇಳುವನು. "ನಾವು ನಮ್ಮ ರಾಜ್ಯದ ಎಲ್ಲೆಯನ್ನು ದಾಟಿ ಈಗ ಇತರರಾಜ್ಯಕ್ಕೆಬಂದು ಸೇರಿರುವೆವು. ಹಿಂದೆ ನಾವು ಸಭೆಯಲ್ಲಿ ಸೂಚಿಸಿದ್ದ (ಪಾಂಡವರ ಅಜ್ಞಾತವಾಸದ) ಕಾಲಾವಧಿಯೂ ಕಳೆದುಹೋಯಿತು. ಇನ್ನು (ಅವರು) ಶತ್ರುಗಳಿಂದ ಭಯಪಡಬೇಕಾಗಿಲ್ಲ. ಓ ಪುರುಷಶ್ರೇಷ್ಠನೇ! (ಪಾಂಡವರಿಗೆ ಅಪಾಯವುಂಟಾಗುವುದೆಂಬ) ಶಂಕೆಯನ್ನು ಬಿಡು'' ಎಂದನು. (ಪಾಂಡವರಿಗೆ) ಹಿತೈಷಿಯಾದ ಭೀಷ್ಮನು ಹೇಳಿದ ಈ ಮಾತನ್ನು ಕೇಳಿ ದ್ರೋಣನು ದುರ್ಯೋಧನನನ್ನು ನೋಡಿ "ರಾಜಾ! ಮಹಾಧನುರ್ಧಾರಿಯೂ, ಶಸ್ತ್ರಧಾರಿಗಳಲ್ಲಿ ಮೇಲೆನಿಸಿದವನೂ, ವೀರನೂ ಆದ ಅರ್ಜುನನೇ ನಪುಂಸಕವೇಷದಿಂದ ಇಲ್ಲಿಗೆ ಬಂದಿರುವನು. ಇದರಲ್ಲಿ ಸಂದೇಹವೇ ಇಲ್ಲ. ಮಹಾಪರಾಕ್ರಮಿಯೂ, ಸವ್ಯಸಾಚಿಯೆಂದು ಹೆಸರುಗೊಂಡವನೂ, ಶತ್ರುನಿಗ್ರಾಹಕನೂ

---

* ನದೀಜಲಂ ಕೇಶವನಾರಿಕೇತುರ್ನಗಾಹ್ವಯೋನಾಮ ನಗಾರಿಸೂನುಃ । ಗತ್ಯಾಸುರೇಶಃ ಕ್ವಚಿದಂಗನೇವ ಗುರುರ್ಬಭಾಷೇ ವಚನಂ ತದಾನೀಂ ॥ ಎಂಬು ಇಲ್ಲಿನ ಸಂಜ್ಞಾಶ್ಲೋಕವು.

ಆದ ಅರ್ಜುನನೇ ಈತನು! ಬೇರೆ ಎಲ್ಲಾ ರಾಜರನ್ನೂ ಜಯಿಸಬಲ್ಲ ಕೌರವರಾದರೂ ಇವನಿಂದ ಕೊಲ್ಲಲ್ಪಡತಕ್ಕವರೇ! ಯಾವನು ಹುಟ್ಟಿದೊಡನೆ ಈ ಸಮಸ್ತ ಭೂಮಿಯೂ ಅಧಿಕಾಹ್ಲಾದವನ್ನು ಹೊಂದಿತೋ, ಯಾವನು ತನ್ನ ವೀರ್ಯದಿಂದ ದ್ರುಪದನನ್ನು ಕಟ್ಟಿತಂದು, ನನಗೆ ಗುರುದಕ್ಷಿಣೆಯಾಗಿ ಒಪ್ಪಿಸಿದನೋ, ಯಾವನು ಹಿಂದೆ ದ್ರುಪದರಾಜನ ಪಟ್ಟಣದಲ್ಲಿ ಆಕಾಶದಲ್ಲಿದ್ದ ಮತ್ಸ್ಯಯಂತ್ರವನ್ನು ಛೇದಿಸಿ, ತನಗೆ ಇದಿರಾದ ರಾಜರೆಲ್ಲರನ್ನೂ ಸೋಲಿಸಿ, ಸ್ವಯಂವರದಲ್ಲಿ ಪಾಂಚಾಲಪುತ್ರಿಯನ್ನು ಸಾಧಿಸಿದನೋ, ಯಾವನು ದೇವಾಸುರರೆಲ್ಲರನ್ನೂ ಜಯಿಸಿ ಖಾಂಡವವನದಲ್ಲಿ ಅಗ್ನಿದೇವನನ್ನು ತೃಪ್ತಿಗೊಳಿಸಿದನೋ, ಯಾವನು ಯಾದವರನ್ನು ಜಯಿಸಿ ಸುಭದ್ರೆಯನ್ನು ಮದುವೆಯಾದನೋ, ಯಾವನು ತ್ರಿಪುರಸಂಹಾರಿಯೂ, ಕಾಮವಿರೋಧಿಯೂ ಆದ ರುದ್ರನನ್ನು ಕಾಳಗದಲ್ಲಿ ಗೆದ್ದನೋ. ಯಾವನು ಸ್ವರ್ಗಕ್ಕೆ ಹೋಗಿ ಅಲ್ಲಿ ಇಂದ್ರನನ್ನು ಜಯಿಸಿದ ನಿವಾತಕವಚರೆಂಬ ಮೂರುಕೋಟಿ ದಾನವರನ್ನು ಜಯಿಸಿದನೋ, ಯಾವನು ಹಿರಣ್ಯಪುರವಾಸಿಗಳಾದ ಕಾಲಕೇಯರನ್ನು ಜಯಿಸಿದನೋ, ಓ ದುರ್ಯೋಧನ ರಾಜಾ! ಅಷ್ಟೇಕೆ? ಹಿಂದೆ ದ್ವೈತವನದಲ್ಲಿ ಚಿತ್ರಸೇನನೆಂಬ ಗಂಧರ್ವನಿಂದ ಹಿಡಿದು ಕಟ್ಟಲ್ಪಟ್ಟ ನಿನ್ನನ್ನು ಯಾವನು ಬಿಡಿಸಿದನೋ, ಯಾವನು ಮೇರುವಿನ ಉತ್ತರಭಾಗಕ್ಕೆ ಹೋಗಿ, ಅನೇಕ ರಾಜರನ್ನು ಜಯಿಸಿ, ಮಹತ್ತಾದ ಧನರಾಶಿಯನ್ನು ತಂದು ಧರ್ಮರಾಜನಿಗೆ ಒಪ್ಪಿಸಿದನೋ, ಯಾವನಲ್ಲಿ ಶೌರ್ಯ, ವೀರ್ಯ, ಧೈರ್ಯ, ಗಾಂಭೀರ್ಯ, ಔದಾರ್ಯ, ಪರಾಕ್ರಮ, ಶ್ರೀ, ಹ್ರೀ, ಧರ್ಮ, ದಯೆ, ಆರ್ಜವ ಮೊದಲಾದ ಸದ್ಗುಣಗಳೆಲ್ಲವೂ ತುಂಬಿರುವುವೋ, ಆ ಅರ್ಜುನನೇ ಇವನೆಂಬುದರಲ್ಲಿ ಸಂದೇಹವಿಲ್ಲ. ಇವನು ಸಮಸ್ತ ದೇವಗಣಗಳನ್ನಾದರೂ ಜಯಿಸದೆ ಯುದ್ಧದಿಂದ ಹಿಂತಿರುಗುವುದಿಲ್ಲ. ಶೂರನಾದ ಈತನನ್ನು ನೀನು ಕಾಡಿನಲ್ಲಿ ಅನೇಕವಿಧವಾಗಿ ಕಷ್ಟಪಡಿಸಿರುವೆ. ಆ ಕೋಪವು ಅವನ ಮನಸ್ಸಿನಲ್ಲಿ ಈಗಲೂ ಕುದಿಯುತ್ತಿರುವುದು. ಇದರಮೇಲೆ ಇಂದ್ರನಿಂದ ಈತನು ಧನುರ್ವಿದ್ಯೆಯಲ್ಲಿ ಚೆನ್ನಾಗಿ ಶಿಕ್ಷಿತನಾಗಿ ಬಂದಿರುವನು. ನಿನ್ನಮೇಲಿನ ಕೋಪದಿಂದಲೇ ಅವನು ಯುದ್ಧಕ್ಕೆ ಬಂದಿರುವುದರಲ್ಲಿ ಸಂದೇಹವಿಲ್ಲ. ಇವನನ್ನಿದಿರಿಸಿ

ಮಾಡಬಹುದು? ನಿನ್ನ ಬುದ್ಧಿಗೆತಾನೇ ಇದು ಹೇಗೆ ಉಚಿತವೆಂದು ತೋರಿತು? ನಾನಾದರೋ ಉತ್ತಮ ಕ್ಷತ್ರಿಯಕುಲದಲ್ಲಿ ಹುಟ್ಟಿದವನು. ದೊಡ್ಡ ರಾಜಕುಮಾರನು. ಮಂತ್ರಗಳನ್ನೂ, ಯಜ್ಞಗಳನ್ನೂ ಬಲ್ಲವನು. ನಾನು ಇಂತವನಾಗಿದ್ದು, ಈ ಕೆಲಸವನ್ನು ಮಾಡುವುದೇ! ಓ ಬೃಹನ್ನಳೆ! ಈ ಮೃತದೇಹವನ್ನು ಮುಟ್ಟಿದವನು ಹೆಣವನ್ನು ಹೊತ್ತವನಂತೆ ಅಶುಚಿಯಾಗುವನಲ್ಲವೇ? ಇಂತಹ ಕೆಲಸವನ್ನು ಮಾಡೆಂದು ನನ್ನೊಡನೆ ಹೇಳುವುದಕ್ಕೆ ಹೇಗೆತಾನೇ ನಿನಗೆ ಮನಸ್ಸು ಬಂದಿತು?'' ಎಂದನು. ಅದಕ್ಕೆ ಅರ್ಜುನನು "ರಾಜಕುಮಾರಾ! ನೀನು ಮತ್ಸ್ಯಕುಲದಲ್ಲಿ ಹುಟ್ಟಿದವನೆಂದೂ, ಮಹಾಬುದ್ಧಿಶಾಲಿಯೆಂದೂ ನಾನು ಚೆನ್ನಾಗಿ ಬಲ್ಲೆನು. ಓ ಮಹಾಪ್ರಾಜ್ಞಾ! ಜಾತಿಯಿಂದಲೂ, ಕುಲದಿಂದಲೂ ಮೇಲೆನಿಸಿಕೊಂಡ ನಿನಗೆ ಅಂತಹ ಪಾಪಕಾರ್ಯಗಳನ್ನು ಮಾಡುವಂತೆ ಹೇಳುವೆನೇ? ನೀನು ಅದನ್ನು ಮುಟ್ಟಿದುದರಿಂದ ನಿನ್ನನ್ನು ಯಾರೂ ದೂರಮಾಡುವುದಿಲ್ಲ. ಅದರಿಂದ ನೀನು ಅಶುಚಿಯೂ ಆಗುವುದಿಲ್ಲ. ನೀನು ಹೆದರಬೇಡ. ಅವು ಧನುಸ್ಸುಗಳೇ ಹೊರತು ಮೃತಶರೀರವಲ್ಲ. ಮತ್ಸ್ಯಪುತ್ರನಾಗಿ ಸತ್ಕುಲದಲ್ಲಿ ಹುಟ್ಟಿದ ನಿನ್ನಿಂದ ನಿಂದಿತವಾದ ಕಾರ್ಯವನ್ನು ನಾನು ಮಾಡಿಸುವೆನೇ?'' ಎಂದನು. ಈ ಮಾತನ್ನು ಕೇಳಿದಮೇಲೆ ಉತ್ತರನು ರಥದಿಂದ ಕೆಳಕ್ಕಿಳಿದು ಆ ಶಮೀವೃಕ್ಷವನ್ನೇರಿದನು. ಅರ್ಜುನನು ಅನ್ನೊಂದುವಿಧವಾಗಿ ಧೈರ್ಯವನ್ನು ಹೇಳಿದ್ದರೂ, ಉತ್ತರನು ಮನಸ್ಸಿಲ್ಲದೆ ನಿರ್ಬಂಧಕ್ಕಾಗಿ ಮೇಲೇರಬೇಕಾಯಿತು. ಇತ್ತಲಾಗಿ ರಥದಲ್ಲಿ ಕುಳಿತಿದ್ದ ಹಾಗೆಯೇ ಅರ್ಜುನನು ಉತ್ತರನನ್ನು ನೋಡಿ "ರಾಜಕುಮಾರಾ! ವಿಳಂಬ ಮಾಡಬೇಡ. ಆ ಮರದ ತುದಿಯಿಂದ ಧನುಸ್ಸುಗಳನ್ನು ಬೇಗನೆ ತೆಗೆದು ಕೊಡು'' ಎಂದನು. ಅದರಂತೆ ಉತ್ತರನು, ಮೇಲೆ ಮುಚ್ಚಿದ್ದ ಎಲೆಗಳನ್ನೆಲ್ಲಾ ಒತ್ತರಿಸಿ, ಅಲ್ಲಿ ಕಟ್ಟಿದ್ದ ಉತ್ತಮವಾದ ಆಯುಧಗಳ ಕಟ್ಟನ್ನು ಬಿಚ್ಚಿ ಮರದಿಂದ ಕೆಳಕ್ಕಿಳಿಸಿದನು. ತಿರುಗಿ ಅರ್ಜುನನು ಉತ್ತರನನ್ನು ಕುರಿತು "ರಾಜಕುಮಾರಾ! ಇದರಮೇಲೆ ಇನ್ನೂ ನಾಲ್ಕುಕಡೆಗಳಲ್ಲಿಯೂ ಸುತ್ತಿರುವ ಹೊದಿಕೆಗಳನ್ನೆಲ್ಲಾ ಪೂರ್ಣವಾಗಿ ತೆಗೆದುಬಿಡು. ವಿಳಂಬಮಾಡಬೇಡ'' ಎನಲು, ಉತ್ತರನು ಅದರಂತೆ ಮೇಲಿನ ಹೊದಿಕೆಗಳೆಲ್ಲವನ್ನೂ

ಲ್ಲುವು. ಇದೋ! ಇಲ್ಲಿ ಚಿನ್ನದ ಕಡ್ಡಿಗಳುಳ್ಳುದಾಗಿಯೂ, ಯಮದಂಡಕ್ಕೆ ಸಮಾನವಾಗಿಯೂ, ಇಂದ್ರನ ವಜ್ರಾಯುಧದಂತೆಯೂ, ಸಿಡಿಲಿನಂತೆಯೂ ಕಾಂತಿಯುಳ್ಳವುಗಳಾಗಿಯೂ ಇರುವ ಮಂಗಳಕರಗಳಾದ ಈ ಬಾಣಗಳು ಯಾವುವುಂಟೋ ಅವೆಲ್ಲವೂ ನಕುಲನ ಬಾಣಗಳು. ಎಲೈ ರಾಜಕುಮಾರಾ! ಇದೋ! ನೆಟ್ಟಗಿರುವ ಅಲಗುಗಳಿಂದ ಕೂಡಿ ಕಾಂತಿಯಿಂದ ಜ್ವಲಿಸುತ್ತಿರುವ ಈ ಬಾಣಗಳು ಯಾರದೆಂದು ನೀನು ಕೇಳಿದೆಯಲ್ಲವೇ? ಇದು ಸಹದೇವನವು. ಹರಿತವಾದ ಮೊನೆಯುಳ್ಳ ಈ ಬಾಣಗಳಿಗೆ ವರಾಹಕರ್ಣಗಳೆಂದು ಹೆಸರು. ಇದೋ! ಇಲ್ಲಿ ಹಸುವಿನ ಚರ್ಮದಿಂದ ಮಾಡಿದ ಚೀಲದಲ್ಲಿ ಇಡಲ್ಪಟ್ಟಿರುವ ಈ ದೀರ್ಘವಾದ ಬಾಣವು ಯಾವುದುಂಟೋ ಇದು ಅರ್ಜುನನ ಬಾಣವು. ಇದು ಮಹಾ ಭಯಂಕರವಾದುದು. ಎಂತಹ ಭಾರವನ್ನಾದರೂ ಸಹಿಸಬಲ್ಲುದು. ಇದೋ! ಇಲ್ಲಿ ಹುಲಿಯಚರ್ಮದಲ್ಲಿಡಲ್ಪಟ್ಟಿರುವ ಸ್ವಚ್ಛವಾದ ಈ ಖಡ್ಗವು ಧೀಮಂತನಾದ ಯುಧಿಷ್ಠಿರನದು. ಇದೋ! ಇತ್ತಲಾಗಿ ವ್ಯಾಘ್ರಚರ್ಮದ ಒರೆಯಲ್ಲಿಡಲ್ಪಟ್ಟು, ಐದು ಹುಲಿಯ ಚಿಹ್ನವುಳ್ಳ ಈ ಖಡ್ಗವು ಭೀಮನದು. ಇದರಿಂದ ಭೀಮನು ಕೊಬ್ಬಿದ ಎಷ್ಟೋ ಆನೆಗಳ ತಲೆಗಳನ್ನು ಭೇದಿಸಿರುವನು. ಇದೋ! ಇತ್ತಲಾಗಿ ಕರೀ ನೈದಿಲೆಯಂತೆ ಕಾಂತಿಯುಳ್ಳುದಾಗಿ, ಸಿಂಹದ ಚರ್ಮದಲ್ಲಿ ಮುಚ್ಚಿಡಲ್ಪಟ್ಟಿರುವ ಅತಿ ಸ್ವಚ್ಛವಾದ ಮತ್ತು ತೀಕ್ಷ್ಣಧಾರೆಯುಳ್ಳ ಈ ಖಡ್ಗವು ಅರ್ಜುನನದು. ಇದು ಎಷ್ಟು ಮನೋಹರವಾಗಿ, ಎಷ್ಟು ಹರಿತವಾದ ಮೊನೆಯುಳ್ಳುದಾಗಿದೆ ನೋಡು. ಇದು ಶತ್ರುಸೈನ್ಯಗಳನ್ನೆಲ್ಲ ನಿಮಿಷಮಾತ್ರದಲ್ಲಿ ಧ್ವಂಸಮಾಡಬಲ್ಲ ಶಕ್ತಿಯುಳ್ಳುದು. ಇದೋ! ಇತ್ತಲಾಗಿ ಜಿಂಕೆಯ ಚರ್ಮದಲ್ಲಿಡಲ್ಪಟ್ಟು, ಅಂದವಾದ ಹಿಡಿಯುಳ್ಳುದಾಗಿ, ಅಗ್ನಿಯಂತೆ ಜ್ವಲಿಸುತ್ತಿರುವ ಈ ಖಡ್ಗವಾವುದುಂಟೋ ಅದು ನಕುಲನದು. ಇದೋ! ಇಲ್ಲಿ ಪಿಂಗಳವರ್ಣವಾಗಿ, ರತ್ನದ ಹಿಡಿಗಳಿಂದ ವಿಚಿತ್ರವಾಗಿ ಕಾಣುವ ಈ ಖಡ್ಗವು ಸಹದೇವನದು. ಇದು ಎಷ್ಟೇ ಭಾರವನ್ನಾದರೂ ತಡೆಯಬಲ್ಲುದು. ಇದು ಬಹಳ ಮೇಲಾದ ಖಡ್ಗವೆನಿಸಿದುದರಿಂದ, ಚೆನ್ನಾಗಿ ಒರೆಯಲ್ಲಿ ಮುಚ್ಚಿಡಲ್ಪಟ್ಟಿರುವುದು. ಉತ್ತರಾ! ಇಲ್ಲಿ ನೋಡು. ಸಮಸ್ತ ಶತ್ರುಗಳನ್ನೂ ನಿಮಿಷಮಾತ್ರದಲ್ಲಿ ಧ್ವಂಸಮಾಡತಕ್ಕ ಈ ದೊಡ್ಡ ದಂಡಾ

ವರ್ಷ ಕಾಲವನ್ನು ನಾವು ಅಜ್ಞಾತವಾಸದಿಂದ ಕಳೆಯಬೇಕಾದುದರಿಂದ, ನಮ್ಮ ವೇಷವನ್ನು ಮರೆಸಿಕೊಂಡು ನಿಮ್ಮಲ್ಲಿರುತ್ತಿದ್ದೆವು. ಉತ್ತರಾ! ನೀನು ಮನಸ್ಸಿನಲ್ಲಿ ಶಂಕೆಯನ್ನು ಬಿಟ್ಟು ಸಾವಧಾನವಾಗಿ ಕೇಳು. ಎಲ್ಲ ವನ್ನೂ ತಿಳಿಸುವೆನು. ಆ ಐದುಮಂದಿ ಪಾಂಡವರಲ್ಲಿ ನಾನೇ ಅರ್ಜುನನು. ಕಂಕನೆಂದು ಹೆಸರಿಟ್ಟುಕೊಂಡಿರುವ ಆ ಸನ್ಯಾಸಿಯೇ ನಮ್ಮಣ್ಣನಾದ ಯುಧಿಷ್ಠಿರನು. ನಿನ್ನ ತಂದೆಗೆ ಅಡಿಗೆಮಾಡುತ್ತಿರುವ ವಲಲನೇ ಭೀಮ ಸೇನನು. ಕುದುರೆಗಳ ಲಾಯದಲ್ಲಿರುವವನೇ ನಕುಲನು. ಗೋಪಾಲಕ ರಿಗೆ ಯಜಮಾನನಾದವನು ನಮ್ಮೆಲ್ಲರಿಗೂ ಕಿರಿಯವನಾದ ಸಹದೇವನು. ನಿಮ್ಮ ಅಂತಃಪುರದಲ್ಲಿರುವ ಸೈರಂಧ್ರಿಯೆಂಬವಳೇ ದ್ರೌಪದಿ. ಅವಳ ದೆಸೆಯಿಂದಲೇ ನಿನ್ನ ಮಾವನಾದ ಕೀಚಕನು ಹತನಾದನು. ಕೀಚಕ ನನ್ನು ಅವನ ತಮ್ಮಂದಿರೊಡನೆ ಸೇರಿಸಿ ಕೊಂದವನು ನನ್ನ ಅಣ್ಣನಾದ ಭೀಮಸೇನನೇ!" ಎಂದನು. ಈ ಮಾತನ್ನು ಕೇಳಿದಾಗ ಉತ್ತರನ ಮನಸ್ಸಿ ನಲ್ಲಿ ಉಂಟಾದ ಆಶ್ಚರ್ಯವನ್ನು ಕೇಳಬೇಕೆ? ಅವನು ಬೆಜ್ಜರಬಿದ್ದು, ಎವೆಮುಚ್ಚದೆ ಸ್ವಲ್ಪಹೊತ್ತಿನವರೆಗೆ ಅರ್ಜುನನ ಮುಖವನ್ನು ನೋಡುತ್ತ ಸುಮ್ಮನೆ ನಿಂತುಬಿಟ್ಟನು. ಆಮೇಲೆ ಮೆಲ್ಲಗೆ ಚೇತರಿಸಿಕೊಂಡು ಕುಗ್ಗಿದ ಕಂಠದಿಂದ ಅರ್ಜುನನನ್ನು ಕುರಿತು ಹೀಗೆಂದು ಹೇಳುವನು. "ಓ ಬೃಹನ್ನಳೇ! ನನಗೆ ಇನ್ನೂ ನಿನ್ನ ಮಾತಿನಲ್ಲಿ ನಂಬಿಕೆಯಿಲ್ಲ. ನಾನು ಕಥೆಗಳಲ್ಲಿ ಅರ್ಜುನನಿಗೆ ಬೇರೆಬೇರೆ ಹತ್ತು ಹೆಸರುಂಟೆಂದು ಕೇಳಿದ್ದೆನು. ನೀನು ಈಗ ಹೇಳಿದುದರಲ್ಲಿ ನನಗೆ ನಂಬಿಕೆ ಹುಟ್ಟಬೇಕಾದರೆ, ಆ ದಶ ನಾಮಗಳನ್ನು ತಿಳಿಸು" ಎಂದನು. ಅದಕ್ಕಾ ಅರ್ಜುನನು "ಉತ್ತರಾ! ಹಾಗಿದ್ದರೆ ಕೇಳು! ನೀನು ಹಿಂದೆ ನನ್ನ ವಿಷಯವಾಗಿ ಕೇಳಿದ ನನ್ನ ದಶನಾಮಗಳನ್ನೇ ತಿಳಿಸುವೆನು. ಸ್ವರ್ಗಾಧಿಪತಿಯಾದ ಇಂದ್ರನು ಸ್ವರ್ಗ ದಲ್ಲಿ ನನಗೆ:—

**"ಅರ್ಜುನಃ ಫಲ್ಗುನಃಪಾರ್ಥಃ ಕಿರೀಟೀ ಶ್ವೇತವಾಹನಃ**
**ಭೀಭತ್ಸುರ್ವಿಜಯೋಜಿಷ್ಣುಸ್ಸವ್ಯಸಾಚೀ ಧನಂಜಯಃ"**

(ಅರ್ಜುನ, ಫಲ್ಗುನ, ಪಾರ್ಥ, ಕಿರೀಟಿ, ಶ್ವೇತವಾಹನ, ಭೀಭತ್ಸು, ವಿಜಯ, ಜಿಷ್ಣು, ಸವ್ಯಸಾಚಿ, ಧನಂಜಯರೆಂದು) ಈ ಹತ್ತು ಹೆಸ

ರುಗಳನ್ನು ಕೊಟ್ಟನು. ದೇವಶ್ರೇಷ್ಠರೆಲ್ಲರೂ ನನಗೆ ಆ ಹೆಸರುಗಳನ್ನೇ ಸ್ಥಿರಗೊಳಿಸಿದರು" ಎಂದನು. ಆಗ ಉತ್ತರನು "ಓ ಅನಘಾ! ನೀನು ಈಗ ಹೇಳಿದ ದಶನಾಮಗಳೂ ನಿನಗೆ ಅನ್ವರ್ಥವಾಗಿ, ನಿನ್ನ ಗುಣಗಳಿಂದಲೇ ಬಂದುವಷ್ಟೆ? ಲೋಕಪ್ರಖ್ಯಾತಗಳಾದ ಈ ಹೆಸರುಗಳನ್ನೇ ನಾನೂ ಕೇಳಿದ್ದೆನು. ನಿನಗೆ ವಿಜಯನೆಂಬ ಹೆಸರು ಹೇಗೆ ಬಂದಿತು? ಶ್ವೇತವಾಹನನೆಂಬ ಹೆಸರು ಬರಲು ಕಾರಣವೇನು? ಸವ್ಯಸಾಚಿಯೆಂದೂ, ಜಿಷ್ಣುವೆಂದೂ, ಭೀಭತ್ಸುವೆಂದೂ ನಿನಗೆ ಹೆಸರಿಟ್ಟ ಕಾರಣಗಳಾವುವು? ಓ! ಸಾರಥೀ! ಅರ್ಜುನನೆಂದೂ, ಫಲ್ಗುನನೆಂದೂ, ಪಾರ್ಥನೆಂದೂ, ಕಿರೀಟಿಯೆಂದೂ ನಿನಗೆ ಹೇಗೆ ಹೆಸರುಗಳಾದುವು? ಈ ಹೆಸರುಗಳೆಲ್ಲ ಅರ್ಜುನನಿಗೆ ಬರುವುದಕ್ಕೆ ಕಾರಣಗಳೇನೋ ಉಂಟೆಂಬುದನ್ನು ಮಾತ್ರ ನಾನು ಕೇಳಿದ್ದೆನು. ಅವರ ವಿವರವನ್ನು ತಿಳಿಯದೆ ನನ್ನ ಮನಸ್ಸು ಸಂದೇಹದಿಂದ ಅತ್ತಿತ್ತ ಕಳವಳಿಸುತ್ತಿರುವುದು. ಅಲ್ಲದೆ, ನಿನ್ನ ವಿಷಯದಲ್ಲಿಯೂ ನನಗೆ ನಿಶ್ಚಯವಾದ ಸ್ಥಿರಬುದ್ಧಿಯಿಲ್ಲದೆ, ನೀನು ಅರ್ಜುನನೋ ಅಲ್ಲವೋ ಎಂದು ಸಂಶಯಗ್ರಸ್ತವಾಗಿದೆ. ಆದುದರಿಂದ, ಬೃಹನ್ನಳೇ! ಬೇಗನೆ ಆ ವಿವರವನ್ನು ತಿಳಿಸು" ಎಂದನು. ಅದಕ್ಕಾ ಅರ್ಜುನನು "ಓ ರಾಜಕುಮಾರಾ! ಹಾಗಿದ್ದರೆ ಕೇಳು. ನಾನು ಅನೇಕದೇಶಗಳನ್ನು ಜಯಿಸಿ, ಅಲ್ಲಲ್ಲಿಂದ ಅಪರಿಮಿತವಾದ ಧನವನ್ನು ಸೇರಿಸಿತಂದು, ಆ ಧನರಾಶಿಯ ಮಧ್ಯದಲ್ಲಿ ಇದ್ದುದನ್ನು ನೋಡಿ ನನಗೆ ಧನಂಜಯನೆಂದು ಹೆಸರಿಟ್ಟರು. ನಾನು ಯಾವಾಗ ಯುದ್ಧಕ್ಕೆ ಹೋದರೂ, ಯುದ್ಧದಿಂದ ಶತ್ರುಗಳನ್ನು ಜಯಿಸದೆ ಹಿಂತಿರುಗುವವನಲ್ಲ. ಹೀಗೆ ಯಾವಾಗಲೂ ಶತ್ರುಜಯವನ್ನು ಮಾಡಿಕೊಂಡೇ ಬರುತ್ತಿದ್ದ ನನ್ನನ್ನು ವಿಜಯನೆಂದು ಹೇಳುವರು. ನಾನು ಶತ್ರುಗಳೊಡನೆ ಯುದ್ಧಕ್ಕಾಗಿ ಹೋಗುವಾಗ, ಸುವರ್ಣಾಲಂಕೃತಗಳಾದ ನಾಲ್ಕು ಬಿಳಿಯ ಕುದುರೆಗಳಿಂದ ಹೂಡಿದ ರಥದಲ್ಲಿ ಕುಳಿತು ಹೋಗುವುದನ್ನು ನೋಡಿ ನನ್ನನ್ನು ಶ್ವೇತವಾಹನನೆನ್ನುವರು. ನನ್ನ ತಲೆಯಮೇಲೆ ಸೂರ್ಯಸಮಾನವಾದ ಕಿರೀಟವು ಶೋಭಿಸುತ್ತಿರುವುದು. ಯುದ್ಧಕಾಲದಲ್ಲಿ ಈ ಕಿರೀಟವನ್ನು ಧರಿಸಿ ರಥದಮೇಲೆ ಕುಳಿತುಕೊಳ್ಳುವೆನು. ಸೂರ್ಯಾಗ್ನಿಗಳಿಗೆ ಸಮಾನ ಕಾಂತಿಯುಳ್ಳುದಾಗಿಯೂ,

ಚರನ್ನೂ, ನಾಗರನ್ನೂ, ರಾಕ್ಷಸರನ್ನೂ ಜಯಿಸಿ ಅಗ್ನಿಯನ್ನು ತೃಪ್ತಿಗೊಳಿಸಿದೆನು. ನಾನು ಆ ಸಂದರ್ಭದಲ್ಲಿ ದೇವರಾಜನಾದ ಇಂದ್ರನೊಡನೆ ಯುದ್ಧಮಾಡುವಾಗ, ಒಮ್ಮೆ ಮೂರ್ಛಿತನಾಗಿ ಬಿದ್ದು ಬಿಟ್ಟೆನು. ಆಗ ದೇವಶ್ರೇಷ್ಠರೆನಿಸಿದ ಬ್ರಹ್ಮಮಹೇಶ್ವರರಿಬ್ಬರೂ ಬಂದು ಮೂರ್ಛಿತನಾಗಿ, ನೆಲದ ಮೇಲೆ ಬಿದ್ದಿದ್ದ ನನ್ನನ್ನು ನೋಡಿ ವರವನ್ನು ಕೊಟ್ಟು ಅನುಗ್ರಹಿಸಲು ನಾನು ಒಡನೆಯೇ ಮೂರ್ಛೆತಿಳಿದೆದ್ದೆನು. ನಾನು ಅವರಿಗೆ ತಲೆಬಗ್ಗಿ ನಮಸ್ಕರಿಸುತ್ತಾ ನಿಂತಿದ್ದಾಗ, ಅವರಿಬ್ಬರೂ ಪ್ರೀತಿಯಿಂದ ನನಗೆ ಕೃಷ್ಣನೆಂಬ ಹನ್ನೊಂದನೆಯ ಹೆಸರನ್ನಿಟ್ಟರು. ಅಲ್ಲದೆ, ನನ್ನ ಪರಾಕ್ರಮಕ್ಕೂ, ನನ್ನ ಕಾರ್ಯಗಳಿಗೂ ಅವರಿಬ್ಬರೂ ಸಂತುಷ್ಟರಾಗಿ ಸಮಸ್ತ ದೇವತೆಗಳ ನಡುವೆ ನನ್ನನ್ನು ಕುರಿತು, 'ಅಪ್ಪಾ, ಪಾರ್ಥಾ! ನಿನಗೆ ಇಷ್ಟವಾದ ವರವನ್ನು ಕೇಳು' ಎಂದು ತಾವಾಗಿ ಹೇಳಿದರು. ಆಗ ನಾನು ಅವರಿಂದ ಅನೇಕ ದಿವ್ಯಾಸ್ತ್ರಗಳನ್ನು ಪಡೆದುಕೊಂಡೆನು. ಆಗಲೇ ನನಗೆ ಬ್ರಹ್ಮಾಸ್ತ್ರ, ಪಾಶುಪತಾಸ್ತ್ರ, ಸ್ಥೂಣಾಕರ್ಣ, ಐಂದ್ರ, ವಾರುಣ, ವಾಯವ್ಯ, ಆಗ್ನೇಯ, ವೈಷ್ಣವವೇ ಮೊದಲಾದ ಅನೇಕಾಸ್ತ್ರಗಳು ಲಭಿಸಿದುವು. ಆಮೇಲೆ ನಾನು ಇಂದ್ರನ ರಥವನ್ನೇರಿ, ಇಂದ್ರಸಾರಥಿಯಾದ ಮಾತಲಿಯನ್ನೇ ನನ್ನ ಸಾರಥಿಯನ್ನಾಗಿ ಮಾಡಿಕೊಂಡು, ಬೇರೆ ಯಾರಿಗೂ ದುರ್ಜಯರಾದ ನಿವಾತಕವಚರೆಂಬ ರಾಕ್ಷಸರನ್ನೂ ಕೊಂದೆನು. ಓ ಉತ್ತರಕುಮಾರಾ! ಆ ರಾಕ್ಷಸರು ಸಾಮಾನ್ಯರೆಂದು ತಿಳಿಯಬೇಡ. ಅವರು ಯಾರಿಗೂ ಅಭೇದ್ಯವಾದ ಯುದ್ಧಕವಚವನ್ನು ಧರಿಸಿದವರು. ಅನೇಕ ವರಗಳನ್ನು ಪಡೆದು ಕೊಬ್ಬಿದವರು. ಅವರು ಯುದ್ಧಕ್ಕೆ ಬಂದಮೇಲೆ ಹಿಂತಿರುಗತಕ್ಕವರಲ್ಲ. ಅಂತಹ ಮೂರುಕೋಟಿ ರಾಕ್ಷಸರನ್ನು ನಾನೊಬ್ಬನೇ ಯುದ್ಧದಲ್ಲಿ ಜಯಿಸಿ, ದೇವತೆಗಳನ್ನು ಸಂತೋಷಗೊಳಿಸಿದೆನು. ಆಗ ಪೂಜ್ಯನಾದ ದೇವೇಂದ್ರನು ನನಗೆ ತನ್ನ ಕೈಯಿಂದಲೇ ಒಂದು ಕಿರೀಟವನ್ನು ತಂದಿಟ್ಟನು. ಆಗ ನನಗೆ ದೇವತೆಗಳು ಶತ್ರುಸೈನ್ಯಭೇದಕವಾದ ಒಂದು ಶಂಖವನ್ನು ಕೊಟ್ಟರು. ಮತ್ತು ಓ ರಾಜಪುತ್ರಾ! ಸಮುದ್ರದ ಕೊನೆಯಲ್ಲಿರುವ ಹಿರಣ್ಯಪುರವೆಂಬ ನಗರದಲ್ಲಿ ವಾಸಮಾಡುತ್ತಿದ್ದ ಅರುವತ್ತು ಸಾವಿರ ದಾನವರನ್ನು ಕೊಂದು ಯುದ್ಧದಲ್ಲಿ ಜಯವನ್ನು ಪಡೆದೆನು. ನಾನು ರಣ

ಆ ವ್ರತವನ್ನು ಪೂರ್ಣವಾಗಿ ಅನುಷ್ಠಿಸಿ ಮುಗಿಸಿದುದಾಯಿತು. ಈಗ ನಾನು ಆ ವ್ರತಾನುಷ್ಠಾನದಿಂದ ಕೃತಕೃತ್ಯನಾಗಿರುವೆನೆಂದು ತಿಳಿ" ಎಂದನು. ಅದಕ್ಕಾ ಉತ್ತರನು, "ಓ ಮಹಾಬಾಹೂ! ಈಗ ನಾನು ಅನುಗ್ರಹೀತನಾದೆನು. ನನ್ನ ಊಹೆಯು ಈಗ ಸಾರ್ಥಕವಾಯಿತು. ನಿನ್ನಂತಹ ಪುರುಷಶ್ರೇಷ್ಠರಿಗೆ ಈ ವಿಧವಾದ ನಪುಂಸಕತ್ವವು ಹೇಗೆತಾನೇ ಉಂಟಾದೀತು? ಇನ್ನು ನಾನು ಯುದ್ಧದಲ್ಲಿ ದೇವತೆಗಳೊಡನೆಯಾದರೂ ಹೋರಾಡಬಲ್ಲೆನು. ನಿನ್ನಿಂದ ನನಗೆ ಪೂರ್ಣಸಹಾಯವು ದೊರೆತು, ಈಗ ನನ್ನ ಭಯವು ಎಲ್ಲಿಯೋ ಹೋಯಿತು. ಮುಂದೇನುಮಾಡಬೇಕೆಂಬುದನ್ನು ಆಜ್ಞಾಪಿಸು. ನಾನೇ ನಿನಗೆ ಕುದುರೆಗಳನ್ನು ನಡೆಸುವೆನು. ನಾನೂ ಸಾರಥ್ಯಕಾರ್ಯದಲ್ಲಿ ಶಿಕ್ಷೆಯನ್ನು ಹೊಂದಿದವನೇ! ಕೃಷ್ಣನಿಗೆ ದಾರುಕನೂ ಇಂದ್ರನಿಗೆ ಮಾತಲಿಯೂ ಹೇಗೋ ಹಾಗೆ, ಸಾರಥ್ಯದಲ್ಲಿ ನಾನು ಸುಶಿಕ್ಷಿತನೆಂದು ತಿಳಿ. ಇದೋ! ರಥಕ್ಕೆ ಕಟ್ಟಿರುವ ಈ ಉತ್ತಮಾಶ್ವಗಳು ಯುದ್ಧದಲ್ಲಿ ದುರ್ಜಯಗಳು. ಮಹಾಬಲವುಳ್ಳುವು. ಎಂತಹ ಕಷ್ಟವನ್ನಾದರೂ ಸಹಿಸಬಲ್ಲುವು. ಇಂತಹ ಕುದುರೆಗಳು ನಿನ್ನಂತವನಿಗೇ ಯೋಗ್ಯವಾದವುಗಳು. ಈ ಕುದುರೆಗಳಲ್ಲಿ ಬಲಗಡೆಗೆ ಕಟ್ಟಿರುವ ಈ ಅಶ್ವರತ್ನವು ಸುಗ್ರೀವವೆಂಬ ಲೋಕಪ್ರಸಿದ್ಧವಾದ ಕುದುರೆಗೆ ಸಮಾನವಾದುದು. ಇದು ಓಡುವಾಗ ನೆಲದಮೇಲೆ ಕಾಲಿಡುವುದನ್ನೇ ಯಾರೂ ಅರಿಯಲಾರರು. ಇದೋ! ಎಡಗಡೆಗೆ ಕಟ್ಟಿರುವ ಈ ಮಂಗಳಕರವಾದ ಕುದುರೆಯು, ವೇಗದಲ್ಲಿ ಮೇಘಪುಷ್ಪವೆಂಬ ಪ್ರಸಿದ್ಧಾಶ್ವಕ್ಕೆ ಸಮಾನವಾದುದು. ಈ ಎರಡು ಕುದುರೆಗಳಿಗೆ ಹಿಂದಿರುವ ಕುದುರೆಗಳಲ್ಲಿ ಬಲಭಾಗದ ಕುದುರೆಯು ಬಲಾಹಕವೆಂಬ ಕುದುರೆಗಿಂತಲೂ ತೇಜಸ್ಸಿನಲ್ಲಿಯೂ, ವೀರ್ಯದಲ್ಲಿಯೂ ಮೇಲೆನಿಸಿದೆ. ಅದರೊಡನೆ ಈ ಎಡಪಕ್ಕದಲ್ಲಿರುವ ನಾಲ್ಕನೆಯ ಕುದುರೆಯು, ವೇಗದಲ್ಲಿ ಶೈಬ್ಯವೆಂಬ ಕುದುರೆಗೆ ಸಮಾನವೆನಿಸಿರುವುದು. ಆದುದರಿಂದ, ಓ ಕಿರೀಟೀ! ಈ ಮಹಾರಥವೂ, ಈ ಕುದುರೆಗಳೂ ನಿನಗೇ ಯೋಗ್ಯವಾದವು. ಇಂತಹ ರಥವನ್ನೇರಿ ಯುದ್ಧಮಾಡುವುದಕ್ಕೂ ನೀನೊಬ್ಬನೇ ಯೋಗ್ಯನೆಂದು ನಾನು ಭಾವಿಸುವೆನು. ಅರ್ಜುನಾ! ಇನ್ನು ನೀನು ಈ

ರಥವನ್ನೇರಿ, ದೈತ್ಯರನ್ನು ದೇವರಾಜನು ಹೇಗೋಹಾಗೆ ಸಮಸ್ತ ಶತ್ರು ಗಳನ್ನಿದಿರಿಸಿ ಯುದ್ಧಮಾಡು'' ಎಂದನು.

ಎಲೈ ಜನಮೇಜಯರಾಜನೇ ಕೇಳು! ಒಡನೆಯೇ ಅರ್ಜುನನು ರಥ ದಿಂದ ಕೆಳಗಿಳಿದು, ದೇವತೆಗಳನ್ನು ಧ್ಯಾನಿಸಿ ಕೈಮುಗಿದು, ತನ್ನ ಗಾಂಡೀವ ಧನುಸ್ಸನ್ನು ಕೈಗೆ ತೆಗೆದುಕೊಂಡನು. ಆಮೇಲೆ ತಾನು ತೋಳುಗಳಲ್ಲಿ ತೊಟ್ಟಿದ್ದ ಶಂಖದ ಬಳೆಗಳನ್ನು ಕಳಚಿ ಬಿಸಾಡಿದನು. ದುಂದುಭಿ ಧ್ವನಿಯಂತೆ ಧ್ವನಿಯುಳ್ಳ ತನ್ನ ಕೈಗಳೆರಡಕ್ಕೂ ಕೈಚೀಲಗಳನ್ನಿಟ್ಟು ಕೊಂಡನು. ತನಗೆ ಇಂದ್ರನಿಂದ ಕೊಡಲ್ಪಟ್ಟಿದ್ದ ದಿವ್ಯಕುಂಡಲಗಳೆರ ಡನ್ನೂ ತೊಟ್ಟುಕೊಂಡನು. ಮೃದುವಾಗಿಯೂ, ನುಣುಪಾಗಿಯೂ ಇದ್ದ ತನ್ನ ತಲೆಕೂದಲುಗಳನ್ನು ಒಂದು ಬಿಳಿಯ ಬಟ್ಟೆಯಿಂದ ಮೇಲಕ್ಕೆತ್ತಿ ಕಟ್ಟಿದನು. ಆಮೇಲೆ ಪೂರ್ವಾಭಿಮುಖವಾಗಿ ನಿಂತು, ಶುಚಿಯಾಗಿ, ಸ್ಥಿರ ಮನಸ್ಸಿನಿಂದ ಎಲ್ಲಾ ಅಸ್ತ್ರದೇವತೆಗಳನ್ನೂ ಧ್ಯಾನಿಸಿದನು. ಒಡನೆಯೇ ಆ ಅಸ್ತ್ರಗಳೆಲ್ಲವೂ ನಿಜಾಕಾರದಿಂದ ಕಾಣಿಸಿಕೊಂಡು, ಕೈಮುಗಿದು ನಿಂತು ಅರ್ಜುನನನ್ನು ಕುರಿತು 'ಓ ಇಂದ್ರಪುತ್ರಾ! ಇದೋ! ನಾವು ನಿನ್ನ ಕಿಂಕರ ರಾಗಿರುವೆವು' ಎಂದು ಹೇಳಲು, ಅರ್ಜುನನು ತನ್ನ ಆ ಅಸ್ತ್ರದೇವತೆಗ ಳನ್ನು ನಮಸ್ಕರಿಸಿ, ಕೈಯಿಂದ ಸ್ಪರ್ಶಿಸಿ 'ಓ ಮಹಾಸ್ತ್ರಗಳೇ! ಇನ್ನು ನೀವೆಲ್ಲರೂ ಈ ಯುದ್ಧಕಾಲದಲ್ಲಿ ನನ್ನ ಮನಸ್ಸಿನಲ್ಲಿ ನೆಲೆಯಾಗಿರಿ' ಎಂದನು. ಆಮೇಲೆ ಅರ್ಜುನನು ಮಹೋತ್ಸಾಹದಿಂದ ಅಸ್ತ್ರಗಳನ್ನು ಕೈಗೆ ತೆಗೆದುಕೊಂಡನು. ತನ್ನ ಗಾಂಡೀವವೆಂಬ ಧನುಸ್ಸನ್ನು ನಾಣೇರಿಸಿ, ಒಂದಾವರ್ತಿ ಅದರ ನಾಣನ್ನು ತಟ್ಟಿದನು. ಆ ನಾಣನ್ನು ತಟ್ಟಿದ ಧ್ವನಿ ಯು ಬೆಟ್ಟದಿಂದ ಬೆಟ್ಟವನ್ನು ಹೊಡೆಯುವುದರಿಂದುಂಟಾದ ಶಬ್ದದಂತೆ ಕೇಳಿಸಿತು. ಭೂಮಿಯಮೇಲೆ ಸಿಡಿಲು ಬಡಿದಂತಾಯಿತು. ನಾನಾದಿಕ್ಕು ಗಳಲ್ಲಿಯೂ ಬಿರುಗಾಳಿಯು ಬೀಸಿದಂತಾಯಿತು. ಆಕಾಶದ ಪಕ್ಷಿಗಳೆ ಲ್ಲವೂ ದಿಗ್ಭ್ರಮೆಹಿಡಿದಂತೆ ತತ್ತಳಿಸುತ್ತಿದ್ದುವು. ದೊಡ್ಡ ಮರಗಳೆ ಲ್ಲವೂ ನಡುಗಿಹೋದುವು. ಸಿಡಿಲಿಗೂ, ಗರುಡಗರ್ಜನೆಗೂ ಸಮಾನ ವಾದ ಈ ಮಹಾಧ್ವನಿಯನ್ನು ಕೇಳಿ ಕೌರವರೆಲ್ಲರೂ ಭಯದಿಂದ ನಡುಗಿ

ರೊಡನೆ ಯುದ್ಧಮಾಡಲಾರೆನೆ? ಉತ್ತರಾ! ನಿನ್ನ ಮನಸ್ಸಿನ ಕಳವಳ ವನ್ನು ಬಿಟ್ಟುಬಿಡು! ಬೇಗನೆ ರಥವನ್ನು ಹೊರಡಿಸು" ಎಂದನು.

ಇದು ನಾಲ್ವತ್ತುನಾಲ್ಕನೆಯ ಅಧ್ಯಾಯವು.

ಅರ್ಜುನನು ಯುದ್ಧಪ್ರಯಾಣಕಾಲದಲ್ಲಿ ಉತ್ತರನ ಸಿಂಹ ಧ್ವಜವನ್ನು ರಥದಿಂದಿಳಿಸಿ, ತನ್ನ ವಾನರಧ್ವಜವನ್ನೇರಿ ಸಿದುದು. ತನ್ನ ಶಂಖಧ್ವನಿಗೆ ಭಯಪಟ್ಟು ಮೂರ್ಛಿತನಾದ ಉತ್ತರನಿಗೆ ಧೈರ್ಯ ಹೇಳಿ ಮುಂದೆ ಹೊರಟುದು.

ಓ ಜನಮೇಜಯರಾಜಾ! ಕೇಳು. ಅರ್ಜುನನು ಉತ್ತರನನ್ನು ಸಾರಥಿಯನ್ನಾಗಿ ಮಾಡಿಕೊಂಡು, ಬನ್ನೀಮರವನ್ನು ಒಂದಾವರ್ತಿ ಪ್ರದಕ್ಷಿಣೆಮಾಡಿ, ಅಲ್ಲಿದ್ದ ಆಯುಧಗಳೆಲ್ಲವನ್ನೂ ತೆಗೆದುಕೊಂಡನು. ಉತ್ತರನ ಸಿಂಹಧ್ವಜವನ್ನೂ, ತನ್ನ ಸಹೋದರರ ಆಯುಧಗಳನ್ನೂ ಆ ಬನ್ನಿಯಮರದಲ್ಲಿ ನಡುವೆ ಇಡಿಸಿದನು. ಆಮೇಲೆ ಸುವರ್ಣಮಯವಾದ ಬಾಲವುಳ್ಳ ವಾನರಾಕೃತಿಯಿಂದ ಕೂಡಿ, ವಿಶ್ವಕರ್ಮನಿರ್ಮಿತವಾಗಿ, ಮಾಯಾಮಯವೆನಿಸಿದ ದಿವ್ಯವಾದ ತನ್ನ ಧ್ವಜವನ್ನೂ, ಅಗ್ನಿಯು ಹಿಂದೆ ತನ್ನಲ್ಲಿ ತೋರಿಸಿದ ಅನುಗ್ರಹವನ್ನೂ ಮನಸ್ಸಿನಲ್ಲಿ ಧ್ಯಾನಿಸಿಕೊಂಡನು. ಒಡನೆಯೇ ಅಗ್ನಿಯು ಅರ್ಜುನನ ಮನೋಭೀಷ್ಟವನ್ನು ತಿಳಿದು (ರಕ್ಷಕಗಳಾದ) ಕೆಲವುಭೂತಗಳನ್ನು ಆ ಧ್ವಜದಲ್ಲಿ ನೆಲೆಗೊಳಿಸಿದನು. ಆಮೇಲೆ ಅರ್ಜುನನು ತನ್ನ ವಾನರಧ್ವಜವನ್ನು ನಾಟಿ, ಒಂದಾವರ್ತಿ ತನ್ನ ಗಾಂಡೀವ ಧನುಸ್ಸಿನ ನಾಣನ್ನು ತಟ್ಟಿ ಶಬ್ದಮಾಡಿದನು. ಒಡನೆಯೇ ವಿಚಿತ್ರಾಕಾರವುಳ್ಳದೂ, ಮಹಾಬಲವುಳ್ಳದೂ, ಮನೋಹರವಾದ ದಿವ್ಯರೂಪವುಳ್ಳದೂ ಆದ ಒಂದು ವಾನರವು ಪತಾಕೆಯೊಡನೆಯೂ, ಬತ್ತಳಿಕೆಯೊಡನೆಯೂ ಆಕಾಶದಿಂದ ರಥಕ್ಕೆ ಹಾರಿ ಕುಳಿತಿತು. ಆಮೇಲೆ ಅರ್ಜುನನು ಯುದ್ಧಸನ್ನಾಹದೊಡನೆ ರಥದಲ್ಲಿ ಕುಳಿತು ಕೈಚೀಲಗಳನ್ನೂ, ಬಿಲ್ಲುಬಾಣಗಳನ್ನೂ ಧರಿಸಿ ಉತ್ತರದಿಕ್ಕಿಗಿದಿರಾಗಿ ಹೊರಟನು. ಸ್ವಲ್ಪದೂರದವರೆಗೆ ಮುಂದೆ

ಹೋಗಿ ಕೌರವಸೈನ್ಯವನ್ನು ಸಮೀಪಿಸಿದೊಡನೆ, ದೇವದತ್ತವೆಂಬ ಮಹಾಧ್ವನಿಯುಳ್ಳ ತನ್ನ ದಿವ್ಯಶಂಖವನ್ನು ಬಾಯಲ್ಲಿಟ್ಟು ಊದಿದನು. ಚಂದ್ರನಂತೆಯೂ, ಮೊಲ್ಲೆಯ ಹೂವಿನಂತೆಯೂ ಶುದ್ಧಶ್ವೇತವರ್ಣವಾಗಿದ್ದ ಶಂಖವನ್ನು ಬಾಯಲ್ಲಿಟ್ಟು, ಕೌರವಸೈನ್ಯವೆಲ್ಲವೂ ಭಯಪಡುವಂತೆ ಮಹಾಧ್ವನಿಯನ್ನು ಹುಟ್ಟಿಸುವ ಪ್ರಯತ್ನದಿಂದ ಊದುವಾಗ, ಗಾಳಿಯಿಂದ ತುಂಬಿ ಉಬ್ಬಿದ ಅವನ ಕೆನ್ನೆಗಳೂ, ಕಂಠದಲ್ಲಿ ಮೇಲಕ್ಕೆದ್ದ ನರಗಳೂ, ಕಮಲದಂತೆ ಕೆಂಪೇರಿದ ಕಣ್ಣುಗಳೂ, ಕುಗ್ಗಿ ಉಬ್ಬಿದ ಗಂಟಲೂ, ನರಗಳೆದ್ದ ಹಣೆಯೂ, ಒಳಕ್ಕೆಳೆಯಲ್ಪಟ್ಟ ಎದೆ ಮತ್ತು ಕಿಬ್ಬೊಟ್ಟೆಗಳೂ ಅವನ ಆಕೃತಿಗೆ ಒಂದು ಅಪೂರ್ವಶೋಭೆಯನ್ನುಂಟುಮಾಡಿದುವು.

ತ್ರೈಲೋಕ್ಯವೂ ನಡುಗುವಂತೆ ತನ್ನ ಸರ್ವಪ್ರಯತ್ನದಿಂದ ಹತ್ತು ಬಗೆಯ ಪ್ರಾಣಾದಿವಾಯುಗಳನ್ನೂ ತುಂಬಿ ಆ ಶಂಖವನ್ನೂದಿದಾಗ, ಅದು ಮೇಘಧ್ವನಿಯಂತೆ ನಾನಾಕಡೆಗೂ ವ್ಯಾಪಿಸಿತು. ಹೀಗೆ ಆ ಅರ್ಜುನನ ಶಂಖಧ್ವನಿಯೂ, ಧನುಷ್ಟಂಕಾರಧ್ವನಿಯೂ, ಧ್ವಜದಲ್ಲಿದ್ದ ವಾನರನ ಸಿಂಹನಾದವೂ, ರಥನೇಮಿ ಧ್ವನಿಯೂ ಒಂದಾಗಿ ಸೇರಿ, ಪ್ರಪಂಚವನ್ನೇ ನಡುಗಿಸುವಂತಾಯಿತು. ಅರ್ಜುನನ ಈ ಶಂಖಧ್ವನಿಗೆ ಭಯಪಟ್ಟು ರಥದ ಕುದುರೆಗಳು ಮುಗ್ಗುರಿಸಿದುವು. ಉತ್ತರನೂಕೂಡ ಭಯಪಟ್ಟು ರಥದಲ್ಲಿ ನಿಶ್ಚೇಷ್ಟನಾಗಿ ಕುಳಿತುಬಿಟ್ಟನು. ಆಗ ಅರ್ಜುನು ತಾನೇ ಕುದುರೆಗಳ ಹಗ್ಗವನ್ನು ಹಿಡಿದೆಳೆದು, ಅವುಗಳನ್ನು ಸರಿಯಾಗಿ ನಿಲ್ಲಿಸಿಟ್ಟನು. ಆಗ ಆ ರಥಮಧ್ಯದಲ್ಲಿ ಅರ್ಜುನನು ಮೇರುವಿನ ಉತ್ತರಭಾಗದಲ್ಲಿ ಸೂರ್ಯನು ಹೇಗೋ ಹಾಗೆ ಪ್ರಕಾಶಿಸುತ್ತಿದ್ದನು. ತನ್ನ ಶಂಖಧ್ವನಿಗೂ, ಧನುಷ್ಟಂಕಾರಧ್ವನಿಗೂ ಹೆದರಿ ಪ್ರಜ್ಞೆಯಿಲ್ಲದವನಂತೆ ನಿಶ್ಚೇಷ್ಟನಾಗಿದ್ದ ಉತ್ತರನನ್ನು ನೋಡಿ ಅರ್ಜುನನು ಅವನ ಬೆನ್ನನ್ನು ತಟ್ಟಿ, ಅವನನ್ನಪ್ಪಿಕೊಂಡು ಸಮಾಧಾನಪೂರ್ವಕವಾಗಿ “ಓ ರಾಜಕುಮಾರಾ! ಹೆದರಬಾರದು. ನೀನು ಕ್ಷತ್ರಿಯನಲ್ಲವೇ? ಪುರುಷಶ್ರೇಷ್ಠನೆನಿಸಿಕೊಂಡ ನೀನು ಶತ್ರುಗಳ ನಡುವೆ ಹೀಗೆ ಭಯಪಡುವುದೆಂದರೇನು? ನೀನು ಎಷ್ಟೋ ಕಡೆಯಲ್ಲಿ ಶಂಖಶಬ್ದಗಳನ್ನೂ, ಭೇರೀಧ್ವನಿಗಳನ್ನೂ, ಸೇನಾವ್ಯೂಹಗಳಿಂದ

ಹೊರಡುವ ಆನೆಗಳ ಕೂಗನ್ನೂ ನಿತ್ಯವೂ ಕೇಳಿದವನಲ್ಲವೇ? ಈಗ ಈ ಶಂಖಧ್ವನಿಯನ್ನು ಕೇಳಿ ಕೇವಲ ಪ್ರಾಕೃತ ಮನುಷ್ಯನಂತೆ ಭಯಪಡುವುದೆಂದರೇನು?'' ಎಂದನು. ಅದಕ್ಕಾ ಉತ್ತರನು, "ಓ ಅರ್ಜುನಾ! ನಾನು ಸೇನಾವ್ಯೂಹಗಳಲ್ಲಿ ಆಗಾಗ ಎಷ್ಟೋ ತರದ ಶಂಖಧ್ವನಿಗಳನ್ನೂ, ಭೇರೀಧ್ವನಿಗಳನ್ನೂ, ಆನೆಗಳ ಗರ್ಜನೆಗಳನ್ನೂ ಎಷ್ಟೋ ಸಾರಿ ಕೇಳಿದುದುಂಟು, ಆದರೆ, ಇಂತಹ ಶಂಖಧ್ವನಿಯನ್ನು ನಾನು ಹಿಂದೆ ಕೇಳಿದವನಲ್ಲ. ಇಂತಹ ಧನುಸ್ಸಿನ ಘೋಷವನ್ನೂ ನಾನು ಯಾವಾಗಲೂ ಕೇಳಿಲ್ಲ. ಎಲೈ ಪುರುಷಶ್ರೇಷ್ಠನೇ! ಈ ನಿನ್ನ ಶಂಖಧ್ವನಿಯೂ, ನಿನ್ನ ಧನುಷ್ಟಂಕಾರಧ್ವನಿಯೂ, ನಿನ್ನ ಧ್ವಜದಲ್ಲಿರುವ ಅಮಾನುಷಗಳಾದ ಭೂತಗಳ ಧ್ವನಿಯೂ, ರಥಚಕ್ರಧ್ವನಿಯೂ ನನ್ನ ಮನಸ್ಸಿಗೆ ಏನೂ ತೋರದಂತೆ ಮಾಡಿದೆ! ನನಗೆ ದಿಗ್ಭ್ರಮೆಹಿಡಿದಂತಾಗಿ, ನನ್ನ ಹೃದಯವು ನಡುಗುತ್ತಿದೆ! ಸಮಸ್ತದಿಕ್ಕುಗಳೂ ಧ್ವಜದಿಂದಲೇ ಮರೆಸಿಹೋಗಿ, ನನಗೆ ದಿಕ್ಕೇತೋರದಂತಾಗಿದೆ. ನಿನ್ನ ಗಾಂಡೀವ ಧ್ವನಿಯಿಂದ ನನ್ನ ಕಿವಿಗಳೆರಡೂ ಕಿವುಡುಬಿದ್ದಿವೆ'' ಎಂದನು.

ಓ ಜನಮೇಜಯರಾಜಾ! ಹೀಗೆ ಉತ್ತರನು ಭಯದಿಂದ ತತ್ತಳಿಸುತ್ತ, ಒಂದಾವರ್ತಿ ಧ್ವಜವನ್ನೂ, ಮತ್ತೊಮ್ಮೆ ಶಂಖವನ್ನೂ, ಇನ್ನೊಮ್ಮೆ ಗಾಂಡೀವಧನುಸ್ಸನ್ನೂ, ಮತ್ತೊಮ್ಮೆ ಅರ್ಜುನನನ್ನೂ ಬಾರಿಬಾರಿಗೂ ನೋಡಿನೋಡಿ ಮನಸ್ಸಿನಲ್ಲಿ ನಡುಗುತ್ತಿದ್ದನು. ಹಾಗೆಯೇ ಮೂರ್ಛೆ ಬೀಳುತ್ತಿದ್ದನು. ಆಗ ಅರ್ಜುನನು ಉತ್ತರನನ್ನು ಕುರಿತು, "ಓ ಮಹಾಬಾಹೂ! ಹೀಗೇಕೆ ಕಳವಳಿಸುವೆ? ಧೈರ್ಯವನ್ನು ತಂದುಕೊಳ್ಳುವವನಾಗು! ರಥದಮೇಲೆ ಬಲವಾಗಿ ಕಾಲುಗಳನ್ನೂರಿ, ಕುದುರೆಯ ಹಗ್ಗಗಳನ್ನು ದೃಢವಾಗಿ ಹಿಡಿದಿರು! ನಾನು ತಿರುಗಿ ಮತ್ತೊಮ್ಮೆ ಶಂಖವನ್ನೂದುವೆನು'' ಎಂದು ಮೊದಲೇ ಉತ್ತರನಿಗೆ ಎಚ್ಚರಿಕೆಯನ್ನು ಹೇಳಿ, ಪರ್ವತಗಳನ್ನೂ, ಪರ್ವತಗುಹೆಗಳನ್ನೂ, ಎಲ್ಲಾ ದಿಕ್ಕುಗಳನ್ನೂ, ಗುಡ್ಡಗಳನ್ನೂ ಭೇದಿಸುವಂತೆ ಬಲವಾಗಿ ಶಂಖವನ್ನೂದಿದನು. ಧನುಸ್ಸಿನ ನಾಣನ್ನು ಮಿಡಿದನು. ಉತ್ಸಾಹದಿಂದ ಕೈಗಳನ್ನೂ ತಟ್ಟಿದನು. ಅರ್ಜುನನ

ಈ ಜ್ಯಾಘೋಷದಿಂದಲೂ, ತಲಘೋಷದಿಂದಲೂ ಸಮಸ್ತ ಭೂತಗಳೂ ಮೂರ್ಛೆಬೀಳುವಂತಾದುವು. ಉತ್ತರನುಕೂಡ ರಥದಮೇಲೆ ಎಲ್ಲಿಯೋ ಒಂದುಕಡೆ ಭಯದಿಂದ ಮೈಯ್ಯುಡುಗಿಸಿಕೊಂಡು ಕುಳಿತುಬಿಟ್ಟನು. ತಿರುಗಿ ಅರ್ಜುನನು ಅವನಿಗೆ ಧೈರ್ಯವನ್ನು ಹೇಳಿ ಸಮಾಧಾನಪಡಿಸಿದನು. ಅರ್ಜುನನ ಶಂಖಧ್ವನಿಯಿಂದಲೂ, ರಥನೇಮಿಧ್ವನಿಯಿಂದಲೂ ಗಾಂಡೀವ ಧ್ವನಿಯಿಂದಲೂ ಭೂಮಿಯೆಲ್ಲವೂ ಮರಳಿಮರಳಿ ನಡುಗುವಂತಾಯಿತು.

ಇದು ನಾಲ್ವತ್ತೈದನೆಯ ಅಧ್ಯಾಯವು.

ಈ ಶಂಖಧ್ವನಿ ಮೊದಲಾದುವುಗಳನ್ನು ಕೇಳಿ ದ್ರೋಣನು ಅವನು ಅರ್ಜುನನೆಂದೇ ನಿಶ್ಚಯಿಸಿಕೊಂಡು, ಅದನ್ನು ದುರ್ಯೋಧನನಿಗೆ ತಿಳಿಸಿ, ತಮ್ಮಮುಂದೆ ಕಾಣುತ್ತಿದ್ದ ದುರ್ನಿಮಿತ್ತಗಳನ್ನೂ ಅವನಿಗೆ ತೋರಿಸಿದುದು.

ಓ ಜನಮೇಜಯರಾಜಾ! ಕೇಳು. ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ದ್ರೋಣಾಚಾರ್ಯನು, ತಮ್ಮಿದಿರಿಗೆ ನಡೆಯುತ್ತಿದ್ದ ಈ ಆರ್ಭಟಗಳನ್ನೆಲ್ಲಾ ನೋಡಿ ರಾಜನಾದ ದುರ್ಯೋಧನನನ್ನು ಕುರಿತು ಹೀಗೆಂದು ಹೇಳುವನು. "ಓ ರಾಜೇಂದ್ರಾ! ಆ ರಥಘೋಷವನ್ನೂ, ಆ ಶಂಖಧ್ವನಿಯನ್ನೂ, ಆ ಧ್ವನಿಯಿಂದ ಭೂಮಿಯು ನಡುಗುತ್ತಿರುವುದನ್ನೂ ನೋಡಿದರೆ, ನಮ್ಮಿದಿರಾಗಿ ನಿಂತವನು ಸವ್ಯಸಾಚಿಯೆನಿಸಿದ ಆ ಅರ್ಜುನನೇಹೊರತು ಬೇರೆಯಲ್ಲವೆಂದೇ ತೋರುವುದು. ಅಲ್ಲದೆ, ಓ ಮಹಾರಾಜಾ! ನಮ್ಮ ಮುಂದೆ ಉತ್ಪಾತಸೂಚನೆಗಳೆಲ್ಲವೂ ಕಾಣುತ್ತಿರುವುವು. ಈಗ ನಮ್ಮ ಸೈನ್ಯಕ್ಕೆ ಜಯವುಂಟಾಗುವಹಾಗೆ ತೋರಲಿಲ್ಲ. ನಮ್ಮ ಶಸ್ತ್ರಗಳಿಗೆ ಮೊದಲಿದ್ದ ಪ್ರಕಾಶವಿಲ್ಲದೆ ಮಸುಕಾಗಿರುವುವು. ನಮ್ಮ ವಾಹನಗಳೆಲ್ಲವೂ ಹರ್ಷಶೂನ್ಯವಾಗಿವೆ. ಶುಭಕರಗಳಾದ ನಮ್ಮ ಅಗ್ನಿಗಳು ಚೆನ್ನಾಗಿ ಉರಿಸಿದರೂ ಜ್ವಲಿಸದೆ ಪ್ರಕಾಶಹೀನವಾಗಿರುವುವು. ಮೃಗಗಳು ಸೂರ್ಯನಿಗಿದಿರಾಗಿ

ಘೋರಧ್ವನಿಯಿಂದ ಅರಚುತ್ತಿರುವುವು. ಪಕ್ಷಿಗಳೆಲ್ಲವೂ ಬಲದಕಡೆಗೇ ತಿರುಗುತ್ತಿವೆ. ಇವೆಲ್ಲವೂ ಮುಂದೆ ನಮಗೆ ಮಹಾಭಯವನ್ನು ಸೂಚಿಸುವುವು. ಇದೊಂದು ನರಿಯು ನಮ್ಮ ಸೈನ್ಯಗಳ ನಡುವೆ ಊಳಿಡುತ್ತಾ ಓಡುತ್ತಿರುವುದು ನೋಡು. ಕಾಡೆಯ ಹಕ್ಕಿಗಳು ಆಕಾಶದಲ್ಲಿ ಮಹಾಭಯಸೂಚಕವಾಗಿ ಅರಚುತ್ತಿರುವುವು. ಇದಲ್ಲದೆ, ನಿಮ್ಮೆಲ್ಲರ ದೇಹದಲ್ಲಿರುವ ಕೂದಲುಗಳೂ ಕೂಡ ಪುಳುಕಿತವಾದಂತೆ ಕಾಣುತ್ತಿವೆ. ನಮ್ಮ ಸೈನ್ಯದಲ್ಲಿರುವ ಆನೆಗಳೆಲ್ಲವೂ ಸ್ವಲ್ಪವೂ ಚಟುವಟಿಕೆಯಿಲ್ಲದೆ ಮಂಕುಹಿಡಿದಂತಾಗಿ, ದೇಹದಲ್ಲಿ ಉಷ್ಣವಿಲ್ಲದೆ, ಅಡಿಗಡಿಗೆ ಆಕಳಿಸುತ್ತಿರುವುವು. ಮತ್ತು ಆಗಾಗ ಸ್ತಬ್ಧವಾಗಿ ನಿಂತುಬಿಡುವುವು. ನಮ್ಮ ಸೈನ್ಯದ ಕುದುರೆಗಳು ಕಣ್ಣೀರನ್ನು ಸುರಿಸುತ್ತಾ, ಬಾರಿಬಾರಿಗೂ ಮಲಮೂತ್ರಗಳನ್ನು ಸುರಿಸುತ್ತಿರುವುವು. ಭೂಮಿಯು ರಕ್ತದಿಂದ ನೆನೆದಂತೆ ಕಾಣುವುದು. ದಿಕ್ಕುಗಳೆಲ್ಲಾ ಹೊಗೆಯಾಡುತ್ತಿರುವುವು. ಸೂರ್ಯನು ಪ್ರಕಾಶರಹಿತನಾಗಿ ಮಹಾಭಯವನ್ನು ಸೂಚಿಸುತ್ತಿರುವನು. ನಮ್ಮ ಆನೆಗಳೂ, ಯೋಧರುಗಳೂ ಈಗಾಗಲೇ ಭಯದಿಂದ ನಡುಗುವಂತಿದೆ. ಓ ರಾಜಾ! ನಮ್ಮ ಸೈನ್ಯವು ಈಗಲೇ ಪರಾಭವವನ್ನು ಹೊಂದಿದಂತಾಗಿದೆ. ಯುದ್ಧಮಾಡುವುದಕ್ಕೆ ಯಾವನಿಗೂ ಉತ್ಸಾಹವಿಲ್ಲ. ಯೋಧರೆಲ್ಲರೂ ಮಂಕುಹಿಡಿದಂತಾಗಿ, ಮುಖದಲ್ಲಿ ಕಳೆಯಿಲ್ಲದೆ ಬಾರಿಬಾರಿಗೂ ದಕ್ಷಿಣದಿಕ್ಕನ್ನೇ ನೋಡುವರು. ಮೃಗಪಕ್ಷಿಗಳೆಲ್ಲವೂ ನಮಗೆ ಎಡಪಾರ್ಶ್ವದಿಂದಲೇ ಹೋಗುವುವು. ಎಷ್ಟು ಬಲವಾಗಿ ನುಡಿಸಿದರೂ, ನಮ್ಮ ರಣವಾದ್ಯಗಳು ಚೆನ್ನಾಗಿ ನುಡಿಯುದಿಲ್ಲ. ಓ ರಾಜಾ! ನಮ್ಮ ರಥಾಗ್ರಗಳಲ್ಲಿ ಕಾಗೆಗಳು ಬಂದು ಕುಳಿತಿರುವುವು ನೋಡು. ಇದು ಬಹಳ ಹಾನಿಸೂಚಕವು.

ಓ ಕೌರವೇಂದ್ರಾ! ಅದೋ! ಅಲ್ಲಿ ಮೇಘಧ್ವನಿಯಂತಿರುವ ಗಂಭೀರಧ್ವನಿಯೊಡನೆ ವೇಗದಿಂದ ಬರುವ ರಥವನ್ನು ನೋಡು! ಆ ರಥವನ್ನು ನೋಡಿದರೆ ಅವನು ಅರ್ಜುನನಲ್ಲದೆ ಬೇರೆಯವನಲ್ಲ. ಆ ರಥದ ಕುದುರೆಗಳ ಧ್ವನಿಯನ್ನು ಕೇಳು. ಅದೋ ಧ್ವಜದಲ್ಲಿರುವ ವಾನರನ ಮಹಾಧ್ವನಿಯು ಕೇಳಿಸುವುದು ನೋಡು. ಆ ಶಂಖಧ್ವನಿಯಿಂದ ನನ್ನ ಕಿವಿ

ಗಳು ಕಿವುಡುಬಿದ್ದಿವೆ. ನಮ್ಮ ಸೈನ್ಯವೆಲ್ಲವೂ ಭೀತಿಗೊಂಡಿದೆ. ಆದುದರಿಂದ, ಇವನು ಅರ್ಜುನನೇ ಹೊರತು ಬೇರೆಯವನಲ್ಲ. ಎಲೈ ಮಹಾರಥರೇ! ಇನ್ನು ನಾವೆಲ್ಲರೂ ಶತ್ರುಸೂದನನಾದ ಈ ದುರ್ಯೋಧನನನ್ನು ಮುಂದಿಟ್ಟುಕೊಂಡು, ಸಮಸ್ತ ಶಸ್ತ್ರಸನ್ನಾಹಗಳೊಡನೆ ಸಿದ್ಧವಾಗಿರಬೇಕು. ನಮ್ಮ ಸೈನ್ಯಗಳನ್ನೆಲ್ಲಾ ವ್ಯೂಹವಾಗಿ ನಿಲ್ಲಿಸಿ, ಈಗ ಸೆರೆಹಿಡಿದ ಗೋವುಗಳನ್ನು ಹಿಂದೆ ಬಿಟ್ಟುಕೊಳ್ಳಬೇಕು. ನಮ್ಮ ಸೈನ್ಯಗಳನ್ನು ನೂರಾಗಿ ವಿಭಾಗಿಸಿ, ನಮ್ಮ ನಮ್ಮ ಧ್ವಜಗಳನ್ನೇರಿಸಿ ಮುಂದೆ ನಿಲ್ಲಬೇಕು. ಆದರೇನು? ಆ ಧನಂಜಯನು ತನ್ನ ಕ್ರೂರಬಾಣಗಳಿಂದ ಈ ನಮ್ಮ ಸೈನ್ಯವನ್ನೆಲ್ಲಾ ನೋಯಿಸಿ, ಸಮಸ್ತ ರಾಜರ ಶಿರಸ್ಸನ್ನೂ ತನ್ನ ಎಡಗಾಲಿಂದ ಮೆಟ್ಟಿಹೋಗುವುದರಲ್ಲಿ ಸಂದೇಹವಿಲ್ಲ. ಆದರೂ ನಾವು ಎಲ್ಲಾ ದಿಕ್ಕುಗಳಲ್ಲಿಯೂ ಸೇನಾದುರ್ಗಗಳನ್ನು ಕಲ್ಪಿಸಿ, ಎಚ್ಚರಿಕೆಯಿಂದ ಯುದ್ಧಮಾಡುವೆವು" ಎಂದನು.

ಇದು ನಾಲ್ವತ್ತಾರನೆಯ ಅಧ್ಯಾಯವು.



ದ್ರೋಣನ ಮಾತಿನಿಂದ ಅರ್ಜುನನೆಂಬುದನ್ನು ತಿಳಿದು ಕೌರವಸೈನ್ಯವೆಲ್ಲವೂ ಯುದ್ಧೋತ್ಸಾಹವನ್ನು ಬಿಟ್ಟು ಚಿಂತಾಕುಲವಾಗಿ ಸುಮ್ಮನಿರುವುದನ್ನು ನೋಡಿ, ದುರ್ಯೋಧನನು ದ್ರೋಣನನ್ನು ನಿರಾಕರಿಸಿ, ಸೈನ್ಯವನ್ನು ಯುದ್ಧಕ್ಕೆ ಪ್ರೋತ್ಸಾಹಿಸಿದುದು.

ಓ ಜನಮೇಜಯರಾಜಾ! ಕೇಳು! ಆಮೇಲೆ ದುರ್ಯೋಧನನು ಭೀಷ್ಮ, ದ್ರೋಣ, ಕೃಪರನ್ನು ನೋಡಿ ಹೀಗೆಂದು ಹೇಳುವನು. "ಎಲೈ ಆಚಾರ್ಯರೇ! ಈ ವಿಚಾರವನ್ನು ನಾನೂ, ಕರ್ಣನೂ ಅನೇಕಾವರ್ತಿ ಚರ್ಚಿಸಿಯೇ ಇರುವೆವು. ಆದರೂ ಮತ್ತೊಮ್ಮೆ ಹೇಳುವೆನು. ಅದನ್ನು ಎಷ್ಟುಸಾರಿ ಹೇಳಿಯೂ ನನಗೆ ತೃಪ್ತಿಯಿಲ್ಲದಿದೆ. ನಮ್ಮಿಂದ ಜೂಜಿನಲ್ಲಿ ಪರಾಜಿತರಾದ ಆ ಪಾಂಡವರು ಹನ್ನೆರಡು ವರ್ಷಗಳು ಕಾಡಿನಲ್ಲಿದ್ದು, ಆಮೇಲೆ ಯಾವುದಾದರೂ ದೇಶದಲ್ಲಿ ಯಾರಿಗೂ ತಿಳಿಯದಂತೆ ಒಂದು ವರ್ಷದ

ದುರ್ಗಮವಾದ ಕಾಡುದಾರಿಯನ್ನು ಹಿಡಿದೋಡುವ ಕಾಲಾಳ್ಗಳಲ್ಲಿಯಾಗಲಿ, ಕುದುರೆಯ ಸೈನ್ಯದಲ್ಲಿಯಾಗಲಿ ಯಾವನು ತಾನೇ ಬದುಕಿಹೋಗುವನು? ಈಗ ನೀವು ಈ ದ್ರೋಣಾಚಾರ್ಯರನ್ನು ಹೊರಗಾಗಿಸಿಯೇ ಸರಿಯಾದ ಯುದ್ಧನೀತಿಯನ್ನು ಅವಲಂಬಿಸಬಾರದೇಕೆ? ಏಕೆಂದರೆ, ಅವರ ಅಭಿಪ್ರಾಯವೇನೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಅವರು ನಮ್ಮೆಲ್ಲರನ್ನೂ ಹೆದರಿಸುವಂತಿದೆ. ಅವರಿಗೆ ಅರ್ಜುನನಲ್ಲಿಯೇ ವಿಶ್ವಾಸವು ಹೆಚ್ಚು. ಈಗ ಅರ್ಜುನನು ನಮ್ಮ ಕಣ್ಣಿಗೆ ಬಿದ್ದುಬಿಟ್ಟುದರಿಂದ, ಅವನ ಅಪಾಯವನ್ನು ತಪ್ಪಿಸುವುದಕ್ಕಾಗಿಯೇ ದ್ರೋಣನು ಈ ಉಪಾಯವನ್ನು ಹಿಡಿದಿರುವನು. ನಮ್ಮ ಸೇನೆಗಳು ಚದರಿಹೋಗದಂತೆ ನೀವು ನೋಡಿಕೊಳ್ಳಬೇಕು. ನಮ್ಮ ಸೈನ್ಯವಾದರೋ ಈಗ ದುರ್ಗಮವಾದ ಈ ವನಪ್ರದೇಶಕ್ಕೆ ಬಂದಿರುವುದು. ಇದು ಅನಾಥವಾಗಿ ಶತ್ರುವಶವಾಗದಂತೆ ನೀವು ನೀತಿಯನ್ನು ಹಿಡಿಯಬೇಕು. ಬರೀ ಕುದುರೆಗಳ ಕೂಗಾಟವು ಕೇಳಿಸಿದಮಾತ್ರಕ್ಕೆ ಅದರಿಂದ ಶತ್ರುವಿಗೆ ಪ್ರಶಂಸೆಯೇನಾಯಿತು? ಕುದುರೆಗಳು ನಿಂತ ಕಡೆ ನಿಂತಿದ್ದರೂ, ಓಡುತ್ತಿದ್ದರೂ ಆಗಾಗ ಕೂಗುತ್ತಲೇ ಇರುವುವು. ಗಾಳಿಗಳು ಯಾವಾಗಲೂ ಬೀಸುತ್ತಲೇ ಇರುವುವು. ಇಂದ್ರನು ಯಾವಾಗಲೂ ಇಷ್ಟಬಂದಂತೆ ಮಳೆಯನ್ನು ಸುರಿಸುವನು. ಆಗಾಗ ಮೇಘಗಳು ಗುಡುಗುತ್ತಲೇ ಇರುವುವು. ಈ ಗುಟ್ಟುಬೆದರಿಕೆಗಳನ್ನೆಲ್ಲ ತೋರಿಸಿ ದ್ರೋಣಾಚಾರ್ಯನು ಪಾಂಡವರ ವಿಷಯದಲ್ಲಿ ನಮಗೆಲ್ಲ ಭಯವನ್ನು ಹುಟ್ಟಿಸುವಂತಿದೆ. ಓ ದ್ರೋಣಾಚಾರ್ಯಾ! ನಮ್ಮ ಸೈನ್ಯದ ಮುಂದೆ ಹೀಗೆ ಅಸಂಬದ್ಧವಾದ ಏನೇನೋ ಮಾತುಗಳನ್ನಾಡಿ, ನಮ್ಮ ಕಡೆಯ ಜನರೆಲ್ಲರನ್ನೂ ನೀನು ಹೆದರಿಸುತ್ತಿರುವೆ. ಕುದುರೆಯನ್ನು ಕಳೆದುಕೊಂಡು ಅದನ್ನು ಹುಡುಕುವುದಕ್ಕಾಗಿ ಬಂದವರು, ತಮ್ಮ ಕಿವಿಗೆ ಬಿದ್ದ ಶಬ್ದಗಳನ್ನೆಲ್ಲಾ ಕುದುರೆಯ ಕೂಗನ್ನಾಗಿಯೇ ಭಾವಿಸುವಂತೆ ನಿಮಗೆಲ್ಲ ಪಾರ್ಥನ ಬೆಜ್ಜರ ಹಿಡಿದಂತಿದೆ. ಆ ಪಾರ್ಥನಾದರೂ ಇಲ್ಲಿ ಏನು ಮಾಡುವುದಿದೆ? ಅವನನ್ನು ನೀವು ಹೀಗೆ ಪ್ರಶಂಸಿಸಲು ಕಾರಣವೇನು? ನೀವು ಅವನಲ್ಲಿರುವ ಪ್ರೀತಿಯಿಂದಲೋ, ನಮ್ಮಲ್ಲಿ ದ್ವೇಷದಿಂದಲೋ, ಕೋಪದಿಂದಲೋ ಹೀಗೆ ಅರ್ಜುನನನ್ನು ನಿಷ್ಕಾರಣವಾಗಿ ಪ್ರಶಂಸಿಸುವಿರಿ! ಇದಕ್ಕೆ ಬೇರೆ

ನಲ್ಲಿ ಏನೋ ಒಂದು ಭಯವುಂಟಾದಹಾಗಿದೆ. ಇಲ್ಲಿರತಕ್ಕವರಿಗೆ ಯುದ್ಧ ದಲ್ಲಿಯೂ ಮನಸ್ಸಿಲ್ಲದಂತೆ ತೋರುತ್ತಿದೆ. ಈಗ ಇಲ್ಲಿ ಬಂದಿರುವವನು ಜಮದಗ್ನಿಪುತ್ರನಾದ ಪರಶುರಾಮನೇ ಆಗಿರಲಿ, ದೇವೇಂದ್ರನಾದ ಪುರಂದರನೇ ಆಗಲಿ, ಅರ್ಜುನನೇ ವಾಸುದೇವಸಹಿತನಾಗಿ ಇಲ್ಲಿಗೆ ಬಂದಿದ್ದರೂ ಇರಲಿ! ಸಮುದ್ರವೇಲೆಯು ಜಲವೇಗವನ್ನು ಹೇಗೋ ಹಾಗೆ ನಾನು ಅವರನ್ನು ತಡೆಯುವೆನು. ಪ್ರಕಾಶವಾದ ಅಲಗುಗಳಿಂದಲೂ, ಚಿನ್ನದ ಹಿಡಿಗಳಿಂದಲೂ ಕೂಡಿ, ಅರ್ಜುನನ ಆಯುಸ್ಸನ್ನು ತೀರಿಸತಕ್ಕ ನನ್ನ ಬಾಣಗಳು, ಈಗಲೇ ಸೂರ್ಯನನ್ನು ಮರೆಸುವಂತೆ ವ್ಯಾಪಿಸಲಿ. ನನ್ನ ಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಬಗ್ಗಿದ ಗಿಣ್ಣುಳ್ಳ ಬಾಣಗಳು ಬುಸುಗುಟ್ಟುವ ಸರ್ಪಗಳಂತೆ ಮುಂದೆಹೋದಮೇಲೆ ಅವು ವಿಫಲವಾಗಿ ಹಿಂತಿರುಗತಕ್ಕವುಗಳಲ್ಲ. ನಾನು ದೃಢವಾದ ಹಿಡಿಗಳುಳ್ಳ ಈ ಬಾಣವನ್ನು ಹೆದೆಯಲ್ಲಿ ಸೇರಿಸಿ, ನಾಣನ್ನು ತಟ್ಟುವಾಗ, ಆ ತಲಘೋಷವೇ ಭೇರೀಧ್ವನಿಯಂತೆ ಕೇಳಿಸುವುವು. ಅಷ್ಟೇಕೆ? ಎಲೈ ಕುರುವೀರರೇ! ನಾನು ಬಿಟ್ಟ ಬಾಣಗಳಿಂದ ನಮ್ಮ ವೈರಿಗಳಾದ ಆ ಮತ್ಸ್ಯದೇಶದವರ ರಥಗಳು ಒಂದೊಂದು ಸಲಕ್ಕೆ ಒಂದೊಂದರಂತೆಯೂ, ನಾಲ್ಕು, ಐದು, ಕೆಲವು ವೇಳೆ ಆರುವತ್ತು ಮತ್ತು ಕೆಲವು ಕಡೆಗಳಲ್ಲಿ ನೂರುನೂರಾಗಿ ಬೀಳುವುದನ್ನಾದರೂ ನೋಡಿರಿ. ಎಣ್ಣೆಹಾಕಿ ತೀಡಿದ ಮತ್ತು ಗರಿಯುಳ್ಳ ನನ್ನ ಬಾಣಗಳು, ಈಗ ನನ್ನ ಕೈಯಿಂದ ಹೊರಟು, ಆಕಾಶವನ್ನೆಲ್ಲಾ ಮಿಂಚುಹುಳಗಳಂತೆ ವ್ಯಾಪಿಸಲಿ. ಆ ಅರ್ಜುನನ ಧ್ವಜಾಗ್ರದಲ್ಲಿರುವ ವಾನರವು ನನ್ನ ಭಲ್ಲಾಯುಧದಿಂದ ಹೊಡೆಯಲ್ಪಟ್ಟು, ಭಯಂಕರವಾಗಿ ಅರಚುತ್ತಾ ಈಗಲೇ ನೆಲಕ್ಕೆ ಬೀಳಲಿ. ಮತ್ತು ಆ ಅರ್ಜುನನ ಧ್ವಜದಲ್ಲಿರುವ ಭೂತಗಳೆಲ್ಲವೂ, ನನ್ನ ಬಾಣಪ್ರಹಾರಕ್ಕೆ ಹೆದರಿ, ದಿಕ್ಕುದಿಕ್ಕಿಗೆ ಪಲಾಯನಮಾಡುವ ಕೋಲಾಹಲವು ಆಕಾಶವನ್ನು ವ್ಯಾಪಿಸಲಿ. ನಾನು ಕೋಪಗೊಂಡು ಅಸ್ತ್ರವನ್ನು ಬಿಟ್ಟರೆ, ಅವರ ಜ್ವಾಲೆಯು ಈ ಸಮಸ್ತ ಭೂಮಿಯನ್ನೇ ದಹಿಸುವುದು. ಈಗ ಯುದ್ಧರಂಗದಲ್ಲಿ ಏಕಾಕಿಯಾಗಿ ಬಂದು ನಿಂತಿರುವ ಅರ್ಜುನನನ್ನು ಜಯಿಸುವುದೇನು ದೊಡ್ಡದು? ಆ ಅರ್ಜುನನು ಕಳೆದ ಹದಿಮೂರು ವರ್ಷಗಳ ಕಾಲದಿಂದ ಮನಸ್ಸನ್ನು ತಡೆ

ದಿಟ್ಟುಕೊಂಡಿದ್ದು, ಈಗ ಯುದ್ಧದಾತುರದಿಂದ ಬಂದಿರುವನು. ಇರಲಿ! ಅವನ ಶಕ್ತಿಯನ್ನು ನನ್ನಲ್ಲಿ ತೋರಿಸಲಿ. ಒಳ್ಳೇ ಗುಣಶಾಲಿಯಾದ ಬ್ರಾಹ್ಮಣನಂತೆ, ಅವನು ಈಗ ನನ್ನ ಬಾಣಕ್ಕೆ ಒಳ್ಳೇ ಸತ್ಪಾತ್ರನಾಗಿ ಸಿಕ್ಕಿರುವನು. ಸ್ವಧೆಯನ್ನು ಪರಿಗ್ರಹಿಸುವಂತೆ ನನ್ನ ಬಾಣಪರಂಪರೆಯನ್ನು ಅವನು ಪರಿಗ್ರಹಿಸಲಿ. ಆ ಅರ್ಜುನನು ಮಹಾ ಧನುರ್ಧಾರಿಯೆಂದು ಲೋಕಪ್ರಖ್ಯಾತನಾಗಿದ್ದರೂ ಇರಬಹುದು. ಆದರೆ, ನಾನು ಅವನಿಗಿಂತ ಯಾವ ಭಾಗದಲ್ಲಿಯೂ ಕಡಿಮೆಯಾದವನಲ್ಲ. ನನ್ನ ಕೈಯಿಂದ ಪ್ರಯೋಗಿಸಲ್ಪಟ್ಟ ಅಗ್ನಿಜ್ವಾಲೆಗೆ ಸಮಾನವಾದ ತೇಜಸ್ಸುಳ್ಳ ಈ ಬಾಣಗಳು, ಮುಂದೆಹೋದಮೇಲೆ ವಿಫಲವಾಗಿ ಹಿಂತಿರುಗಿ ಬರತಕ್ಕವುಗಳಲ್ಲ. ನನ್ನ ಕೈಯಿಂದ ಹೊರಟು, ಅತ್ತಿತ್ತ ನಾನಾ ಕಡೆಗೂ ವ್ಯಾಪಿಸಿದ ಬಾಣಗಳ ಧ್ವನಿಯು, ಮೊರೆಯುತ್ತಿರುವ ದುಂಬಿಯ ಧ್ವನಿಗಳಂತೆ ರಣರಂಗವೆಲ್ಲವನ್ನೂ ವ್ಯಾಪಿಸಲಿ. ಹದ್ದಿನ ಗರಿಗಳಿಂದ ಕೂಡಿ, ಸಾಣೆಯಿಕ್ಕಿ ಹರಿತವಾದ ನನ್ನ ಬಾಣಗಳು ಆಕಾಶವನ್ನೆಲ್ಲಾ ವ್ಯಾಪಿಸಿ, ಶಲಭಗಳ ಛಾಯೆಯಂತೆ ಜನರಿಗೆ ಕಾಣಿಸಲಿ. ನನ್ನ ಧನುಸ್ಸಿನಿಂದ ಬಿಡಲ್ಪಟ್ಟ ತೀಕ್ಷ್ಣಬಾಣಗಳು, ಹುತ್ತವನ್ನು ಹುಗುವ ಸರ್ಪಗಳಂತೆ ಅರ್ಜುನನ ಶರೀರದಲ್ಲಿ ಹೊಕ್ಕು ಅವನ ಮರ್ಮಸ್ಥಾನಗಳನ್ನು ಮುಟ್ಟಲಿ. ನವಿಲುಗರಿಗಳಿಂದ ಕೂಡಿದ ಈ ನನ್ನ ಬಾಣಗಳು, ನವಿಲುಗಳನ್ನು ಹಿಂಬಾಲಿಸಿಹೋಗುವ ನವಿಲುಗಳಂತೆ, ಒಂದರ ಹಿಂದೆ ಒಂದಾಗಿ ಹೋಗಿ ಮೇಲೆ ಬೀಳುವುದರಿಂದುಂಟಾಗುವ ಮಹಾಧ್ವನಿಯು, ಗುಂಪುಗುಂಪಾಗಿ ಹಾರಿಬರುತ್ತಿರುವ ಪಕ್ಷಿಗಳ ಕೋಲಾಹಲದಂತೆ ಕೇಳಿಬರಲಿ. ಎಲೈ ಕೌರವವೀರರೇ! ಹಿಂದೆ ನಾನು ಧೃತರಾಷ್ಟ್ರಪುತ್ರನಾದ ಈ ದುರ್ಯೋಧನನಿಗೆ ಅರ್ಜುನನನ್ನು ಕೊಲ್ಲುವುದಾಗಿ ಯಾವ ಪ್ರತಿಜ್ಞೆಯನ್ನು ಮಾಡಿಕೊಟ್ಟೆನೋ, ಈಗ ಆ ಪ್ರತಿಜ್ಞೆಯ ಭಾರವನ್ನು ನಾನು ತೀರಿಸಿದೆನೆಂದು ತಿಳಿಯಿರಿ. ವಜ್ರಾಯುಧದಂತೆ ಸ್ಪರ್ಶವೇಗವುಳ್ಳ ಮತ್ತು ಇಂದ್ರನಿಗೆಣೆಯಾದ ಪರಾಕ್ರಮವುಳ್ಳ ಪಾರ್ಥನನ್ನು, ಆನೆಯನ್ನು ಕೊಳ್ಳಿಯಿಂದ ಹೇಗೋ ಹಾಗೆ, ನಿಮಿಷಮಾತ್ರದಲ್ಲಿ ಹೆದರಿಸಿ ಓಡಿಸುವೆನು ನೋಡಿರಿ. ಬಾಣಗಳೆಂಬ ಮಹಾಜ್ವಾಲೆಗಳಿಂದಲೂ, ಕತ್ತಿ, ಗದೆ, ಶಕ್ತಿಗಳೆಂಬ ಕಟ್ಟಿಗೆಗಳಿಂದಲೂ ಕೂಡಿ, ನಮ್ಮ ಸೈನ್ಯ

ವನ್ನು ದಹಿಸಲಿರುವ ಆ ಅರ್ಜುನನೆಂಬ ಬೆಂಕಿಯನ್ನು ಈ ಕ್ಷಣಮಾತ್ರದಲ್ಲಿ ಆರಿಸಿಬಿಡುವೆನು ನೋಡಿರಿ. ಲೋಕದಲ್ಲಿರುವ ಎಲ್ಲಾ ರಥಿಕರಿಗೂ ಅತಿ ರಥನೆನಿಸಿಕೊಂಡು, ಎಲ್ಲಾ ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ಆ ಅರ್ಜುನ ನನ್ನು ನಾನು, ಗರುಡನು ಹಾವನ್ನು ಹೇಗೋ ಹಾಗೆ ಹಿಡಿಯುವುದನ್ನಾ ದರೂ ನೋಡಿರಿ. ಮೈಮೇಲೆ ಚಿತ್ರವಿಚಿತ್ರವಾಗಿ ಬೀಳುವ ನನ್ನ ಭಲ್ಲಾ ಯುಧಗಳಿಂದಲೂ, ಕ್ಷುದ್ರಕಗಳೆಂಬ ಆಯುಧಗಳಿಂದಲೂ ಆ ಅರ್ಜುನನು ತನ್ನ ದೇಹದಲ್ಲಿಯೇ ಸ್ವಾಧೀನತಪ್ಪಿ, ಹಿಂದುಮುಂದು ತೋರದಂತಾಗು ವನು. ಈಗಲೇ ನಾನು ನನ್ನ ಬಾಣಗಳಿಂದ ಆ ಅರ್ಜುನನ ತಲೆಯನ್ನು ಹಾರಿಸಿ, ದುರ್ಯೋಧನನ ಮನಸ್ಸಿನಲ್ಲಿ ಬಹುಕಾಲದಿಂದಿದ್ದ ದುಃಖವನ್ನು ನಿಶ್ಶೇಷವಾಗಿ ನೀಗಿಸುವೆನು. ಈಗ ನನ್ನ ಧನುಸ್ಸಿನಿಂದ ಪ್ರಯೋಗಿಸ ಲ್ಪಟ್ಟ, ಬಗ್ಗಿದ ಗಿಣ್ಣುಗಳುಳ್ಳ ಈಟಿಗಳಿಂದ ಆ ಅರ್ಜುನನು ತನ್ನ ರಥ ವನ್ನೂ, ರಥಾಶ್ವಗಳನ್ನೂ ಕಳೆದುಕೊಂಡು ಬುಸುಗುಟ್ಟುವ ಸರ್ಪದಂತೆ, ಸಂಕಟದಿಂದ ತತ್ತಳಿಸುವುದನ್ನು ಕೌರವರೆಲ್ಲರೂ ನೋಡಲಿ. ನಾನು ಋಷಿಶ್ರೇಷ್ಠನಾದ ಆ ಪರಶುರಾಮನಿಂದಲೇ ದಿವ್ಯಾಸ್ತ್ರಗಳನ್ನು ಪಡೆದವನು. ಆ ಅಸ್ತ್ರಬಲದಿಂದಲೂ, ನನ್ನ ವೀರ್ಯಬಲದಿಂದಲೂ, ನಾನು ದೇವೇಂದ್ರ ನನ್ನಾದರೂ ಇದಿರಿಸಬಲ್ಲೆನು. ಅವನ ಮಗನಾದ ಈ ಅರ್ಜುನನು ನನ ಗೊಂದು ಲಕ್ಷ್ಯವೇ? ಆ ಅರ್ಜುನನ ಧ್ವಜಾಗ್ರದಲ್ಲಿರುವ ವಾನರನು ನನ್ನ ಭಲ್ಲಾಯುಧದಿಂದ ಹತನಾಗಿ, ಕ್ರೂರಧ್ವನಿಯಿಂದರಚುತ್ತ, ಈಗಲೇ ಕೆಳಕ್ಕೆ ಬೀಳಲಿ. ಕೌರವರೆಲ್ಲರೂ ಈಗ ಸೆರೆಹಿಡಿದ ಗೋವುಗಳನ್ನು ಸಾಗಿ ಸಿಕೊಂಡು ತಮ್ಮ ಇಷ್ಟಬಂದಂತೆ ಪಟ್ಟಣಕ್ಕೆ ಹಿಂತಿರುಗಲಿ. ಇಲ್ಲವೇ, ಅವರು ರಥದಲ್ಲಿಯೇ ಕುಳಿತುಕೊಂಡು ನನ್ನ ಯುದ್ಧಚಾತುರ್ಯವನ್ನು ನೋಡುತ್ತಿರಲಿ. ನಾನೊಬ್ಬನೇ ಈ ಯುದ್ಧವನ್ನು ನೋಡಿಕೊಳ್ಳುವೆನು" ಎಂದನು.

ಇದು ನಾಲ್ವತ್ತೆಂಟನೆಯ ಅಧ್ಯಾಯವು.



ಕ್ಕಾಗಿ ನಿಲ್ಲಬೇಕೆಂಬವನು ಮೊದಲೇ ಔಷಧಗಳನ್ನು ಸಿದ್ಧಪಡಿಸಿಕೊಳ್ಳ ಬೇಕು. ಕರ್ಣಾ! ಈಗ ನೀನು ಅರ್ಜುನನೊಡನೆ ಯುದ್ಧಕ್ಕೆ ಆತುರಪ ಡುವುದನ್ನು ನೋಡಿದರೆ, ಕೋಪಗೊಂಡ ಹಾವಿನ ಹಲ್ಲನ್ನು ಕೀಳುವುದ ಕ್ಕಾಗಿ ಅದರ ಬಾಯಿಯೊಳಗೆ ನಿನ್ನ ಬಲಗೈಯ ತೋರುಬೆರಳನ್ನು ದೂಡು ತ್ತಿರುವೆ. ಕಾಡಿನಲ್ಲಿ ತನ್ನ ಹಿಂಡನ್ನು ಕಾಣದೆ ಏಕಾಕಿಯಾಗಿ ಅಲೆ ಯುತ್ತಿರುವ ಮದದಾನೆಯಮೇಲೆ, ಅಂಕುಶವೂ ಇಲ್ಲದೆ ಕುಳಿತು ಪುರ ಪ್ರವೇಶಮಾಡಬೇಕೆಂದೆಳಸುವೆ. ಓ ಕರ್ಣಾ! ಈಗ ನೀನು ತುಪ್ಪದಿಂದ ಲೂ, ಮಿದುಳಿಂದಲೂ, ವಸೆಯಿಂದಲೂ ಹುತಮಾಡಲ್ಪಟ್ಟ ದೊಡ್ಡ ಅಗ್ನಿ ಕುಂಡದ ಮಧ್ಯದಲ್ಲಿ ತುಪ್ಪದಲ್ಲಿ ನೆನೆಸಿದ ನವಿರುಬಟ್ಟೆಯನ್ನುಟ್ಟು ಪ್ರವೇ ಸಿಸಲೆಳಸುವೆ. ಓ ಕರ್ಣಾ! ಯಾವನುತಾನೇ ತನ್ನ ದೇಹವನ್ನು ಹಗ್ಗ ಗಳಿಂದ ಬಿಗಿದು, ಕಲ್ಲನ್ನು ಕತ್ತಿಗೆ ಕಟ್ಟಿಕೊಂಡು ತನ್ನ ಕೈಗಳಿಂದಲೇ ಸಮುದ್ರವನ್ನು ದಾಟಬೇಕೆಂದೆಳಸುವನು? ಈ ಪೌರುಷವು ಯಾವ ಕೆಲ ಸಕ್ಕೆ ಬಂದೀತು? ಅಸ್ತ್ರಗಳನ್ನೇನೂ ತಿಳಿಯದವನು ಒಳ್ಳೇ ಅಸ್ತ್ರಕೌಶಲ ವುಳ್ಳವನನ್ನೂ, ಬಲಹೀನನು ಬಲಾಢ್ಯನನ್ನೂ ಇದಿರಿಸುವಂತೆ ಈಗ ಅರ್ಜುನನನ್ನು ಇದಿರಿಸಬೇಕೆಂದು ಅಪೇಕ್ಷಿಸುವವರನ್ನು ಕೇವಲ ಬುದ್ಧಿ ಯಿಲ್ಲದವರೆಂದೇ ಹೇಳಬೇಕು. ಈ ಅರ್ಜುನನಾದರೋ ಕಳೆದ ಹದಿಮೂರು ವರ್ಷಗಳಿಂದ ಅನೇಕ ಕಷ್ಟಗಳನ್ನನುಭವಿಸಿ ಬಂದವನು. ಅವನಿಗೆ ಈ ಕಷ್ಟಗಳೆಲ್ಲ ನಮ್ಮಿಂದಲೇ ಉಂಟಾದುವು. ಕಟ್ಟನ್ನು ಕಳಚಿಬಿಟ್ಟ ಸಿಂಹ ದಂತೆ ಈಗ ಅವನು ಹೊರಗೆ ಬಂದಿರುವನು. ಈಗ ನಮ್ಮನ್ನು ಅವನು ನಿಶ್ಶೇಷವಾಗಿ ತೀರಿಸದೆ ಬಿಟ್ಟುಹೋಗುವನಲ್ಲ. ಬಾವಿಯಲ್ಲಿ ಮರೆಯಾಗಿ ರುವ ಬೆಂಕಿಯಂತೆ ಅವನು ಮೈ ಮರೆಸಿಕೊಂಡು ಏಕಾಂತವಾಗಿದ್ದವನು. ಅಂತವನನ್ನು ಈಗ ನಾವು ಅಜ್ಞಾನದಿಂದ ಇದಿರಿಸಿ ಬಂದೆವು. ಇದು ಮುಂದೆ ನಮ್ಮ ಮಹಾಭಯಕ್ಕೆ ಕಾರಣವಾಗಿದೆ. ದೊಡ್ಡ ಹತ್ತಿಯರಾಶಿ ಯಲ್ಲಿ ವ್ಯಾಪಿಸಿ ಪ್ರಬಲವಾಗಿ ಉರಿಯುತ್ತಿರುವ ಬೆಂಕಿಯನ್ನು ಅಡಗಿಸ ಬೇಕೆಂದರೆ ಒಬ್ಬನಿಂದ ಸಾಧ್ಯವೇ? ಅರ್ಜುನನನ್ನು ಇದಿರಿಸುವುದಕ್ಕೆ ನಿನ್ನೊಬ್ಬನಿಂದ ಎಂದಿಗೂ ಸಾಧ್ಯವಿಲ್ಲ. ಆದುದರಿಂದ ನಾವೆಲ್ಲರೂ ಒಟ್ಟಾ ಗಿ ಸೇರಿಯೇ ಆ ಅರ್ಜುನನೊಡನೆ ಯುದ್ಧಕ್ಕೆ ನಿಲ್ಲಬೇಕು. ಬಹಳ ಎಚ್ಚ

ಇಲ್ಲ. ಇಷ್ಟರಲ್ಲಿಯೇ ಹೀಗೆ ನೀನು ನಿನ್ನ ಪರಾಕ್ರಮವನ್ನು ಹೊಗಳಿಕೊಳ್ಳುತ್ತಿರುವೆ. ಬ್ರಾಹ್ಮಣೋತ್ತಮರು ಅನೇಕ ಧರ್ಮಶಾಸ್ತ್ರಗಳನ್ನು ಓದಿರುವುದೇನೋ ನಿಶ್ಚಯವೇ. ಆ ಶಾಸ್ತ್ರಗಳಲ್ಲಿ ಎಲ್ಲಿಯಾದರೂ ಜೂಜಾಟದಿಂದ ಶತ್ರುರಾಜರನ್ನು ಜಯಿಸಬಹುದೆಂದು ಹೇಳಿದೆಯೇನು? ದೊಡ್ಡದೊಡ್ಡ ಯುದ್ಧಗಳನ್ನು ಜಯಿಸಿ, ವಿಶೇಷ ಧನವನ್ನು ಸಂಪಾದಿಸಿ, ಸಮಸ್ತ ಭೂಮಿಯನ್ನು ಜಯಿಸಿದ ವೀರರಾದರೂ ಹೀಗೆ ಜಂಭವನ್ನು ಹೇಳಿಕೊಳ್ಳಲಾರರು. ಅಗ್ನಿಯು ಬಾಯಿಂದಾಡದೆ ಪದಾರ್ಥಗಳನ್ನು ಪಕ್ವಮಾಡುವನು. ಸೂರ್ಯನು ನಿಶ್ಶಬ್ದವಾಗಿಯೇ ತನ್ನ ಪ್ರಕಾಶವನ್ನು ತೋರಿಸುವನು. ಈ ಭೂಮಿಯುಕೂಡ ಚರಚರಾತ್ಮಕವಾದ ಈ ಸಮಸ್ತ ಪ್ರಪಂಚವನ್ನೂ ಬಾಯಿಂದ ಮಾತಾಡದೆ ಧರಿಸುತ್ತಿರುವುದು. ಬ್ರಾಹ್ಮಣರಾದ ನಮಗೆ ಭೋಜನದಲ್ಲಿಯೇ ಕೌಶಲವೇ ಹೊರತು ಯುದ್ಧದಲ್ಲಿಲ್ಲವೆಂದು ಹೇಳಿದೆಯಲ್ಲವೇ? ನಿನಗಾದರೂ ಯುದ್ಧಕ್ಕೆ ಅಧಿಕಾರವೆಲ್ಲಿಯದು? ನಿನ್ನ ಜಾತಿ ಯಾವುದು? ಮಹರ್ಷಿಗಳಿಂದ ಬ್ರಾಹ್ಮಣಾದಿ ಚತುರ್ವರ್ಣಗಳಿಗೆ ಬೇರೆಬೇರೆ ವಿಧವಾದ ಕರ್ಮಗಳು ವಿಧಿಸಲ್ಪಟ್ಟಿವೆ. ಕೆಲವರಿಗೆ ಧನವನ್ನು ಪಡೆಯುವುದಕ್ಕೂ ಆ ಕರ್ಮಗಳೇ ಸಾಧನವೆನಿಸಿವೆ. ಆ ಕರ್ಮಗಳಿಂದ ತಾನು ದೂಷಿತನಾಗದಂತೆ ಅವುಗಳನ್ನು ನಡೆಸಬೇಕು. ಇಂತಹ ಕರ್ಮಗಳನ್ನು ಮಹರ್ಷಿಗಳು ಅವರವರಿಗೆ ಬೇರೆಬೇರೆಯಾಗಿ ವಿಧಿಸಿರುವರು. ಬ್ರಾಹ್ಮಣನಿಗೆ ವೇದಾಧ್ಯಯನ, ಯಜನ, ಯಾಜನಗಳಿಗೆ ಅಧಿಕಾರವುಂಟು. ಕ್ಷತ್ರಿಯನು ಸಮೃದ್ಧವಾದ ಧನವನ್ನು ಸಂಪಾದಿಸಿ ತಂದು ಯಾಗಮಾಡಬಹುದು. ಅವನು ಇತರರಿಂದ ಯಾಗಮಾಡಿಸಬಾರದು. ವೈಶ್ಯನು ಧನವನ್ನು ಸಂಗ್ರಹಿಸಿ ಕೃಷಿವಾಣಿಜ್ಯಗಳನ್ನು ನಡೆಸಬಹುದು. ಶೂದ್ರನು ಈ ಮೂರು ವರ್ಣದವರಿಗೆ ಶುಶ್ರೂಷಾದಿಗಳನ್ನು ಮಾಡುತ್ತಾ ಸಹಾಯಕನಾಗಿರಬೇಕು. ಶೂದ್ರನು ವೈತಸವೃತ್ತಿಯನ್ನು ಹಿಡಿದು, ಇರರ ಮೂರು ವರ್ಣದವರಿಗೆ ಯಾವಾಗಲೂ ತಗ್ಗಿ ನಡೆಯುತ್ತಿರಬೇಕು. ಈ ಶಾಸ್ತ್ರವಿಧಿಗನುಸಾರವಾಗಿ ನಡೆದೇ ಅನೇಕರಾಜರು ಮಹಾಭಾಗ್ಯವನ್ನು ಪಡೆದು, ದೊಡ್ಡ ಭೂಮಿಯನ್ನು ಜಯಿಸಿ, ಅನೇಕ ಯಜ್ಞಗಳನ್ನು ನಡೆಸಿರುವರು. ಓ ಸೂತಾ! ಮೇಲೆ ಹೇಳಿದ ಜಾತಿ

ರನ್ನು ಜಯಿಸಿದಂತೆಯೂ, ಅವರಿಂದ ಇಂದ್ರಪ್ರಸ್ಥವನ್ನು ಕಿತ್ತುಕೊಂಡಂತೆಯೂ, ದ್ರೌಪದಿಯನ್ನು ಸಭೆಗೆ ಎಳೆದುತಂದಂತೆಯೂ, ಈಗಲೂ ಅರ್ಜುನನೊಡನೆ ಯುದ್ಧಮಾಡುವುದಾದರೆ ಮಾಡು. ಇದೋ! ನಿನಗೆ ಒಳ್ಳೆಯ ಮಂತ್ರಾಲೋಚನೆಗಳನ್ನು ಹೇಳತಕ್ಕ ನಿನ್ನ ಮಾವನು ಸಮೀಪದಲ್ಲಿರುವನು. ಇವನು ಒಳ್ಳೇ ಪ್ರಾಜ್ಞನು. ಕ್ಷತ್ರಧರ್ಮವನ್ನೆಲ್ಲ ತಿಳಿದವನು. ಕಪಟದ್ಯೂತವನ್ನಾಡುವುದರಲ್ಲಿ ನಿಪುಣನು. ಹಿಂದೆ ಜೂಜಿನ ಸಭೆಯಲ್ಲಿ ಹೇಗೋ ಹಾಗೆ, ಈಗಲೂ ನಿನ್ನ ಜಯಕ್ಕಾಗಿ ಈ ನಿನ್ನ ಮಾವನನ್ನೇ ಮುಂದೆ ಬಿಡು. ಅವನು ಅದೇತರದ ಯುದ್ಧವನ್ನು ಮಾಡಲಿ. ಓ ಕೌರವರಾಜಾ! ಅರ್ಜುನನ ಕೈಯಲ್ಲಿರುವ ಗಾಂಡೀವವು ದಾಳಗಳನ್ನೆಸೆಯುವುದೆಂದು ತಿಳಿಯಬೇಡ. ಅದು ಈಗ ಕೃತ ದ್ವಾಪರಗಳನ್ನೆಸೆಯುವುದಕ್ಕಾಗಿ ಬಂದಿಲ್ಲ. (ದಾಳದಲ್ಲಿ ನಾಲ್ಕು ಮತ್ತು ಎರಡು ಸಂಖ್ಯೆಗಳನ್ನು ತೋರಿಸತಕ್ಕ ಪಕ್ಕಗಳಿಗೆ ಕ್ರಮವಾಗಿ ಕೃತ ದ್ವಾಪರಗಳೆಂದು ಹೆಸರು) ಉರಿಯುತ್ತಿರುವ ವಿಧವಿಧಗಳಾದ ತೀಕ್ಷ್ಣಬಾಣಗಳನ್ನು ಎಸೆಯುವುದಕ್ಕಾಗಿ ಬಂದಿದೆ. ಆ ಗಾಂಡೀವದಿಂದ ಪ್ರಯೋಗಿಸಲ್ಪಟ್ಟ ಹದ್ದಿನ ಗರಿಗಳುಳ್ಳ ಮತ್ತು ತೇಜೋವಿಶಿಷ್ಟಗಳಾದ ಬಾಣಗಳಿಗೆ ನಡುವೆ ಎಲ್ಲಿಯೂ ಅಡ್ಡಿಯಿರುವುದಿಲ್ಲ. ಪರ್ವತಗಳನ್ನಾದರೂ ಭೇದಿಸಿಕೊಂಡು ಹೋಗಬಲ್ಲುವು. ಯಮನಾಗಲಿ, ವಾಯುವಾಗಲಿ, ಮೃತ್ಯುವಾಗಲಿ, ಬಡಬಾಗ್ನಿಯಾಗಲಿ ಒಂದುವೇಳೆ ತಮಗೆ ಬಲಿಯಾಗಿ ಸಿಕ್ಕಿದವರನ್ನು ಸ್ವಲ್ಪಮಟ್ಟಿಗೆ ಉಳಿಸಿದರೂ ಉಳಿಸಬಹುದು. ಅರ್ಜುನನು ಕೋಪಗೊಂಡರೆ ಉಳಿಸಲಾರನು. ಕೌರವರಾಜಾ! ನಿನ್ನ ಶಕುನಿಮಾವನೊಡನೆ ಸೇರಿ, ಆ ಸಭೆಯಲ್ಲಿ ಜೂಜಾಡಿದಂತೆ ಈಗಲೂ ಅವನೊಡನೆಯೇ ಸೇರಿ ಅದೇ ತರದ ಯುದ್ಧವನ್ನಾರಂಭಿಸು. ಆಗ ನೀನು ಸುರಕ್ಷಿತವಾಗಿ ಬದುಕಿಹೋಗಬಹುದು. ಇಲ್ಲಿ ನಿನ್ನ ಆಚಾರ್ಯನು ಯಥೇಷ್ಟವಾಗಿ ಯುದ್ಧಮಾಡಲಿ! ನಾನುಮಾತ್ರ ಅರ್ಜುನನಿಗಿದಿರಾಗಿ ಯುದ್ಧಮಾಡತಕ್ಕವನಲ್ಲ. ಆ ಹಸುಗಳಿರತಕ್ಕ ಸ್ಥಳಕ್ಕೆ ಮತ್ಸ್ಯರಾಜನೇನಾದರೂ ಬಂದಪಕ್ಷದಲ್ಲಿ, ಆಗ ಅವನನ್ನು ನಾವು ನೋಡಿಕೊಳ್ಳುವೆವು" ಎಂದನು.

ಇದು ಐವತ್ತನೆಯ ಅಧ್ಯಾಯವು.

ಭೀಷ್ಮನು ಕೋಪಗೊಂಡ ಅಶ್ವತ್ಥಾಮನಿಗೆ ಸಮಾಧಾನವನ್ನು ಹೇಳಿದುದು. ದುರ್ಯೋಧನಕರ್ಣರಿಬ್ಬರೂ ಭೀಷ್ಮನ ಮಾತಿಗಾಗಿ ಕೃಪದ್ರೋಣರಲ್ಲಿ ಕ್ಷಮೆಯನ್ನು ಕೇಳಿದುದು.

ಓ ಜನಮೇಜಯರಾಜಾ! ಆಗ ಭೀಷ್ಮಾಚಾರ್ಯನು ಅಶ್ವತ್ಥಾಮನ ಕೋಪವನ್ನು ನೋಡಿ, ಆ ಸಮಸ್ತ ಕೌರವಸಭೆಯಮುಂದೆ ದುರ್ಯೋಧನನನ್ನು ಕುರಿತು, ಧರ್ಮಯುಕ್ತವಾದ ಮಾತಿನಿಂದ ಹೀಗೆಂದು ಹೇಳುವನು. "ಓ ದುರ್ಯೋಧನರಾಜಾ! ಈ ದ್ರೋಣಾಚಾರ್ಯನು ನ್ಯಾಯವಾಗಿಯೇ ಹೇಳಿದನು. ಕೃಪಾಚಾರ್ಯನೂ ಚೆನ್ನಾಗಿ ಯೋಚಿಸಿಯೇ ಹೇಳಿರುವನು. ಆಚಾರ್ಯಪುತ್ರನಾದ ಈ ಅಶ್ವತ್ಥಾಮನೂಕೂಡ ವಿಷಯಗಳನ್ನು ಚೆನ್ನಾಗಿ ಪರ್ಯಾಲೋಚಿಸಿ ನಿಶ್ಚಯವನ್ನೇ ನುಡಿದಿರುವನು. ಇವರೆಲ್ಲರೂ ದೂರದೃಷ್ಟಿಯಿಂದ ವಿಷಯಗಳನ್ನು ಚೆನ್ನಾಗಿ ಆಲೋಚಿಸಿರುವರು. ಈ ಕರ್ಣನಾದರೋ, ಕೇವಲ ಕ್ಷತ್ರಧರ್ಮವನ್ನು ಹಿಡಿದು, ಯುದ್ಧಕ್ಕಾಗಿ ಆತುರಪಡುತ್ತಿರುವನು. ವಿವೇಕಿಯಾದವನು ಈ ಆಚಾರ್ಯನ ಮಾತನ್ನು ಎಂದಿಗೂ ನಿರಾಕರಿಸಲಾರನು. ರಾಜಾ! ದೇಶಕಾಲಗಳನ್ನು ಚೆನ್ನಾಗಿ ಯೋಚಿಸಿ ಯುದ್ಧಮಾಡಬೇಕೆಂಬುದೇ ನನಗೂ ಉಚಿತವೆಂದು ತೋರಿದೆ. ಸೂರ್ಯಸಮಾನ ತೇಜಸ್ಸುಳ್ಳ ಮತ್ತು ಶಸ್ತ್ರಾಸ್ತ್ರಸಮೃದ್ಧಿಯುಳ್ಳ ಐದುಮಂದಿ ಪ್ರಬಲಶತ್ರುಗಳಿದ್ದು, ಅಂತಹ ಶತ್ರುಗಳಿಗೆ ಅಭ್ಯುದಯಕಾಲವು ತೋರಿಬಂದಾಗ, ವಿವೇಕಿಯಾದ ಯಾವನಿಗೆ ತಾನೇ ಬುದ್ಧಿಯು ಕಳವಳಿಸದಿರುವುದು. ಧರ್ಮವನ್ನು ಬಲ್ಲವರಾಗಿದ್ದರೂ ಕೂಡ ಕಾರ್ಯಾಲೋಚನೆಯಲ್ಲಿ ಎಲ್ಲರಿಗೂ ಬುದ್ಧಿಯು ಚಂಚಲವಾಗುವುದು ಸಹಜವು. ಅಂತಹ ಸಂದರ್ಭದಲ್ಲಿ ರಾಜನಿಗೆ ಕಾರ್ಯಾಕಾರ್ಯನಿಶ್ಚಯವು ತೋರುವುದಿಲ್ಲ. ಎಲೈ ಕೌರವವೀರರೇ! ಧೃತರಾಷ್ಟ್ರಪುತ್ರನಾದ ಈ ದುರ್ಯೋಧನನಾದರೂ, ವಿವೇಕಿಯಂತೆ ಕಾಣುವುದಿಲ್ಲ. ಧನಂಜಯನನ್ನು ಕಣ್ಣೆದಿರಾಗಿ ಕಂಡೂ, ತತ್ವವನ್ನು ತಿಳಿದುಕೊಳ್ಳಲಾರದೆ ಹೋದನು. ಬುದ್ಧಿಯಿಲ್ಲದವನಂತೆ, ಕೇವಲ ಕೋಪಕ್ಕೆ ವಶನಾಗಿ, ಆ ಅರ್ಜುನನ ವಾಸನೆಯನ್ನಾದರೂ ಕಂಡುಕೊಳ್ಳಲಾರದೆ, ಆತುರಪಡುತ್ತಿರುವನು" ಎಂದು

ಯೂಥಕಲಹವೆಂಬುದೇ ಎಲ್ಲಕ್ಕಿಂತಲೂ ಅತಿ ಪಾಪಿಷ್ಠ (ಕ್ರೂರ) ವೆನಿಸಿದೆ'' ಎಂದನು.

ಆಗ ಅಶ್ವತ್ಥಾಮನು "ಪುರುಷಶ್ರೇಷ್ಠಾ! ಈ ಸಮಯದಲ್ಲಿ ಇಂತಹ ಕಲಹದ ಮಾತುಗಳನ್ನಾಡುವುದೇನೋ ಉಚಿತವಲ್ಲವೆಂಬುದನ್ನು ನಾವೂ ಬಲ್ಲೆವು. ಆದರೆ, ನಮ್ಮ ತಂದೆಯು ಕೋಪಾವೇಶದಿಂದ ಇಲ್ಲಿ ಆ ಅರ್ಜುನನ ಗುಣಗಳನ್ನು ಎತ್ತಿಹೇಳಿದನು. ಆದರೇನು? ಶತ್ರುವಾದರೂ ಅವನಲ್ಲಿರುವ ಗುಣಗಳನ್ನು ಹೇಳಿಯೇ ತೀರಬೇಕು. ಗುರುವಾಗಿದ್ದರೂ ಅವನಲ್ಲಿರುವ ದೋಷಗಳನ್ನು ಹೇಳದೆ ಬಿಡಬಾರದು. ಶಿಷ್ಯನ ವಿಷಯದಲ್ಲಿಯೂ, ಪುತ್ರನ ವಿಷಯದಲ್ಲಿಯೂ, ಎಲ್ಲಾ ಸಂದರ್ಭದಲ್ಲಿಯೂ, ಸರ್ವಪ್ರಯತ್ನದಿಂದಲೂ ಹಿತವನ್ನೇ ಹೇಳಬೇಕಾದುದು ಅವಶ್ಯವು. ಆದುದಾಯಿತು! ಈಗ ಆಚಾರ್ಯನು ಕ್ಷಮೆಯನ್ನು ತಂದುಕೊಳ್ಳಲಿ! ಎಲ್ಲರೂ ಶಾಂತಿಯನ್ನು ವಹಿಸಲಿ! ಮುಖ್ಯವಾಗಿ ಈಗ ಆಚಾರ್ಯನು ವಿರೋಧಿಸದಿದ್ದರೆ ಕಾರ್ಯವೆಲ್ಲ ಅನುಕೂಲಿಸಿದಂತೆಯೇ'' ಎಂದನು. ಓ ಜನಮೇಜಯರಾಜಾ! ಈ ಮಾತನ್ನು ಕೇಳಿದಮೇಲೆ, ದುರ್ಯೋಧನನೂ, ಕರ್ಣನೂ, ಭೀಷ್ಮನನ್ನು ಮುಂದಿಟ್ಟುಕೊಂಡು, ದ್ರೋಣನಲ್ಲಿಯೂ, ಕೃಪನಲ್ಲಿಯೂ ಮನ್ನಣೆಯನ್ನು ಕೇಳಿಕೊಂಡರು. ಆಗ ದ್ರೋಣನು ಅವರನ್ನು ಕುರಿತು "ಈ ಭೀಷ್ಮನು ಮೊದಲು ಹೇಳಿದ ಒಂದು ಮಾತಿನಿಂದಲೇ ನಾನು ಪ್ರಸನ್ನನಾಗಿ ಬಿಟ್ಟೆನು. ಇನ್ನು ಮುಂದಿನ ಕಾರ್ಯವನ್ನು ನೋಡಿರಿ! ಮುಖ್ಯವಾಗಿ ಈ ಯುದ್ಧದಲ್ಲಿ ಪಾರ್ಥನು ತನ್ನ ಸಾಹಸದಿಂದಾಗಲಿ, ಅಥವಾ ನಮ್ಮ ಅನವದಿಂದಾಗಲಿ, ಈ ದುರ್ಯೋಧನನ ಮೇಲೆ ಬೀಳದಂತೆ ನಾವು ಎಚ್ಚರಗೊಂಡಿರಬೇಕು. ವನವಾಸಕಾಲವೆಲ್ಲ (ಅಜ್ಞಾತವಾಸಾವಧಿಯೊಡನೆ) ಮುಗಿಯದಿದ್ದ ಪಕ್ಷದಲ್ಲಿ ಅರ್ಜುನನು ಇಲ್ಲಿ ಕಾಣಿಸಿಕೊಳ್ಳಲಾರನು. ತನ್ನ ಭಾಗ್ಯವನ್ನೆಲ್ಲ ಕಳೆದುಕೊಂಡ ಆ ಪಾರ್ಥನು ಈಗ ತಾಳ್ಮೆಯಿಂದ ಸುಮ್ಮನಿರಲಾರನು. ಆದುದರಿಂದ ಬಹುಕಾಲದಿಂದ ಕಾದಿದ್ದ ಧನಂಜಯನು ನಮ್ಮ ರಾಜನನ್ನು ಬಂದು ಹಿಡಿಯದಂತೆಯೂ, ನಮ್ಮ ಸೈನ್ಯವನ್ನು ಸೋಲಿಸದಂತೆಯೂ, ನಾವು ನೀತಿಯನ್ನು ಹಿಡಿಯು

ಮೇಲೆ ಹೋಗಿದ್ದರೋ, ಅವೆಲ್ಲವನ್ನೂ ಅವರು ಸರಿಯಾಗಿ ಅನುಷ್ಠಿಸಿ, ತಮ್ಮ ಪ್ರತಿಜ್ಞೆಯು ಪೂರೈಸಿತೆಂಬುದನ್ನು ತಿಳಿದೇ, ಈಗ ಹೊರಗೆ ಬಂದಿರುವರು. ಆ ಐದುಮಂದಿಯೂ ಮಹಾತ್ಮರು! ಧರ್ಮಾರ್ಥಗಳನ್ನು ಚೆನ್ನಾಗಿ ತಿಳಿದವರು! ಧರ್ಮಮೂರ್ತಿಯಾದ ಯುಧಿಷ್ಠಿರನೇ ಅವರಿಗೆ ನಿಯಾಮಕನಾಗಿರುವಾಗ, ಅವರು ಹೇಗೆತಾನೇ ಧರ್ಮದಲ್ಲಿ ದಾರಿತಪ್ಪಿ ನಡೆಯುವರು? ಆ ಧರ್ಮರಾಜನಾದರೋ ಕಾಮವಶದಿಂದಾಗಲಿ, ಕ್ರೋಧವಶದಿಂದಾಗಲಿ, ಲೋಭದಿಂದಾಗಲಿ, ಇವುಗಳಿಂದುಂಟಾದ ಭಯದಿಂದಾಗಲಿ, ಸ್ನೇಹದಿಂದಾಗಲಿ, ಮೋಹದಿಂದಾಗಲಿ, ಎಂದಿಗೂ ಧರ್ಮವನ್ನು ಮೀರಿಹೋಗಲಾರನು. ಆ ಕುಂತೀಪುತ್ರರು ಆಶೆಯಿಲ್ಲದವರು. ಬೇರೊಬ್ಬರಿಂದ ಸಾಧ್ಯವಿಲ್ಲದ ಕಾರ್ಯವನ್ನು ಮಾಡಿದವರು. ರಾಜ್ಯವನ್ನಾದರೂ ಅವರು ಅಧರ್ಮದಿಂದ ಪಡೆಯಲಪೇಕ್ಷಿಸುವವರಲ್ಲ. ಇದಕ್ಕೆ ಮೊದಲೇ ಅವರು ನಮ್ಮಮೇಲೆ ತಮ್ಮ ಪರಾಕ್ರಮವನ್ನು ತೋರಿಸುವುದಕ್ಕೆ ಆತುರವುಳ್ಳವರಾಗಿದ್ದರು. ಆದರೆ, ಧರ್ಮಪಾಶಕ್ಕೆ ಕಟ್ಟುಬಿದ್ದು, ತಮ್ಮ ಕ್ಷತ್ರಿಯವ್ರತವನ್ನು ಮೀರಿ ನಡೆಯಲಿಲ್ಲ. ಸುಳ್ಳೆಂಬುದು ಪಾಂಡವರಲ್ಲಿ ಯಾವಾಗಲೂ ಪರಾಭವವನ್ನೇ ಹೊಂದುತ್ತಿರುವುದು. ಅವರು ಮರಣವನ್ನಾದರೂ ಬಯಸುವರೇ ಹೊರತು, ಅನೃತವನ್ನು ಆದರಿಸುವವರಲ್ಲ. ಆದರೆ ಉಚಿತ ಕಾಲದಲ್ಲಿ ಅವರು ತಮ್ಮ ಕಾರ್ಯಸಾಧನೆಯನ್ನುಮಾತ್ರ ಬಿಡುವವರಲ್ಲ. ಆ ಸಂದರ್ಭದಲ್ಲಿ ವಜ್ರಪಾಣಿಯಾದ ಇಂದ್ರನೇ ಬೆಂಬಲವಾಗಿ ಬಂದರೂ ಅವರು ವೈರಿಗಳನ್ನು ನಿಗ್ರಹಿಸದೆ ಬಿಡುವವರಲ್ಲ. ಅಂತಹ ಮಹಾವೀರ್ಯವುಳ್ಳವರು ಆ ಪಾಂಡವರೆಂದು ತಿಳಿ! ಹಾಗಿದ್ದರೂ ಈಗ ನಾವು ಈ ಯುದ್ಧದಲ್ಲಿ ಅರ್ಜುನನನ್ನಿದಿರಿಸಬೇಕಾದುದವಶ್ಯವು. ಆದುದರಿಂದ ತತ್ಕಾಲಕ್ಕೆ ನಮಗೆ ಶ್ರೇಯಸ್ಕರವಾಗಿಯೂ, ಲೋಕದಲ್ಲಿ ಸಾಧುಗಳಿಂದ ಅನುಷ್ಠಿತವಾಗಿಯೂ ಇರುವ ಮಾರ್ಗವನ್ನು ನಾವು ಶೀಘ್ರದಲ್ಲಿಯೇ ಅವಲಂಬಿಸಬೇಕು. ನಮ್ಮ ಪ್ರಯೋಜನವು ಶತ್ರುವಿನ ಕೈವಶವಾಗದಂತೆ ನೋಡಿಕೊಳ್ಳಬೇಕು. ಓ ದುರ್ಯೋಧನಾ! ಯುದ್ಧದಲ್ಲಿ ಯಾವಾಗಲೂ ಜಯವೇ ಉಂಟಾಗುವುದೆಂದು ನಾವು ಎಂದಿಗೂ ಎಣಿಸಬಾರದು. ಈಗಲಾದರೋ, ಅರ್ಜುನನೇ ನಮ್ಮಿದಿರಾಗಿ ಬಂದುಬಿಟ್ಟಿರುವನು. ಇಬ್ಬರಿಗೆ

ತ್ತೊಂದು ಕಾಲುಭಾಗವು ಗೋವುಗಳನ್ನು ಸಾಗಿಸಿಕೊಂಡು ಹೋಗಲಿ! ಉಳಿದ ಅರ್ಧಭಾಗದಿಂದಲೇ ನಾವು ಇಲ್ಲಿ ಪಾಂಡವರನ್ನಿದಿರಿಸುವೆವು. ನಾನೂ, ಭೀಷ್ಮನೂ, ಕರ್ಣನೂ, ಕೃಪನೂ, ನನ್ನ ಮಗನಾದ ಅಶ್ವತ್ಥಾಮನೂ, ನಾವೈದುಮಂದಿಯೇ ಇಲ್ಲಿ ಅರ್ಜುನನೊಡನೆ ಯುದ್ಧಕ್ಕೆ ನಿಲ್ಲುವೆವು. ಇದರಿಂದ ನಮ್ಮ ರಾಜನಿಗೂ ಅಪಾಯವೇನೂ ಇರದು. ಅವನು ಅಧೈರ್ಯಕ್ಕಾಗಲಿ, ಅವಮಾನಕ್ಕಾಗಲಿ ಈಡಾಗುವ ಸಂಭವವೂ ತಪ್ಪುವುದು. ಇಲ್ಲಿ ನಮ್ಮಿದಿರಾಗಿ ತಿರುಗಿ ವಿರಾಟನೇ ಬಂದರೂ, ಸಾಕ್ಷಾದ್ದೇವೇಂದ್ರನೇ ಬಂದರೂ, ಸಮುದ್ರವೇಲೆಯು ಸಮುದ್ರವೇಗವನ್ನು ಹೇಗೋಹಾಗೆ ನಾನು ಅವರನ್ನು ತಡೆಯುವೆನು" ಎಂದನು. ಓ ಜನಮೇಜಯರಾಜಾ! ಮಹಾತ್ಮನಾದ ದ್ರೋಣನ ಮಾತು ಎಲ್ಲರಿಗೂ ಉಚಿತವೆಂದು ತೋರಿತು. ದುರ್ಯೋಧನನೂ ಅದಕ್ಕೆ ಸಮ್ಮತಿಸಿ, ಅದರಂತೆಯೇ ನಿರ್ಧರಿಸಿದನು. ಭೀಷ್ಮನು ಮೊದಲು ದುರ್ಯೋಧನನನ್ನು ಕಾಲುಪಾಲು ಸೈನ್ಯದೊಡನೆ ಹೊರಡಿಸಿ, ಬೇರೊಂದು ಸೈನ್ಯವಿಭಾಗದೊಡನೆ ಗೋವುಗಳನ್ನೂ ಕಳುಹಿಸಿಬಿಟ್ಟನು. ಆಮೇಲೆ ಭೀಷ್ಮನು ದ್ರೋಣನನ್ನು ಕುರಿತು, "ಆಚಾರ್ಯಾ! ನೀವು ಈ ವ್ಯೂಹಕ್ಕೆ ಮಧ್ಯಭಾಗದಲ್ಲಿರಬೇಕು. ಕೃಪನೂ, ಅಶ್ವತ್ಥಾಮನೂ ಕ್ರಮವಾಗಿ ಎಡಬಲಪಾರ್ಶ್ವಗಳನ್ನು ರಕ್ಷಿಸುತ್ತಿರಲಿ! ಶತ್ರುದುರ್ಜಯರೂ, ಬಲಾಢ್ಯರೂ ಆದ ವಿಕರ್ಣ ದುರ್ಮುಖ ಶಕುನಿ ದುಸ್ಸಹರೆಂಬೀ ನಾಲ್ವರೂ ದ್ರೋಣನ ಅಕ್ಕಪಕ್ಕಗಳಲ್ಲಿದ್ದು, ಅವನ ಪಾರ್ಶ್ವರಕ್ಷಕರಾಗಿರಲಿ. ಸೂತಪುತ್ರನಾದ ಕರ್ಣನು ದೃಢವಾದ ಯುದ್ಧಕವಚವನ್ನು ತೊಟ್ಟು ಎಲ್ಲರಿಗೂ ಮುಂದಾಗಿ ನಿಲ್ಲಲಿ. ನಾನು ಸಮಸ್ತ ಸೈನ್ಯಕ್ಕೂ ರಕ್ಷಕನಾಗಿ ಹಿಂಭಾಗದಲ್ಲಿ ನಿಲ್ಲುವೆನು. ಶೂರರೂ, ಮಹಾಧನುರ್ಧಾರಿಗಳೂ, ಮಹಾಬಲಾಢ್ಯರೂ ಆದ ಮಹಾರಥರೆಲ್ಲರೂ ಸೇರಿ ಸರ್ವಪ್ರಯತ್ನದಿಂದ ಈಗ ಬಂದಿರುವ ಅರ್ಜುನನನ್ನು ಯುದ್ಧದಲ್ಲಿ ಇದಿರಿಸಬೇಕು" ಎಂದನು. ಭೀಷ್ಮನು ಶತ್ರುದುರ್ಭೇದ್ಯಗಳಾದ ವಜ್ರಗರ್ಭ, ವ್ರೀಹಿಮುಖ, ಪದ್ಮ, ಚಂದ್ರಾರ್ಧಮಂಡಲವೆಂಬ ಸೇನಾವ್ಯೂಹಗಳನ್ನು ಕಟ್ಟಿ, ಅದರ ಹಿಂಭಾಗದಲ್ಲಿ ತಾನು ಆಯುಧಧಾರಿಯಾಗಿ, ಸುವರ್ಣ

ಮಯವಾದ ತನ್ನ ತಾಲಧ್ವಜ (ತಾಳೆಯ ಮರದ ಗುರುತುಳ್ಳ ಧ್ವಜ) ವನ್ನೇರಿಸಿ ರಥದಲ್ಲಿ ಕುಳಿತಿದ್ದನು.

ಇದು ಐವತ್ತೆರಡನೆಯ ಅಧ್ಯಾಯವು.

ಇಂದ್ರನು ಕುರುಪಾಂಡವರ ಈ ಯುದ್ಧವನ್ನು ನೋಡ
ಬೇಕೆಂದು ದೇವಗಣಗಳೊಡನೆ ಸುದರ್ಶನವೆಂಬ
ವಿಮಾನವನ್ನೇರಿ ಬಂದುದು.

ಹೀಗೆ ಕುರುಪಾಂಡವರಿಗೆ ಯುದ್ಧಾರಂಭವಾದ ಸಂಗತಿಯನ್ನು ಕೇಳಿ ದೇವೇಂದ್ರನು, ಸಮಸ್ತ ದೇವಗಣಗಳನ್ನೂ ಸುದರ್ಶನವೆಂಬ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಅರ್ಜುನನಿದ್ದ ಸ್ಥಳಕ್ಕೆ ಬಂದು ಸೇರಿದನು. ಆ ವಿಮಾನದ ಅಂದವನ್ನು ಕೇಳಬೇಕೆ? ನಡುವೆ ಸಾವಿರಕಂಬಗಳು! ಅವರ ನಡುವೆ ದೊಡ್ಡದೊಂದು ದೇವಸಭೆಯು ನೆರೆದಿರುವುದು. ದ್ವಾದಶಾದಿತ್ಯರೊಂದು ಕಡೆ! ಅಷ್ಟವಸುಗಳೊಂದು ಕಡೆ! ಅಶ್ವಿನೀದೇವತೆಗಳೊಂದು ಕಡೆ! ಮರುದ್ಗಣಗಳೊಂದು ಕಡೆ! ಹೀಗೆ ನೆರೆದಿರುವರು. ಆ ವಿಮಾನಕ್ಕೆ ಸುವರ್ಣದಿಂದಲೂ, ಸ್ಫಟಿಕದಿಂದಲೂ ಚಿತ್ರಿತಗಳಾದ ಬಿಳಿಯ ಚಕ್ರಗಳು! ದಿವ್ಯರೂಪವುಳ್ಳ ವಿಚಿತ್ರವಾದ ಛತ್ರಗಳು! ಆ ಛತ್ರಗಳಲ್ಲಿ ರತ್ನಮಯವಾದ ವಿಚಿತ್ರಾಲಂಕಾರಗಳು ಶೋಭಿಸುತ್ತಿರುವುವು. ನಾನಾವಿಧವಾದ ಆಕಾರಗಳಿಂದ ಕೂಡಿದ ಮಂಗಳಕರಗಳಾದ ಆ ಛತ್ರಗಳು, ಬೇರೆ ಬೇರೆ ಸಾಲಾಗಿ ದಿವ್ಯಕಾಂತಿಯಿಂದ ಬೆಳಗುತ್ತಿರುವುವು. ಇದಲ್ಲದೆ ಆ ವಿಮಾನದಲ್ಲಿ ಇಂದ್ರ, ಅಗ್ನಿ, ಸೋಮ, ಯಮ, ವರುಣ, ಧಾತೃ, ವಿಧಾತೃ, ಮಿತ್ರ, ಕುಬೇರ, ವಿಷ್ಣು, ಸವಿತೃ ಮೊದಲಾದ ಅನೇಕ ದೇವಶ್ರೇಷ್ಠರ ಸುವರ್ಣಮಯಮಾಲಿಕೆಗಳೂ, ನಾನಾಬಗೆಯ ಪುಷ್ಪಹಾರಗಳೂ ವಿಚಿತ್ರಕಾಂತಿಯಿಂದ ಬೆಳಗುತ್ತಿರುವುವು. ದಿವ್ಯರತ್ನಗಳಿಂದಲಂಕೃತವಾದ ಆ ವಿಮಾನವಲ್ಲಿ, ದಿವ್ಯಗಂಧಯುಕ್ತಗಳಾದ ಮಾಲಿಕೆಗಳು ತೂಗಾಡುತ್ತಿರುವುವು. ಆ ವಿಮಾನಕ್ಕೆ ನಾನಾಕಡೆಯಿಂದಲೂ ದಿವ್ಯಗಂಧ ವಿಶಿಷ್ಟವಾದ ಗಾಳಿಯು ಬೀಸುತ್ತಿರುವುದು. ಋತುಗಳೆಲ್ಲವೂ ಆಕಾರದೊಡನೆ ತಾವಾಗಿಯೇ ಪುಷ್ಪ

ಅರ್ಜುನನು ಸೇನಾಮಧ್ಯದಲ್ಲಿ ದುರ್ಯೋಧನನಿಲ್ಲದುದನ್ನು ನೋಡಿ ಅವನನ್ನು ಕಂಡುಹಿಡಿಯುವುದಕ್ಕಾಗಿ ಉತ್ತರನಿಗೆ ರಥವನ್ನು ಬಿಡುವಂತೆ ಹೇಳಿದುದು. ಎರಡು ಬಾಣಗಳ ಮೂಲಕವಾಗಿ ದ್ರೋಣಾದಿಗಳ ಪಾದಕ್ಕೆ ನಮಸ್ಕರಿಸಿ, ಕುಶಲಪ್ರಶ್ನೆಯನ್ನೂ ಮಾಡಿದುದು.

ಓ ಜನಮೇಜಯರಾಜಾ! ಹೀಗೆ ಕೌರವಸೈನ್ಯದ ಮಹಾರಥರು ತಮ್ಮ ಸೇನೆಯನ್ನು ವ್ಯೂಹಗಳಾಗಿ ನಿಲ್ಲಿಸಿರಲು, ಅತ್ತಲಾಗಿ ಅರ್ಜುನನು ದಿಕ್ಕುಗಳೆಲ್ಲ ಮೊಳಗುವಂತಿರುವ ರಥಘೋಷದೊಡನೆ ವೇಗದಿಂದ ಮುಂದೆ ಬರುತ್ತಿದ್ದನು. ಇಷ್ಟರಲ್ಲಿಯೇ ಇತ್ತಲಾಗಿ ಕೌರವಸೈನಿಕರಿಗೆ ಅರ್ಜುನನ ಧ್ವಜಾಗ್ರವು ಸ್ಪಷ್ಟವಾಗಿ ಗೋಚರಿಸಿತು. ಅಲ್ಲಿದ್ದ ವಾನರಧ್ವಜವನ್ನು ನೋಡಿದರು. ಅರ್ಜುನನ ರಥಘೋಷವೂ, ಆ ಅರ್ಜುನನು ಆಗಾಗ ಮಿಡಿಯುತ್ತಿದ್ದ ಗಾಂಡೀವ ಧನುಸ್ಸಿನ ಧ್ವನಿಯೂ ಅವರ ಕಿವಿಗೆ ಬಿದ್ದಿತು. ಅರ್ಜುನನು ಮೂರು ಹರಿದಾರಿಯವರೆಗೆ ಮುಂದೆ ಬಂದು, ಕೌರವರ ಸೈನ್ಯದ ಮುಂಭಾಗವನ್ನು ನೋಡಿ ಉತ್ತರನನ್ನು ಕುರಿತು ಹೀಗೆಂದು ಹೇಳುವನು. “ಉತ್ತರಕುಮಾರಾ! ಇದಕ್ಕೆ ಮೊದಲು ಸೈನ್ಯದ ನಡುವೆ ಇದ್ದ ದುರ್ಯೋಧನನು ಈಗ ಅಲ್ಲಿ ಕಾಣಿಸುವುದಿಲ್ಲ. ಅವನ ಕಡೆಯ ಸೈನಿಕರಾದರೋ, ದಕ್ಷಿಣಭಾಗದ ಸೈನ್ಯದಲ್ಲಿ ಒಂದು ಶಾಖೆಯನ್ನು ತೆಗೆದುಕೊಂಡು, ಉತ್ತರದಿಕ್ಕಿನ ಕಡೆಗಾಗಿ ಹೊರಡುತ್ತಿರುವರು. ಆದುದರಿಂದ ಈಗ ನೀನು ಅನೇಕ ಧನುರ್ಧಾರಿಗಳಿಂದ ರಕ್ಷಿತವಾದ ಈ ರಥಸೈನ್ಯವನ್ನು ಬಿಟ್ಟು, ಆ ಗೋವುಗಳಿರುವ ಸ್ಥಳಕ್ಕಿದಿರಾಗಿ ರಥವನ್ನು ನಡೆಸು. ಅಲ್ಲಿ ಒಂದು ವೇಳೆ ಶತ್ರುವನ್ನು ಕಾಣಬಹುದು. ಆ ಹಸುಗಳಿರುವ ಸ್ಥಳವನ್ನು ಸುತ್ತಿಕೊಂಡು, ದಾಟಿ ಅವುಗಳ ಮುಂದೆ ಹೋಗಿ ಅಲ್ಲಿಂದ ಅವುಗಳನ್ನು ಬೇಗನೆ ಇತ್ತಲಾಗಿ ತಿರುಗಿಸಿಬಿಡುವೆವು. ಓ ಪ್ರಭೂ! ಈ ಕೌರವಸೈನಿಕರು ನಮ್ಮ ಗೋವುಗಳನ್ನು ಅತ್ತಕಡೆಗೆ ತಿರುಗಿಸಿಕೊಂಡು ಹೋಗುವುದರೊಳಗಾಗಿಯೇ ನಾನು ಅವುಗಳನ್ನು ಈ ಕಡೆಗೆ ತಿರುಗಿಸುವೆನು” ಎಂದನು. ಓ ಜನಮೇಜಯರಾಜಾ! ಅರ್ಜುನನು ಹೀಗೆಂದು ಉತ್ತರನಿಗೆ ಹೇಳಿ, ಎಡಪಾರ್ಶ್ವದಿಂದ

ಬೇಗನೆ ರಥವನ್ನು ಬಿಡಿಸಿಕೊಂಡು ಹೋದನು. ಆಮೇಲೆ ತನ್ನಿದಿರಾಗಿ ನಿಂತಿದ್ದ ಗುರುಗಳಾದ ಭೀಷ್ಮಾದಿಗಳನ್ನು ಕಂಡು, ಅವರಿಗೆ ನಮಸ್ಕಾರ ಮಾಡಬೇಕೆಂದುದ್ದೇಶಿಸಿ, ಎರಡೆರಡು ಬಾಣಗಳಿಂದ ಅವರೊಬ್ಬೊಬ್ಬರ ಪಾದಗಳಿಗೂ ಪ್ರಣಾಮಮಾಡಿದನು. ಮೊದಲು ಆಚಾರ್ಯನಾದ ದ್ರೋಣನ ಪಾದಗಳೆರಡಕ್ಕೂ ಪ್ರಣಾಮರೂಪವಾಗಿ ಎರಡು ಬಾಣಗಳನ್ನು ಬಿಟ್ಟನು. ಆಮೇಲೆ ಕೃಪಾಚಾರ್ಯನನ್ನೂ, ಅದರಿಂದಾಚೆಗೆ ಭೀಷ್ಮಾಚಾರ್ಯನನ್ನೂ ಎರಡೆರಡು ಬಾಣಗಳಿಂದ ಅಭಿವಾದನ ಮಾಡಿದನು. ಇವೆಲ್ಲವನ್ನೂ ನೋಡಿ ದ್ರೋಣಾಚಾರ್ಯನು, ತನ್ನ ಕಡೆಯವರನ್ನು ಕರೆದು ಹೀಗೆಂದು ಹೇಳುವನು. “ಮಹಾರಥನಾದ ಈ ಅರ್ಜುನನು ಗಾಂಡೀವವನ್ನು ಹಿಡಿದು ಬಂದಿರುವುದನ್ನು ನೋಡಿದಮೇಲೆ, ಯಾವನೊಬ್ಬನಿಗೂ ಅವನಿಗಿದಿರಾಗಿ ನಿಂತು ಯುದ್ಧಮಾಡಲು ಧೈರ್ಯವಿರದು. ಬಂದವನು ತನ್ನ ಜೀವವನ್ನೂ ರಕ್ಷಿಸಿಕೊಳ್ಳಲಾರನು. ಆ ಅರ್ಜುನನೋ ಮಹಾವೀರನು! ಶೂರನು! ಯುದ್ಧದಲ್ಲಿ ಎಂತವರಿಗೂ ದುರ್ಜಯನು. ಅದೋ! ಅವನ ಧ್ವಜಾಗ್ರವು ದೂರದಿಂದಲೇ ಚೆನ್ನಾಗಿ ಕಾಣಿಸುತ್ತಿದೆ. ಮಿಂಚು ಗುಡುಗುಗಳಿಂದ ಕೂಡಿದ ಮೇಘದಂತೆ ಅವನ ಧ್ವಜಾಗ್ರದ ವಾನರನು ಅಟ್ಟಹಾಸದಿಂದ ಕೂಗುತ್ತಿರುವನು. ಅರ್ಜುನನೂ ರಥದಲ್ಲಿ ಕುಳಿತು, ಗಾಂಡೀವವನ್ನು ಧ್ವನಿಮಾಡುತ್ತಿರುವನು. ಅವನ ರಥಾಶ್ವಗಳು ಗಂಭೀರಧ್ವನಿಯಿಂದ ಕೂಗುವುದನ್ನು ಕೇಳಿರಿ. ಆ ಪಾರ್ಥನ ರಥನೇಮಿಧ್ವನಿಯೂ ಕೂಡ ಮೇಘಧ್ವನಿಯಂತೆ ಅತಿಭಯಂಕರವಾಗಿ ಕೇಳಿಸುತ್ತಿದೆ. ಇಂದ್ರಪುತ್ರನಾದ ಅರ್ಜುನನು ಆ ರಥದಮೇಲೆ ಕುಳಿತು ಭೂಮಿಯನ್ನೇ ಭೇದಿಸುವಂತೆ ಬರುತ್ತಿರುವುದನ್ನು ನೋಡಿರಿ. ನಮ್ಮನ್ನು ಕಂಡು, ಬಾಣಗಳಿಂದಲೇ ನಮ್ಮನ್ನು ಸತ್ಕರಿಸುತ್ತಿರುವನು. ಶ್ರೀಮಂತನೂ, ಧೀರನೂ, ಆದ ಆ ಪಾಂಡವನು ಬಿಟ್ಟ ಎರಡು ಬಾಣಗಳು, ಇದೋ! ಈ ನನ್ನ ಎರಡುಕಾಲುಗಳ ಮೇಲೆ ಬಂದು ಬಿದ್ದಿವೆ. ಬೇರೆ ಎರಡು ಬಾಣಗಳು (ನನ್ನ ಮೇಲೆ ಪುಷ್ಪಾರ್ಚನೆಯನ್ನು ಮಾಡಿದಂತೆ) ನನ್ನ ರಥಾಗ್ರಕ್ಕೆ ಬಂದು ನಾಟಿಕೊಂಡಿವೆ. ಬೇರೆ ಎರಡು ಬಾಣಗಳು ನನ್ನನ್ನು ಕುಶಲಪ್ರಶ್ನೆ ಮಾಡುವಂತೆ, ನನ್ನ ಎರಡು ಕಿವಿಗಳನ್ನು ಮುಟ್ಟಿಕೊಂಡು ಹೋದುವು. ಧರ್ಮ

ಬಾಣವು ಶತ್ರುಸೇನೆಗೆ ಮುಟ್ಟುವಷ್ಟು ದೂರದಲ್ಲಿ ಕುದುರೆಗಳನ್ನು ನಿಲ್ಲಿಸು. ಆ ಸೇನಾವ್ಯೂಹದಲ್ಲಿ ನನ್ನ ಶತ್ರುವಾದ ಸುಯೋಧನನು ಎಲ್ಲಿರುವನೋ ನೋಡುವೆನು. ಅವನ ಧ್ವಜದ ಗುರುತನ್ನು ನಾನು ಚೆನ್ನಾಗಿ ಬಲ್ಲೆನು. ಅದು ವೈಡೂರ್‍ಯಾದಿ ರತ್ನಖಚಿತವಾಗಿ, ಎತ್ತರವಾಗಿರುವುದರಿಂದ, ಅದನ್ನು ದೂರದಿಂದಲೇ ಕಾಣಬಹುದು. ಗರ್ವಿಷ್ಠನೂ ದುರ್ಬುದ್ಧಿಯುಳ್ಳವನೂ ಆದ ಆ ನನ್ನ ವೈರಿಯು ಈಗ ನನ್ನ ಕಣ್ಣಿಗೆ ಬಿದ್ದರೆ ಸಾಕು. ಈಶ್ವರನೇ ಅವನ ಸಹಾಯಕ್ಕೆ ಬಂದರೂ ಅವನನ್ನೂ ಯಮನಬಳಿಗೆ ಕಳುಹಿಸಿಬಿಡುವೆನು. ಈಗ ನಾವು ಬೇರೆ ಯಾರನ್ನೂ ಗಮನಿಸದೆ, ಮದೋನ್ಮತ್ತನಾದ ಆ ದುರ್ಯೋಧನನನ್ನೇ ಕಂಡುಹಿಡಿಯಬೇಕು. ಸಿಂಹವು ಕ್ಷುದ್ರಮೃಗವನ್ನು ನೋಡಿದಾಗ ಅದರ ತಲೆಯನ್ನು ಮೆಟ್ಟಿಹಿಡಿಯುವಂತೆ ಅವನನ್ನು ಹಿಡಿಯುವೆನು. ಗಾಂಡೀವಪ್ರಯುಕ್ತಗಳಾದ ಬಾಣಗಳಿಂದ ಅವನನ್ನೇ ಮೊದಲು ಕೊಲ್ಲುವೆನು. ಅವನನ್ನು ಕೊಂದರೆ, ಇತರರೆಲ್ಲರೂ ಪರಾಜಿತರಾದಂತೆಯೇ! ಆ ಶಕುನಿಯೊಡನೆ ಸೇರಿಸಿ ಆ ದುರ್ಯೋಧನನನ್ನು ಈಗಲೇ ನಾನು ನನ್ನ ಬಾಣಗಳಿಂದ ಅಡಗಿಸಿಬಿಡುವೆನು. ಆಡಬಾರದ ಮಾತುಗಳನ್ನಾಡುತ್ತ, ಕೌರವ ವಂಶಕ್ಕೇ ಕಳಂಕಪ್ರಾಯನಾದ ಆ ದುರ್ಯೋಧನನನ್ನು ಮೊದಲು ಅಡಗಿಸಬೇಕು. ಮುಂದಿರುವ ಆ ಸೈನ್ಯದಲ್ಲಿ ಅವನಿರುವ ಹಾಗೆ ತೋರಲಿಲ್ಲ. ಈಗ ಆ ಸೈನ್ಯವು ನಮಗೆ ಬೇಕಾದ ವಸ್ತುವಿಲ್ಲದೆ ಶೂನ್ಯಪ್ರಾಯವಾಗಿ ಕಾಣುತ್ತಿರುವುದು. ಈಗ ನಾವು ಹೆದರದೆ ಆ ದುರ್ಯೋಧನನನ್ನೇ ಬೆನ್ನಟ್ಟಿ ಹಿಡಿಯಬೇಕು. ಮುಂದೆ ನೋಡಿದರೆ ಸೇನಾಮಧ್ಯದಲ್ಲಿ ಆಚಾರ್ಯನಿರುವನು. ಅವನ ಹಿಂದೆ ಅಶ್ವತ್ಥಾಮನಿರುವನು. ಕೃಪಕರ್ಣರಿಬ್ಬರೂ ಮುಂದೆ ನಿಂತಿರುವರು. ಭೂರಿಶ್ರವಸ್ಸು, ಸೋಮದತ್ತ, ಬಾಹ್ಲಿಕ, ಜಯದ್ರಥರೆಂಬೀ ನಾಲ್ವರೂ, ಸಾಲ್ವರಾಜನಾದ ದ್ಯುಮತ್ಸೇನನೂ, ವೃಷಸೇನನೂ, ಶಕುನಿಯೂ, ಕಳಿಂಗದೇಶದ ದಶಾರ್ಣನೂ ಎಡಪಾರ್ಶ್ವದಲ್ಲಿರುವರು. ಕುರುಶ್ರೇಷ್ಠನಾಗಿ ನಮ್ಮೆಲ್ಲರಿಗೂ ಪಿತಾಮಹನೆನಿಸಿದ ಭೀಷ್ಮನು, ದೃಢವಾದ ಯುದ್ಧಕವಚವನ್ನು ತೊಟ್ಟು, ಅರ್ಧಸೈನ್ಯದೊಡನೆ ಹಿಂಭಾಗದಲ್ಲಿರುವನು. ದುರ್ಯೋಧನನುಮಾತ್ರ ಅಲ್ಲಿ ಕಾಣಿಸುವುದಿಲ್ಲ. ಅವನೆಲ್ಲಿರಬಹುದು? ಉತ್ತರಾ! ಈ ರಥಸೈನ್ಯವು ಹಾಗಿ

ರಲಿ! ಆ ದುರ್ಯೋಧನನೆಲ್ಲಿರುವನೋ ಹುಡುಕುವೆವು ನಡೆ. ! ರಥವನ್ನು ಮುಂದೆ ಬಿಡು! ಮೊದಲು ನಾವು ಅವನನ್ನು ನಿಗ್ರಹಿಸಬೇಕು. ಇಲ್ಲದಿದ್ದರೆ ಅವನು ಗೋವುಗಳನ್ನು ಅಟ್ಟಿಕೊಂಡು ಹೊರಟುಹೋಗುವನು. ಆದುದರಿಂದ ನೀನು ಈಗಲೇ ಆ ಗೋವುಗಳಿರುವ ಕಡೆಗೆ ರಥವನ್ನು ಬಿಡು. ದುರ್ಯೋಧನನು ಅಲ್ಲಿಯೇ ಇರಬೇಕು" ಎಂದನು. ಅರ್ಜುನನು ಹೀಗೆಂದು ಹೇಳಿ ಉತ್ತರನನ್ನು ತ್ವರೆಪಡಿಸಿ, ಧನುಸ್ಸನ್ನು ಕೈಯಲ್ಲಿ ಹಿಡಿದು ಅತಿವೇಗದಿಂದ ರಥವನ್ನು ಮುಂದೆ ಬಿಡಿಸಿದನು. ಇತ್ತಲಾಗಿ ಕೌರವ ಸೈನ್ಯದಲ್ಲಿ ಭೀಷ್ಮನು ಅರ್ಜುನನ ಅಭಿಪ್ರಾಯವನ್ನು ತಿಳಿದುಕೊಂಡು, ತನ್ನ ಕಡೆಯುವರನ್ನು ನೋಡಿ "ಆಹಾ! ನಾವು ಇವನನ್ನು ನೋಡಿ ಬಹುಕಾಲವಾಯಿತು. ಧರ್ಮಜ್ಞನಾದ ಈತನು ಈಗ ಅಪೂರ್ವಕಾಂತಿಯಿಂದ ಜ್ವಲಿಸುತ್ತಿರುವನು. ಇವನು ದುರ್ಯೋಧನನ ಮೇಲೆ ಬಹುಕಾಲದಿಂದಿದ್ದ ವೈರವನ್ನು ತೀರಿಸಿಕೊಳ್ಳುವುದಕ್ಕಾಗಿ ಅವನನ್ನೇ ಮೊದಲು ಹುಡುಕಿಕೊಂಡು ಹೋಗುವಂತಿದೆ. ಸಿಂಹವು ಮೃಗಕ್ಕಾಗಿ ಹೊಂಚುಹಾಕುವಂತೆ, ನಮ್ಮ ರಾಜನನ್ನು ಹಿಡಿಯುವುದಕ್ಕಾಗಿಯೇ ಆತನು ಆತುರಪಡುತ್ತಿರುವನು. ಆ ದುರ್ಯೋಧನನನ್ನು ಬಿಟ್ಟು ಇತರರನ್ನಿದಿರಿಸುವುದು ಅವನಿಗೆ ಇಷ್ಟವಿಲ್ಲವೆಂದೂ ತೋರುತ್ತಿದೆ. ಆದುದರಿಂದ ಈಗ ನಾವೂ ಅವನನ್ನು ಬೆನ್ನಟ್ಟಿ ಹೋಗಬೇಕು. ಕೋಪಗೊಂಡ ಇವನೊಡನೆ ಆ ದುರ್ಯೋಧನನೊಬ್ಬನೇ ನಿಂತು ಯುದ್ಧಮಾಡಲಾರನು. ಅಷ್ಟೇಕೆ? ಕೋಪಗೊಂಡ ಅರ್ಜುನನ ಮುಂದೆ ಮಹಾದೇವನೆನಿಸಿಕೊಂಡ ಈಶ್ವರನೊಬ್ಬನು, ದೇವಕೀಪುತ್ರನಾದ ಕೃಷ್ಣನೊಬ್ಬನು, ತನ್ನ ಪುತ್ರಸಹಿತನಾದ ದ್ರೋಣಾಚಾರ್ಯನೊಬ್ಬನು, ಈ ಮೂವರನ್ನು ಬಿಟ್ಟರೆ ಬೇರೆ ಯಾವನೂ ಏಕಾಕಿಯಾಗಿ ಯುದ್ಧಕ್ಕೆ ನಿಲ್ಲಲಾರನು. ಈಗ ದುರ್ಯೋಧನನು ಈ ಅರ್ಜುನನ ಕೈಗೆ ಸಿಕ್ಕಿ ಪ್ರಾಣವನ್ನು ನೀಗಿದರೆ, ಆಗ ನಮಗೆ ಈ ಹಸುಗಳಿಂದೇನು? ವಿಶೇಷ ಧನದಿಂದ ತಾನೇ ನಮಗೇನಾಗುವುದು?" ಎಂದು ಹೇಳಿ, ಒಡನೆಯೇ ದುರ್ಯೋಧನನನ್ನು ಕಾಪಾಡುವುದಕ್ಕಾಗಿ ತನ್ನ ಸೇನೆಯೊಡನೆ ಅರ್ಜುನನನ್ನು ಬೆನ್ನಟ್ಟಿ ಹೋದನು. ಇಷ್ಟರಲ್ಲಿಯೇ ಅತ್ತಲಾಗಿ ಅರ್ಜುನನು ಸ್ವಲ್ಪ ಮುಂದೆ ಬಂದಮೇಲೆ ಸಾರಥಿಯನ್ನು ಕುರಿತು, "ಓ ರಾಜಕುಮಾರಾ!

ರಥವೇಗವನ್ನು ತಗ್ಗಿಸು! ಇದೋ! ನಮ್ಮ ಗೋವುಗಳು ಮುಂದೆ ಕಾಣಿಸುತ್ತಿರುವುವು. ಅದೋ! ಆ ಮಂದೆಯನ್ನು ದಾಟಿಕೊಂಡು ಕೌರವ ಸೈನ್ಯದ ಉತ್ತರಭಾಗದಿಂದ ರಥವನ್ನು ಬಿಡು. ಈಗ ನಾನು ಆ ಹಸುಗಳ ಮಂದೆಯನ್ನು ತಡೆದು ಆ ದುರ್ಯೋಧನನೊಡನೆ ಯುದ್ಧಮಾಡುವೆನು. ಅವರು ಗೊಲ್ಲರನ್ನೂ, ಗೋವುಗಳನ್ನೂ ಆತುರದಿಂದ ಓಡಿಸಿಕೊಂಡು ಹೋಗುತ್ತಿರುವರು. ನಾವು ಬೇಗನೆ ಮುಂದೆಹೋಗಿ ಅವೆಲ್ಲವನ್ನೂ ಬಿಡಿಸಿ ತರಬೇಕು. ಉತ್ತರಾ! ಈ ಸೇನೆಯು ಹಾಗಿರಲಿ. ಪೂರ್ವಾಭಿಮುಖವಾಗಿ ಹೊರಡು. ಅತಿರಥರಾದ ಆ ಕೌರವರೆಲ್ಲರೂ, ಇಂದ್ರನ ಪರಾಕ್ರಮವನ್ನು ದಾನವರು ಹೇಗೋಹಾಗೆ ಈ ಯುದ್ಧದಲ್ಲಿ ನನ್ನ ಪರಾಕ್ರಮವನ್ನು ನೋಡಲಿ" ಎಂದನು.

ಆಮೇಲೆ ಅರ್ಜುನನು ಶತ್ರುಗಳಿಗೆ ತಿಳಿಯುವಂತೆ ಗಟ್ಟಿಯಾಗಿ ತನ್ನ ಹೆಸರನ್ನು ಹೇಳಿಕೊಳ್ಳುತ್ತಾ ಬಾಣಗಳನ್ನು ಬಿಡಲಾರಂಭಿಸಿದನು. ಮಿಡಿತೆಗಳಿಂದ ಆಕಾಶವೂ, ವರ್ಷಧಾರೆಯಿಂದ ಪರ್ವತವೂ ಆವರಿಸಲ್ಪಡುವಂತೆ ಅರ್ಜುನನ ಬಾಣಗಳಿಂದ ಅಂತರಿಕ್ಷವೆಲ್ಲವೂ ಎಡೆಬಿಡದೆ ಮುಚ್ಚಿತು. ಈ ಬಾಣಗಳಿಂದ ಕೌರವಸೈನಿಕರಿಗೆ ಗೋವುಗಳಿದ್ದ ಕಡೆಯೇ ಕಾಣದಂತಾಯಿತು. ಭೂಮಿಯಾಗಲಿ, ಅಂತರಿಕ್ಷವಾಗಲಿ, ದಿಕ್ಕುಗಳಾಗಲಿ, ಯಾವುದೂ ತಿಳಿಯದಂತಾಯಿತು. ಈ ಸಮಯದಲ್ಲಿ ಅರ್ಜುನನು ಮತ್ತಷ್ಟು ಉತ್ಸಾಹಗೊಂಡು, ತನ್ನ ವೀರ್ಯಾತಿಶಯವನ್ನು ತೋರಿಸುವಂತೆ, ಮೇಲೆ ಮೇಲೆ ಕೌರವಸೈನ್ಯವನ್ನು ಹೊಡೆಯುತ್ತಿದ್ದನು. ಕೌರವಸೈನ್ಯಕ್ಕೆ ಮುಂದುಬಿದ್ದು ಹೋಗುವುದಕ್ಕಾಗಲಿ, ಹಿಂತಿರುಗಿ ಓಡಿಹೋಗುವುದಕ್ಕಾಗಲಿ ಬುದ್ಧಿಯೇ ತೋರದಂತಾಯಿತು. ಅರ್ಜುನನ ಹಸ್ತಲಾಘವವನ್ನು ಅವರೂ ಆಶ್ಚರ್ಯದಿಂದ ಕೊಂಡಾಡುತ್ತಿದ್ದರು. ಇಷ್ಟರಲ್ಲಿಯೇ ಅರ್ಜುನನು ಕುರುಸೈನ್ಯಕ್ಕೆ ಭಯವನ್ನು ಹುಟ್ಟಿಸುವಂತೆ ತನ್ನ ಶಂಖವನ್ನೂದಿದನು. ಬಿಲ್ಲಿನ ನಾಣನ್ನು ತಟ್ಟಿ, ತಲಘೋಷವನ್ನೂ ಮಾಡಿದನು. ಈ ಶಬ್ದವನ್ನು ಕೇಳಿ ಸಮಸ್ತಭೂತಗಳೂ ತಬ್ಬಿಬ್ಬಾದುವು. ಅರ್ಜುನನ ಶಂಖಧ್ವನಿ, ಧನುಷ್ಟಂಕಾರ ಧ್ವನಿ, ಅವನ ಧ್ವಜದಲ್ಲಿದ್ದ ದಿವ್ಯಭೂತಗಳ ಧ್ವನಿ, ಇವು

ಅರ್ಜುನನು ಉತ್ತರನಿಗೆ ದ್ರೋಣ ಕರ್ಣಾದಿಗಳ ಧ್ವಜದಲ್ಲಿರುವ ಅಸಾಧಾರಣ ಚಿಹ್ನಗಳನ್ನು ತೋರಿಸಿ, ಅವರವರ ಹೆಸರನ್ನು ತಿಳಿಸಿದುದು.

ಓ ಜನಮೇಜಯರಾಜಾ! ಆಮೇಲೆ ಇತ್ತಲಾಗಿ ಕೌರವಸೈನ್ಯದಲ್ಲಿ ಘೋರರೂಪಿಗಳೂ, ಮಹಾಧನುರ್ಧಾರಿಗಳೂ ಆದ ಮೂರುಸಾವಿರ ಮಂದಿ ರಥಿಕರು ಸುತ್ತಲೂ ಅರ್ಜುನನನ್ನು ಆವರಿಸಿಕೊಂಡರು. ಕರ್ಣನು ಸಾವಿರ ರಥಗಳೊಡನೆ ಅರ್ಜುನನನ್ನು ಆವರಿಸಿದನು. ಭೀಷ್ಮನು ಸಹಸ್ರ ರಥಗಳೊಡನೆ ಬಂದನು. ದುರ್ಯೋಧನನು ತನ್ನ ತಮ್ಮಂದಿರೆಲ್ಲರನ್ನೂ ಸೇರಿಸಿಕೊಂಡು, ಸಾವಿರ ರಥಗಳೊಡನೆ ಅರ್ಜುನನ ಹಿಂಭಾಗದಿಂದ ಬಂದನು. ಅನೇಕ ಕಾಲಾಳುಗಳೂ ಕೂಡ, ಕುದುರೆಯ ಸೈನ್ಯಗಳೊಡನೆ ಅಲ್ಲಲ್ಲಿ ಅವಕಾಶವಿದ್ದ ಸ್ಥಳಗಳನ್ನೆಲ್ಲಾ ಆವರಿಸಿ ನಿಂತರು. ತೋಮರಗಳಿಂದಲೂ, ಅಂಕುಶಗಳಿಂದಲೂ ತಿವಿದು ಮುಂದೆ ಬಿಡಲ್ಪಟ್ಟ ಭಯಂಕರ ರೂಪವುಳ್ಳ ಗಜಸೈನ್ಯಗಳೂ ಮುಂದೆ ನುಗ್ಗಿಬಂದುವು. ಹೀಗೆ ದೊಡ್ಡ ಸೇನಾಸಮೂಹವು ಸುತ್ತಲೂ ಆವರಿಸಿಕೊಳ್ಳುತ್ತಿರುವುದನ್ನು ನೋಡಿ ಅರ್ಜುನನು, ಸಾರಥಿಯಾದ ಉತ್ತರನನ್ನು ಕುರಿತು ಹೀಗೆಂದು ಹೇಳುವನು. “ಓ ರಾಜಕುಮಾರಾ! ಅದೋ! ಮುಂದೆ ನೋಡು! ಧ್ವಜದಲ್ಲಿ ಸುವರ್ಣಮಯವಾದ ವೇದಿಕೆಯ ಗುರುತು ಕಾಣುವುದಲ್ಲವೆ! ಕೆಂಪುಕುದುರೆಗಳನ್ನು ಹೂಡಿದ ಆ ರಥದಮೇಲೆ ಕುಳಿತಿರುವವನೇ ಆಚಾರ್ಯನಾದ ದ್ರೋಣನು. ಅವನು ಮಹಾಶೂರನು. ಅತ್ಯಂತ ಚತುರನು. ಬಹಳ ಧೀಮಂತನು. ಆತನು ಬ್ರಹ್ಮಜ್ಞಾನಿಯು ಮಾತ್ರವಲ್ಲದೆ, ಯುದ್ಧದಲ್ಲಿಯೂ ಎಣೆಯಿಲ್ಲದ ಸಾಮರ್ಥ್ಯವುಳ್ಳವನು. ಬಹುದೂರಕ್ಕೆ ಬಾಣವನ್ನು ಪ್ರಯೋಗಿಸಬಲ್ಲನು. ಮಹಾರಥನು. ಬಹಳ ಶಾಂತಸ್ವಭಾವವುಳ್ಳವನು. ಉತ್ತರಾ! ಆಚಾರ್ಯನಾದ ಅವನನ್ನು ಪ್ರದಕ್ಷಿಣಮಾಡು. (ಬ್ರಹ್ಮ ಕ್ಷತ್ರಿಯಗಳೆಂಬ) ಸನಾತನ ಧರ್ಮಗಳೆರಡೂ ಪರಸ್ಪರವಿರೋಧವಿಲ್ಲದಂತೆ ಹೊಂದಿಕೊಂಡಿರುವುದು ಆ ಆಚಾರ್ಯನೊಬ್ಬನಲ್ಲಿಯೇ! ಆ ದ್ರೋಣಾಚಾರ್ಯನು ನನಗೆ ಯುದ್ಧೋತ್ಸಾಹ ಹುಟ್ಟುವಂತೆ ನನ್ನ ದೇಹದಮೇಲೆ ಬಾಣಗಳನ್ನು ಪ್ರ

ರಾಮನ ಶಿಷ್ಯನು. ಇವನು ಆ ಪರಶುರಾಮನಲ್ಲಿಯೇ ಅಸ್ತ್ರವಿದ್ಯೆಯನ್ನು ಕಲಿತು, ಸರ್ವಾಸ್ತ್ರವಿಶಾರದನಾಗಿ, ಶಸ್ತ್ರಧಾರಿಗಳೊಳಗೆಲ್ಲ ಮೇಲೆನಿಸಿರುವನು. ಯುದ್ಧದಲ್ಲಿ ಎಣೆಯಿಲ್ಲದ ವೀರ್ಯವುಳ್ಳವನು. ಲಕ್ಷ್ಯಗಳನ್ನು ಬಹಳ ಬಲವಾಗಿ ಭೇದಿಸತಕ್ಕವನು. ಮಹಾಪರಾಕ್ರಮಿ! ಉತ್ತರಾ! ಈಗ ನಾನು ಸೂತಕುಲದವನಾದ ಈತನೊಡನೆ ಯುದ್ಧಮಾಡುವೆನು. ಬಲಿಯೂ, ಇಂದ್ರನೂ ಕಲೆತಂತೆ, ನಾವಿಬ್ಬರೂ ಯುದ್ಧಮಾಡುವ ರೀತಿಯನ್ನು ಈಗಲೇ ನೀನು ನೋಡುವೆ. ಮಹಾರಥನಾದ ಈ ಸೂತಪುತ್ರನೊಡನೆ ಯುದ್ಧಮಾಡುವಾಗ, ರಥವನ್ನು ನೀನು ಬಹು ಚಾಕಚಕ್ಯದಿಂದ ಬೇಗನೆ ನಡೆಸುತ್ತಿರಬೇಕು. ಅದೋ! ಅತ್ತಲಾಗಿ ಯಾವ ಧ್ವಜಾಗ್ರದಲ್ಲಿ ರತ್ನಮಯವಾದ ಸರ್ಪಾಕೃತಿಯು ಕಾಣಿಸುತ್ತಿರುವುದೋ, ಅದೇ ಯಶಸ್ವಿಯಾದ ದುರ್ಯೋಧನನ ರಥವು. ಆ ದುರ್ಯೋಧನನು ಲಕ್ಷ್ಯಗಳನ್ನು ಚೆನ್ನಾಗಿ ಗುರಿಹಿಡಿದು, ದೃಢವಾಗಿ ಹೊಡೆಯತಕ್ಕವನು. ಒಳ್ಳೇ ಕೈಚಳಕವುಳ್ಳವನು. ಪ್ರತಾಪಶಾಲಿಯು. ಅವನೊಡನೆ ನಾನು ಯುದ್ಧಮಾಡುವಾಗಲೂ ರಥವನ್ನು ಬೇಗನೆ ನಡೆಸಬೇಕು. ಅದೋ! ಅಲ್ಲಿ ಬಿಳುಪಾದ ಐದು ಮಟ್ಟಿಗಳಿಂದ ಕೂಡಿ, ವೈಡೂರ್ಯಮಯವಾದ ಅಡಿಮರವುಳ್ಳ ತಾಳವೃಕ್ಷದ ಗುರುತು ಧ್ವಜದಲ್ಲಿ ಕಾಣಿಸುತ್ತಿರುವುದಲ್ಲವೆ? ಅದೇ ನಮ್ಮೆಲ್ಲರಿಗೂ ಪಿತಾಮಹನಾದ ಭೀಷ್ಮಾಚಾರ್ಯನ ರಥವು. ಕೈಚೀಲವನ್ನಿಟ್ಟುಕೊಂಡು, ದೊಡ್ಡ ಬಿಲ್ಲನ್ನು ಹಿಡಿದು, ಸೈನ್ಯಗಳಿಗೆಲ್ಲ ಉತ್ಸಾಹವನ್ನು ಹುಟ್ಟಿಸುತ್ತಿರುವ ಆ ಭೀಷ್ಮಾಚಾರ್ಯನನ್ನು ಹಿಂದೊಮ್ಮೆ ಪರಶುರಾಮನೂ ಯುದ್ಧದಲ್ಲಿ ಸೋಲಿಸಲಾರದೆ ಹೋದನು. ಅವನು ಬಹಳ ಹಸ್ತಲಾಘವವುಳ್ಳವನು. ಬಹುವೇಗದಿಂದ ಲಕ್ಷ್ಯವನ್ನು ಭೇದಿಸತಕ್ಕವನು. ಅತಿಶಯ ಪ್ರತಾಪವುಳ್ಳವನು. ಸಮಸ್ತ ಸೈನ್ಯಗಳಿಗೂ ಅವನೇ ಪ್ರಮುಖನೆನಿಸಿರುವನು. ಶಸ್ತ್ರಧಾರಿಗಳೊಳಗೆಲ್ಲ ಮೇಲೆನಿಸಿದವನು. ಜಯಲಕ್ಷ್ಮಿಯು ಅವನ ಸ್ವಾಧೀನದಲ್ಲಿರುವಳು. ಇವನು ದುರ್ಯೋಧನನಿಗೆ ವಶವರ್ತಿಯಾಗಿರುವನು. ಆದರೆ, ಈಗಲೇ ನಾವು ಇವನನ್ನಿದಿರಿಸಬೇಕಾದುದಿಲ್ಲ. ಈಗ ನಮಗೇನೂ ಇವನಿಂದ ಅಡ್ಡಿಯಾಗಲಾರದು'' ಎಂದು ಅರ್ಜುನನು ಉತ್ತರನಿಗೆ, ಅವರವರ ಆಕೃತಿಯಿಂದಲೂ, ಧ್ವಜಚಿಹ್ನೆಗಳಿಂದಲೂ, ಶತ್ರು

ವೀರರನ್ನು ನಿರ್ದೇಶಿಸಿ ತೋರಿಸಿ, ತಿರುಗಿ ಯುದ್ಧದಲ್ಲಿ ಆತುರವುಳ್ಳವನಾದನು.

ಇದು ಐವತ್ತಾರನೆಯ ಅಧ್ಯಾಯವು.

ಅರ್ಜುನನಿಗೆ ಭೀಷ್ಮದ್ರೋಣಾದಿಗಳೊಡನೆ ಯುದ್ಧವು.
ಕರ್ಣನು ಅರ್ಜುನನಿಂದ ಪರಾಜಿತನಾದುದು.

ಜನಮೇಜಯರಾಜಾ! ಇತ್ತಲಾಗಿ ಅಶ್ವತ್ಥಾಮನು ಸೂತಪುತ್ರನಾದ ಕರ್ಣನನ್ನು ನೋಡಿ, ಮುಗುಳ್ನಗೆಯೊಡನೆ "ಕರ್ಣಾ! ನೀನು ಇದಕ್ಕೆ ಮೊದಲು ಜನರೆಲ್ಲರ ಮುಂದೆ, ಬಾಯಿಗೆ ಬಂದಹಾಗೆ ಅಸಂಬದ್ಧವಾಗಿ ಏನೇನೋ ಹೆಮ್ಮೆಯನ್ನು ಕೊಚ್ಚಿಕೊಂಡೆಯಲ್ಲವೆ? 'ನನಗೆ ಯುದ್ಧದಲ್ಲಿ ಯಾವನೂ ಇದಿರಿಲ್ಲ'ವೆಂದು ಹೇಳಿದೆ. ಇದೋ! ಈಗ ಒಳ್ಳೆಯ ಸಮಯವು ಒದಗಿಬಂದಿದೆ! ಸಮಸ್ತಭೂತಗಳನ್ನೂ ಕೊನೆಗಾಣಿಸತಕ್ಕ ಯಮನಂತೆ, ಅದೋ! ಅರ್ಜುನನು ರಣಾಗ್ರಕ್ಕೆ ಬಂದು ಸಿಂಹವಂತೆ ಆರ್ಭಟಿಸುತ್ತಿರುವನು. ನೀನು ನಿಜವಾದ ಶೂರನಾಗಿದ್ದರೆ ಈ ಯುದ್ಧದಲ್ಲಿ ನಿನ್ನ ಕೈಯನ್ನು ತೋರಿಸು. ಆಗ ಸಭೆಯಲ್ಲಿ ನೀನು ತೋರಿಸಿದ ಪೌರುಷವೇನೂ ಈಗ ಕೆಲಸಕ್ಕೆ ಬಾರದು. ಅದ್ಭುತಕಾರ್ಯವುಳ್ಳ ಅರ್ಜುನನೊಡನೆ ನಿನಗೆ ಯುದ್ಧಕ್ಕೆ ನಿಲ್ಲುವ ಸಾಮರ್ಥ್ಯವಿಲ್ಲದಿದ್ದರೆ, ಈ ನಿನ್ನ ಮಿತ್ರನಾದ ದುರ್ಯೋಧನನನ್ನೂ, ಅವನ ಮಾವನಾದ ಶಕುನಿಯನ್ನೂ ತಿರುಗಿ ಆ ಸಭೆಗೇ ಕರೆದುಕೊಂಡು ಹೋಗಿ, ಅಲ್ಲಿ ನೀವು ಸುಖವಾಗಿ ನಿಮ್ಮ ದುರ್ಮಂತ್ರಗಳನ್ನು ಆಲೋಚಿಸಿರಿ" ಎಂದನು. ಈ ಮಾತನ್ನು ಕೇಳಿ ಕರ್ಣನಿಗೆ ಅತ್ಯಾಕ್ರೋಶವುಂಟಾಯಿತು. ಸಿಟ್ಟಿನ ಕಣ್ಣುಗಳಿಂದ ಅಶ್ವತ್ಥಾಮನನ್ನು ದುರದುರನೆ ನೋಡುತ್ತಾ, ಕೌರವರೆಲ್ಲರೂ ಕೇಳುತ್ತಿರುವಾಗ ಹೀಗೆಂದು ಹೇಳುವನು. "ಅಶ್ವತ್ಥಾಮಾ! ಭೀಭತ್ಸುವಿಗಾಗಲಿ, ದೇವಕೀಪುತ್ರನಾದ ಕೃಷ್ಣನಿಗಾಗಲಿ ನಾನು ಹೆದರುವೆನೆಂದೆಣಿಸಬೇಡ! ಕೊನೆಗೆ ಆ ಪಾಂಡವರೆಲ್ಲರಿಗೂ ನಾನು ಹೆದರತಕ್ಕವನಲ್ಲ. ನಾನು ಯಾವಾಗಲೂ ಕ್ಷತ್ರಧರ್ಮವನ್ನು ಅನುಸರಿಸತಕ್ಕವನು. ಬಲಾಧಿಕರೂ, ಧನು

ರ್ವಿದ್ಯೆಯಿಂದಲೇ ಬದುಕುವವರೂ, ಗರ್ಜನಸ್ವಭಾವವುಳ್ಳವರೂ ಆದ ನನ್ನಂಥವರಿಗೆ ದರ್ಪವಿರುವುದು ಸಹಜವೇ! ನಮ್ಮಂತವರ ಸ್ವರವೂ ತಗ್ಗುವ ಹಾಗಿಲ್ಲ. ಅರ್ಜುನನೊಡನೆ ಈಗ ನಾನು ಯುದ್ಧಮಾಡುವುದನ್ನಾದರೂ ನೋಡು. ಜಯವೆಂಬುದು ನನಗೇ ಸಿದ್ಧವು" ಎಂದನು. ಓ ಜನಮೇಜಯರಾಜಾ! ಇಷ್ಟರಲ್ಲಿಯೇ ಅತ್ತಲಾಗಿ ಅರ್ಜುನನು, ದಿವ್ಯಾಸ್ತ್ರಗಳನ್ನು ಸಿದ್ಧಪಡಿಸಿಕೊಂಡು, ಅಟ್ಟಹಾಸದೊಡನೆ ಮುಂದೆಬಂದನು. ಆಗ ಮಂದಬುದ್ಧಿಯುಳ್ಳ ದುರ್ಯೋಧನನು, ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಮಹಾಬಲವುಳ್ಳ ಕರ್ಣನನ್ನು ನೋಡಿ "ಕರ್ಣಾ! ನಾವು ಮಾಡಿದುದು ತಪ್ಪಾಯಿತು. ಅರ್ಜುನನು ಮತ್ಸ್ಯರಾಜಧಾನಿಯಲ್ಲಿರುವನೆಂದು ತಿಳಿಯದೆ ನಾವು ಇಲ್ಲಿಗೆ ಬಂದು, ಆ ವಿರಾಟರಾಜನ ಅಪರಿಮಿತವಾದ ಗೋಧನವನ್ನೆಲ್ಲ ಹಿಡಿದುಬಿಟ್ಟೆವು. ಈಗ ಅರ್ಜುನನು ಇಲ್ಲಿರುವುದು ನಿಜವಾಯಿತು. ಈಗಲಾದರೂ ನಾವು ಯುದ್ಧಕ್ಕೆ ನಿಲ್ಲದೆ, ಆ ಗೋಧನವನ್ನೆಲ್ಲ ಇಲ್ಲಿಯೇ ಬಿಟ್ಟು, ನಮ್ಮ ಪುರಕ್ಕೆ ಹೊರಟುಹೋಗುವುದೇ ಮೇಲೆಂದು ತೋರುತ್ತಿದೆ. ನಮಗೆ ಅದರಿಂದ ಇಹಪರಗಳಲ್ಲಿ ಅಪಕೀರ್ತಿಯಾದರೂ ತಪ್ಪಲಿ! ಅಥವಾ ನಾವು ಕ್ಷತ್ರಿಯಧರ್ಮವನ್ನೇ ಪಟ್ಟಾಗಿ ಹಿಡಿದುನಿಲ್ಲಬೇಕು. ಯುದ್ಧಕ್ಕಿಂತಲೂ ಕ್ಷತ್ರಿಯರಿಗೆ ಶ್ರೇಯಸ್ಕರವಾದ ಧರ್ಮವಿಲ್ಲ. ಆದುದರಿಂದ ಅರ್ಜುನನೊಡನೆ ಯುದ್ಧವನ್ನೇ ಮಾಡುವೆವು. ಓಡಿಹೋಗುವುದೇನೋ ನಮಗೆ ಉಚಿತವಲ್ಲ!" ಎಂದು ಹೇಳುತ್ತ, ಕೊನೆಗೆ ಅರ್ಜುನನ್ನು ಇದಿರಿಸುವುದೇ ಸರಿಯೆಂದು ನಿರ್ಧರಿಸಿಕೊಂಡನು. ಒಡನೆಯೇ ಬೆಂಕಿಯಮೇಲೆ ಬೀಳುವ ಶಲಭಗಳಂತೆ ಹತ್ತುಸಾವಿರ ಮಂದಿ ಬಿಲ್ಲಾಳುಗಳು ಪಾರ್ಥನನ್ನು ಇದಿರಿಸಿಹೋದರು. ಜೀನುಹಾಕಿದ ಅಶ್ವಸೈನ್ಯಗಳೂ ಪದಾತಿಗಳ ಬೆಂಗಾವಲಿನೊಡನೆ ಮುಂದೆ ನುಗ್ಗಿದುವು. ಅಂಕುಶಗಳನ್ನೂ, ತೋಮರಗಳನ್ನೂ ಹಿಡಿದ ಒಳ್ಳೇ ಗಜಶಿಕ್ಷಕರಿಂದ ನಡೆಸಲ್ಪಟ್ಟ ಭಯಂಕರಾಕಾರವುಳ್ಳ ಆನೆಗಳೂ ವೇಗದಿಂದ ಮುಂದೆ ಹೊರಟುವು. ಭೀಷ್ಮನೂ, ದ್ರೋಣನೂ, ಕರ್ಣನೂ, ದುರ್ಯೋಧನನೂ, ಧನುರ್ವೇದವಿಶಾರದನಾದ ಅಶ್ವತ್ಥಾಮನೂ, ಈ ಐದುಮಂದಿ ಮಹಾರಥರೂ, ಧನುರ್ಬಾಣಗಳನ್ನು ಹಿಡಿದು ಕೋಪದಿಂದ ಅರ್ಜುನನನ್ನು ಆವರಿಸಿಕೊಂಡರು. ಮೇಘಗಳು

ಕಿರಣಗಳಿಂದ ವ್ಯಾಪ್ತವಾದ ಮಹಾಮೇಘಗಳಂತೆ ಚದರಿಹೋದುವು. ಅ ರ್ಜುನನ ಬಾಣಪ್ರಹಾರಗಳಿಂದ ಕೌರವಸೈನ್ಯವೆಲ್ಲ ರಕ್ತದಿಗ್ಧವಾಗಿ ವಸಂತ ಕಾಲದಲ್ಲಿ ಪುಷ್ಪಿತಗಳಾದ ಅಶೋಕವೃಕ್ಷಗಳಂತಾದುವು. ಅರ್ಜುನನ ಸಾವಿ ರಾರು ಬಾಣಗಳಿಂದ ಛಿನ್ನಭಿನ್ನಗಳಾದ ಛತ್ರಗಳೂ, ಪತಾಕೆಗಳೂ ಗಾಳಿ ಯಿಂದ ಹಾರಿಸಲ್ಪಟ್ಟು ಅತ್ತಿತ್ತ ತೂರಾಡುತಿದ್ದುವು. ಅರ್ಜುನನ ವೀರ್ಯಕ್ಕೆ ಹೆದರಿ ಸೈನ್ಯಗಳೆಲ್ಲವೂ ದಶದಿಕ್ಕುಗಳಿಗೆ ಪಲಾಯನಮಾಡಿದುವು. ಕೌರವ ಸೈನ್ಯದಲ್ಲಿ ರಥಕ್ಕೆ ಕಟ್ಟಿದ್ದ ಕುದುರೆಗಳೆಲ್ಲ, ಅರ್ಜುನನ ಬಾಣಗಳಿಂದ ರಥದ ಮೂಕಿಯು ಮುರಿದು ಬೀಳಲು, ರಣರಂಗವನ್ನು ಬಿಟ್ಟು ಸಿಕ್ಕಿದ ಕಡೆ ಓಡಿಹೋಗುತಿದ್ದುವು. ಕೆಲವು ಕುದುರೆಗಳಿಗೆ ಬಾಣಗಳಿಂದ ಮುಂಗಾಲು ಗಳು ಮುರಿದು, ಅವು ಅಲ್ಲಲ್ಲಿಯೇ ತಲೆಕೆಳಗಾಗಿ ಮುಗ್ಗರಿಸಿ ನೆಲಕ್ಕೆ ಉರುಳುತ್ತಿದ್ದುವು. ಅರ್ಜುನನ ಕಡೆಯ ಆನೆಗಳು, ಕೌರವಸೈನ್ಯದ ಆನೆ ಗಳನ್ನು ಕಣ್ಣು, ಮೂಗು, ಕೊಂಬು, ತುಟಿ ಮುಂತಾದ ಮರ್ಮಸ್ಥಾನ ಗಳಲ್ಲಿ ಅಪ್ಪಳಿಸಿ ಕೆಡಹುತ್ತ ಬರಲು, ಕೌರವರ ಆನೆಗಳೆಲ್ಲ ಪ್ರಜ್ಞೆತಪ್ಪಿ ನೆಲಕ್ಕೆ ಬಿದ್ದು, ಮೇಘಗಳಿಂದ ಆಕಾಶವು ಹೇಗೋಹಾಗೆ, ರಣಭೂಮಿ ಯೆಲ್ಲ ಗಜಶರೀರಗಳಿಂದ ತುಂಬಿಹೋಯಿತು. ಬಡಬಾಮುಖದಿಂದುಂಟಾ ಗುವ ಕಾಲಾಗ್ನಿಯಂತೆಯೂ, ಕಾಲಪಕ್ವವಾದ ಚರಾಚರಾತ್ಮಕವಾದ ಸಮಸ್ತ ಪ್ರಪಂಚವನ್ನೂ ಪ್ರಳಯಕಾಲದಲ್ಲಿ ದಹಿಸುವ ಲಯಾಗ್ನಿಯಂತೆ ಯೂ, ಪಾರ್ಥನು ಅಟ್ಟಹಾಸದಿಂದ ನಗುತ್ತ, ತನ್ನ ಅಸ್ತ್ರಜ್ವಾಲೆಯಿಂದ ಲೂ, ತನ್ನ ಧನುಸ್ಸಿನ ಘೋಷದಿಂದಲೂ ಕೌರವಸೈನ್ಯವನ್ನೆಲ್ಲಾ ದಹಿ ಸುತ್ತ ಬಂದನು. ಅದೃಷ್ಟಬಲದಿಂದಲೂ, ತನ್ನ ವೀರ್ಯಪ್ರಭಾವದಿಂದ ಲೂ ಹೀಗೆ ಅರ್ಜುನನು ದುರ್ಯೋಧನನ ಸೈನ್ಯವನ್ನೆಲ್ಲ ಉಲ್ಲೋಲ ಕಲ್ಲೋಲವಾಗಿ ಮಾಡಿ, ಪ್ರಾಯಕವಾಗಿ ರಾತ್ರಿಯು ಸಮಸ್ತ ಪ್ರಾಣಿಗಳ ಚೇಷ್ಟೆಯನ್ನೆಲ್ಲ ಅಡಗಿಸಿಬಿಡುವಂತೆ, ಕೌರವಸೈನಿಕರ ಯುದ್ಧೋತ್ಸಾಹ ವನ್ನೆಲ್ಲ ಒಮ್ಮೆಯೇ ಉಡುಗಿಸಿಬಿಟ್ಟನು. ಒಮ್ಮೊಮ್ಮೆ ಇವನು ಶತ್ರು ಗಳನ್ನು ಮಹಾವೇಗದಿಂದಿರಿಸುವನು. ಮತ್ತೊಮ್ಮೆ ಶತ್ರುಗಳೂ ವೇಗ ದಿಂದ ಅವನಮೇಲೆ ಬೀಳುವರು. ದೃಢವಾಗಿಯೂ, ಅಮೋಘವಾಗಿ ಯೂ, ಅತಿಮಾನುಷಗಳಾಗಿಯೂ ಇದ್ದ ಅರ್ಜುನನ ಬಾಣಗಳನ್ನು ನೋಡಿ

ಕೌರವರಿಗೆ ಭೀತಿ ಹುಟ್ಟಿತು. ಪಕ್ಷಿಗಳ ಗರಿಗಳಿಂದ ಕೂಡಿ, ಶತ್ರುಗಳ ಪ್ರಾಣಗಳನ್ನೂ, ರಕ್ತವನ್ನೂ ಹೀರತಕ್ಕ ಆ ಅರ್ಜುನನ ಬಾಣಗಳು ಪಕ್ಷಿಗಳಂತೆ ಆಕಾಶವನ್ನೆಲ್ಲಾ ವ್ಯಾಪಿಸಿದುವು. ಅರ್ಜುನನ ಗಾಂಡೀವ ಪ್ರಯುಕ್ತಗಳಾದ ಬಾಣಗಳು ಆಕಾಶದಲ್ಲಿ ಗರುಡವೇಗದಿಂದ ಹೊರಟು ಬಂದು, ಶತ್ರುಗಳ ಮರ್ಮಸ್ಥಾನಗಳಲ್ಲಿ ನಾಟುತ್ತಿದ್ದುವು. ಆ ಅರ್ಜುನನ ಬಾಣಗಳಿಂದ ಶತ್ರುಗಳ ಕವಚಗಳು, ಸಾರಥಿ, ಕುದುರೆಗಳಿಗೆ ತೊಡಿಸಿದ ಭೂಷಣಾದಿಗಳು, ಸೂರ್ಯಸಮಾನವಾದ ಕಿರೀಟಗಳು, ರಥದ ಮೇಲಿನ ಹುಲಿದೊಗಲು, ಮುಂತಾಗಿ ಇನ್ನೂ ರಥದ ಸರ್ವಾವಯವಗಳೂ ಮಂಜಿನಿಂದ ಪ್ರಾಣಿಗಳು ಹೇಗೋ ಹಾಗೆ ಮುಚ್ಚಿಹೋದುವು. ಶತ್ರುಗಳು ಒಂದಾವರ್ತಿಯಾದರೂ ಈ ವಿಧವಾದ ಹಸ್ತಲಾಘವವನ್ನು ಅರ್ಜುನನ ಮೇಲೆ ತೋರಿಸಲಾರದೆ ಹೋದರು. ಹೀಗೆ ಶತ್ರುಗಳಿಗೆ ದುರ್ನಿವಾರವಾದ ಅರ್ಜುನನ ರಥವು ತಿರುಗಿತಿರುಗಿ ಶತ್ರುಗಳನ್ನೆದಿರಿಸುತಿದ್ದಿತು. ಅವನ ಬಾಣಗಳಿಗೆ ಶತ್ರುಶರೀರಗಳಲ್ಲಿ ಹೇಗೆ ತಡೆಯಿಲ್ಲದೆ ನಾಟುತಿದ್ದುವೋ, ಹಾಗೆಯೇ ಅವನ ರಥಕ್ಕೂ ಎಲ್ಲಿಯೂ ತಡೆಯಿರಲಿಲ್ಲ. ಎರಡು ಭಾಗವಾಗಿದ್ದ ಆ ಶತ್ರುಸೈನ್ಯಗಳಲ್ಲಿ ರಥವು ತಡೆಯಿಲ್ಲದೆ ಸಂಚರಿಸುತಿತ್ತು. ಮಹಾಸಮುದ್ರದಲ್ಲಿ ನಲಿಯುವ ಅತಿವೇಗವುಳ್ಳ ದೊಡ್ಡ ಸರ್ಪದಂತೆ, ಅರ್ಜುನನು ದಟ್ಟವಾದ ಆ ಶತ್ರುಸೈನ್ಯಮಧ್ಯದಲ್ಲಿ ತಡೆಯಿಲ್ಲದೆ ನಲಿದಾಡುತಿದ್ದನು. ಎಡೆಬಿಡದೆ ಬಾಣಪ್ರಯೋಗಮಾಡುತಿದ್ದ ಆ ಅರ್ಜುನನ ಜ್ಯಾಘೋಷವು, ಬೇರೆ ಎಲ್ಲಾ ಧ್ವನಿಗಳನ್ನೂ ಅಡಗಿಸಿ ತಾನೇ ತಾನಾಗಿ ಕೇಳಿಸುತಿದ್ದಿತು. ಎಡೆಬಿಡದೆ ಹೊರಡುವ ಅರ್ಜುನನ ಬಾಣಗಳಿಂದ, ಅಲ್ಲಿದ್ದ ಆನೆಗಳೆಲ್ಲ ಸೂರ್ಯರಶ್ಮಿಯಿಂದಾವೃತವಾದ ಮೇಘಗಳಂತೆ ಕಾಣಿಸುತಿದ್ದುವು. ಅರ್ಜುನನು ನಾನಾಕಡೆಗಳಿಗೆ ವೇಗದಿಂದ ತಿರುಗುತ್ತ, ಎಡಬಲಗೈಗಳೆರಡರಿಂದಲೂ ಎಡೆಬಿಡದೆ ಬಾಣವನ್ನು ಪ್ರಯೋಗಿಸುತ್ತಿದ್ದುದರಿಂದ, ಅವನ ಬಿಲ್ಲು ರಣರಂಗದಲ್ಲಿ ಯಾವಾಗಲೂ ಚಕ್ರಾಕಾರವಾಗಿಯೇ ಕಾಣಿಸುತಿತ್ತು. ರೂಪವಿಲ್ಲದ ಕಡೆಗೆ ದೃಷ್ಟಿಯು ಬೀಳದಂತೆ, ಅರ್ಜುನನ ಬಾಣಗಳಲ್ಲಿ ಒಂದಾದರೂ ಲಕ್ಷ್ಯವಿಲ್ಲದಕಡೆಗೆ ಬಿದ್ದು ವ್ಯರ್ಥವಾಗಲಿಲ್ಲ. ಸಾವಿರಾನೆಗಳು ಒಟ್ಟಾಗಿ ನುಗ್ಗಿ ಒಂದು ವನವನ್ನು ಮುರಿದರೆ ಹೇಗೋ ಹಾಗೆ, ಅರ್ಜುನನ

ರಥಮಾರ್ಗಕ್ಕೆ ರಣದಲ್ಲಿ ಅಡ್ಡಿಯೇ ಇಲ್ಲದಂತೆ ಅತಿಭಯಂಕರವಾಯಿತು. ತನ್ನ ಮಗನಾದ ಪಾರ್ಥನಿಗೆ ಜಯವನ್ನು ಕೋರಿ, ದೇವೇಂದ್ರನೇ ಸಮಸ್ತ ದೇವತೆಗಳೊಡನೆ ಬಂದು ತಮ್ಮನ್ನು ಹೊಡೆಯುತ್ತಿರುವನೆಂದು ಶತ್ರುಗಳೆಲ್ಲರಿಗೂ ಅನುಮಾನವು ಹುಟ್ಟುವಂತಾಯಿತು. ಮತ್ತು ಅರ್ಜುನನ ಬಾಣಪ್ರಹಾರವನ್ನು ನೋಡಿ ಪ್ರಜೆಗಳನ್ನು ನುಂಗುವ ಕಾಲಯಮನೇ ಅರ್ಜುನನ ರೂಪದಿಂದ ಬಂದಿರುವನೆಂದೂ ಶತ್ರುಗಳಿಗೆ ತೋರಿತು. ಪಾರ್ಥನು ಬಾಣಗಳನ್ನು ಮೈಗೆ ಗುರಿಯಿಟ್ಟು ಹೊಡೆಯದಿದ್ದಾಗಲೂ, ಅವನ ಘೋರಪರಾಕ್ರಮವನ್ನು ನೋಡಿದಮಾತ್ರದಿಂದಲೇ ನೂರಾರು ಕೌರವಸೈನ್ಯಗಳು ಹತವಾಗಿ ಬೀಳುತಿದ್ದುವು. ಕಾಲವಿಪಾಕದಿಂದ ಓಷಧಿಗಳು ಬಾಡಿ ಬಗ್ಗಿಹೋಗುವಂತೆ, ಅರ್ಜುನನ ಭಯದಿಂದ ಕೌರವರ ತಲೆಗಳು ಬಗ್ಗಿಹೋದುವು. ಆಗ ಅರ್ಜುನನು ಅತ್ಯಂತ ಕೋಪಾವೇಶದಿಂದ, ಬಂದವರನ್ನು ಭಯದಿಂದ ಓಡಿಹೋಗುವಂತೆ ಮಾಡಿದನು. ಅರ್ಜುನನ ಬಾಣಗಳಿಂದ ಭೇದಿಸಲ್ಪಟ್ಟ ಕುರುಸೈನ್ಯಗಳ ದೇಹದಿಂದ ಸುರಿದ ರಕ್ತವು ಭೂಭಾಗವನ್ನೆಲ್ಲ ಕೆಂಪಾಗಿ ಕಾಣಿಸಿತು. ಅರ್ಜುನನಿಂದ ಕೊಲ್ಲಲ್ಪಟ್ಟ ಅನೇಕವೀರರು, ದೇಹದೊಳಗಿನ ರಕ್ತಸ್ರಾವದಿಂದಲೂ, ಗಾಳಿಗೆ ಹಾರಿಬಂದ ರಕ್ತಬಿಂದುಗಳಿಂದಲೂ, ರಕ್ತದಲ್ಲಿ ತೊಯ್ದ ನೆಲದ ಧೂಳಿಗಳಿಂದಲೂ, ರಕ್ತದಿಗ್ಧಗಳಾದ ಆಯುಧಗಳ ಸ್ಪರ್ಶದಿಂದಲೂ ಕೇವಲ ರಕ್ತಮಯದೇಹವುಳ್ಳವರಾಗಿ ಕೊನೆಗೆ ರಕ್ತಪ್ರವಾಹದಲ್ಲಿಯೇ ಮುಳುಗಿ ಸಾಯುತ್ತಿದ್ದರು. ಗಾಳಿಗೆ ಹಾರಿದ ರಕ್ತಬಿಂದುಗಳಿಂದ ಆಕಾಶದಲ್ಲಿ ಸೂರ್ಯರಶ್ಮಿಗಳೆಲ್ಲವೂ ಕೆಂಪಾಗಿ, ಅಕಾಲದಲ್ಲಿ ಸಂಧ್ಯಾರಾಗವನ್ನು ಕಾಣಿಸಿತು. ಸೂರ್ಯನಾದರೂ ಅಸ್ತಗಿರಿಯನ್ನು ಹೊಂದಿ ಹಿಂತಿರುಗಿ ಬರುವನು. ಅರ್ಜುನನಾದರೋ ಯುದ್ಧಕ್ಕೆ ಹೋದಮೇಲೆ ಶತ್ರುವನ್ನು ಗೆಲ್ಲದೆ ಹಿಂತಿರುಗಲಾರನು. ಹೀಗೆ ಅರ್ಜುನನು ತನ್ನ ದಿವ್ಯಾಸ್ತ್ರಗಳಿಂದ ಅನೇಕಶೂರರನ್ನೂ, ಧನುರ್ಧಾರಿಗಳನ್ನೂ ಇದಿರಿಸಿ ಸೋಲಿಸಿದನು. ದ್ರೋಣನನ್ನು ಎಪ್ಪತ್ತು ಬಾಣಗಳಿಂದಲೂ, ಶಕುನಿಯನ್ನು ಎಂಭತ್ತು ಬಾಣಗಳಿಂದಲೂ, ಅಶ್ವತ್ಥಾಮನನ್ನು ಏಳು ಬಾಣಗಳಿಂದಲೂ, ದುಸ್ಸಹನನ್ನು ಹತ್ತು ಬಾಣಗಳಿಂದಲೂ ಹೊಡೆದನು. ಹಾಗೆಯೇ ಹನ್ನೆರಡುಬಾಣಗಳಿಂದ ದುಶ್ಯಾಸನನನ್ನೂ,

ಮೂರು ಬಾಣಗಳಿಂದ ಕೃಪನನ್ನೂ, ಅರುವತ್ತು ಬಾಣಗಳಿಂದ ಭೀಷ್ಮನನ್ನೂ ಅವರವರ ಎದೆಗೆ ಗುರಿಯಿಟ್ಟು ಹೊಡೆದನು. ಆಮೇಲೆ ಇಂದ್ರಪುತ್ರನಾದ ಅರ್ಜುನನು, ಶತ್ರುಸೇನೆಯ ಮಧ್ಯದಲ್ಲಿದ್ದ ಕರ್ಣನನ್ನು ಹರಿತವಾಗಿಯೂ, ಕೆಂಪಾಗಿಯೂ, ಇದ್ದ "ಕರ್ಣಿ" ಯೆಂಬ ಒಂದು ಕವಲು ಬಾಣದಿಂದ ಹೊಡೆದನು. ದೃಢಧನುರ್ಧಾರಿಯಾದ ಅರ್ಜುನನ ಸರ್ವವೇಗದಿಂದ ಬಿಡಲ್ಪಟ್ಟ ಆ ತೀಕ್ಷ್ಣಬಾಣವು ಕರ್ಣನ ಕವಚವನ್ನು ಭೇದಿಸಿಕೊಂಡು, ದೇಹದಲ್ಲಿ ಹೊಕ್ಕು. ಅದರಿಂದಾಚೆಗೆ ಭೂಮಿಯಲ್ಲಿಯೂ ನಾಟಿಕೊಂಡಿತು. ಆಮೇಲೆ ಅರ್ಜುನನು ನಾಲ್ಕು ಕ್ಷುರಾಯುಧಗಳಿಂದ ಕರ್ಣನ ನಾಲ್ಕು ಕುದುರೆಗಳನ್ನು ಹೊಡೆದನು. ಒಂದು ಬಾಣದಿಂದ ಅವನ ಸಾರಥಿಯ ತಲೆಯನ್ನು ಕೆಳಕ್ಕೆ ಕೆಡಹಿದನು. ಒಂದು ಅರ್ಧಚಂದ್ರ ಬಾಣದಿಂದ ಅವನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿದನು. ಸರ್ವಶಾಸ್ತ್ರವಿಶಾರದನೆನಿಸಿಕೊಂಡು, ಮಹಾಪ್ರಭಾವವುಳ್ಳ ಆ ಕರ್ಣನಿಗೆ ರಥವೂ, ಕುದುರೆಗಳೂ, ಸಾರಥಿಯೂ, ಕೈಯಲ್ಲಿದ್ದ ಧನುಸ್ಸೂ ಹೋದುದನ್ನು ನೋಡಿ, ಸೈನ್ಯಗಳೆಲ್ಲವೂ ಭಯಪಟ್ಟು ಚದರಿಹೋಯಿತು. ಅನೇಕ ಸೈನ್ಯವು ನಷ್ಟವೂ ಆಯಿತು.

ಇದು ಐವತ್ತೇಳನೆಯ ಅಧ್ಯಾಯವು.

---

ಅರ್ಜುನನು ವಿಕರ್ಣಾದಿಗಳನ್ನೋಡಿಸಿ, ಕರ್ಣನ ತಮ್ಮನನ್ನು ಕೊಂದುದು. ಕರ್ಣನು ಪರಾಜಿತನಾಗಿ ರಣರಂಗವನ್ನು ಬಿಟ್ಟು ಹೋದುದು.

ಜನಮೇಜಯರಾಜಾ! ಕೇಳು! ಹೀಗೆ ಅರ್ಜುನನಿಂದ ಪರಾಜಿತವಾಗಿ ಭಯಪಟ್ಟು ಓಡಿಹೋದ ಸೈನ್ಯವೆಲ್ಲವೂ ಮಹಾ ಪ್ರವಾಹದಂತೆ ಕೂಗಿಡುತ್ತ, ಭೀಷ್ಮನ ಬಳಿಗೆ ಓಡಿಹೋಗಿ, ಸಮುದ್ರವೇಗವು ಅದರ ತೀರದಲ್ಲಿ ತಡೆದು ನಿಲ್ಲುವಂತೆ ಅಲ್ಲಿ ನಿಂತುಹೋಯಿತು. ಆಗ ಭೀಷ್ಮನು ಆ ಸೈನ್ಯಕ್ಕೆಲ್ಲ ಧೈರ್ಯವನ್ನು ಹೇಳಿ, ತಿರುಗಿ ಅವೆಲ್ಲವನ್ನೂ ಒಂದಾಗಿ ಸೇರಿಸಿಟ್ಟನು. ಯುದ್ಧವಿದ್ಯೆಯಲ್ಲಿ ನಿಪುಣನೂ, ಎಂತವರಿಗೂ ದುರ್ಜಯನೂ ಆದ ಆ

ಭೀಷ್ಮನು, ಶತ್ರುಸೈನ್ಯಕ್ಕೆ ಅಭೇದ್ಯವಾಗುವಂತೆ ರಥ ಗಜ ತುರಗಗಳನ್ನೆಲ್ಲ ವ್ಯೂಹರೂಪವಾಗಿ ಜೋಡಿಸಿ, ಒಳ್ಳೇ ಶೂರರನ್ನು ಅಲ್ಲಲ್ಲಿ ಕಾವಲಿಟ್ಟನು. ಕೃಪ, ಕರ್ಣ, ದ್ರೋಣ, ದುರ್ಯೋಧನರೊಡನೆ ತಾನೂ ಅದಕ್ಕೆ ರಕ್ಷಕನಾಗಿ ನಿಂತನು. ಆ ಸೈನ್ಯವನ್ನು ಬೇರೊಬ್ಬರಿಂದ ಚದರಿಸುವುದಕ್ಕಾಗಲಿ, ಅದರಲ್ಲಿ ಪ್ರವೇಶಿಸುವುದಕ್ಕಾಗಲಿ ಸಾಧ್ಯವಿಲ್ಲದಂತೆ ಮಾಡಿಟ್ಟನು. ಹೀಗೆ ಕೌರವಸೈನ್ಯವು ವ್ಯೂಹವಾಗಿ ಕಟ್ಟಲ್ಪಟ್ಟಿರುವುದನ್ನೂ, ಅಲ್ಲಲ್ಲಿ ಎತ್ತರವಾದ ಧ್ವಜಗಳು ಮೇಲೇರಿಸಲ್ಪಟ್ಟಿರುವುದನ್ನೂ ನೋಡಿ ಅತ್ತಲಾಗಿ ಅರ್ಜುನನು ಉತ್ತರನೊಡನೆ ಹೀಗೆಂದು ಹೇಳುವನು. “ಉತ್ತರಾ! ಜಾಗರೂಕನಾಗಿರು! ಕುದುರೆಗಳ ಹಗ್ಗವನ್ನು ಬಲವಾಗಿ ಹಿಡಿದು, ಎಚ್ಚರದಿಂದ ಕುದುರೆಗಳನ್ನು ಮುಂದಕ್ಕೆ ಬಿಡು! ಮುಂದೆ ಚೆನ್ನಾಗಿ ಗಮನಿಸಿ ನೋಡುತ್ತಿರು. ಈಗ ನಾನು ತಿರುಗಿ ಕರ್ಣನೊಡನೆ ಯುದ್ಧಕ್ಕೆ ನಿಲ್ಲುವೆನು. ಅದೋ! ಅಲ್ಲಿ ನೋಡು! ಆ ರಥದಮೇಲಿನ ಧ್ವಜಸ್ತಂಭದಲ್ಲಿ, ಬಹಳ ಅಂದವಾಗಿ, ನಾನಾಬಗೆಯಲ್ಲಿ ಚಿತ್ರಿತವಾಗಿ, ಅಗ್ನಿಯಂತೆ ಪ್ರಕಾಶವಿಶಿಷ್ಟವಾದ ಆನೆಯನ್ನು ಕಟ್ಟುವ ಸರಪಳಿಯು ಆಡುತ್ತಿರುವುದು ನೋಡು. ಅಲ್ಲಿರುವುದೇ ಆ ಕರ್ಣನ ಪ್ರಬಲವಾದ ಸೈನ್ಯವು. ಚಿನ್ನದ ಕುಚ್ಚುಳ್ಳ ಹಗ್ಗಗಳಿಂದ ಅಲಂಕೃತಗಳಾದ ನಮ್ಮ ಬಿಳೀರಥಾಶ್ವಗಳನ್ನು ಬೇಗನೆ ಅಲ್ಲಿಗೆ ಬಿಡು. ಅಲ್ಲಿ ನಾನು ಈಗ ನನ್ನ ಯಾವಚ್ಛಕ್ತಿಯನ್ನೂ ತೋರಿಸುವೆನು ನೋಡು. ಅಲ್ಲಿರುವ ರಥಿಕವೀರರ ಗುಂಪಿನಿಂದ ನಮ್ಮ ರಥವನ್ನು ನಡೆಸು. ಸೂತಪುತ್ರನಾದ ಆ ಕರ್ಣನು, ಆನೆಯು ಆನೆಯೊಡನೆಯೇ ಹೋರಾಡುವುದಕ್ಕೆ ಹೋಗುವಂತೆ, ಯಾವಾಗಲೂ ನನ್ನೊಡನೆಯೇ ಯುದ್ಧವನ್ನಪೇಕ್ಷಿಸುತ್ತಿರುವನು. ದುರ್ಯೋಧನನ ಆಶ್ರಯ ಬಲದಿಂದ ಕೊಬ್ಬಿದ ಆ ಸೂತಪುತ್ರನ ಬಳಿಗೆ ಬೇಗನೆ ರಥವನ್ನು ಬಿಡು. ಮೊದಲು ಅವನನ್ನು ನಾನು, ಇಂದ್ರನು ವೃತ್ರನನ್ನು ಹೇಗೋಹಾಗೆ ಆ ರಥಮಧ್ಯದಲ್ಲಿಯೇ ಕೆಳಕ್ಕುರುಳಿಸುವೆನು” ಎಂದನು. ಈ ಮಾತನ್ನು ಕೇಳಿದೊಡನೆ ಉತ್ತರನು, ವೇಗಶಾಲಿಗಳಾದ ಕುದುರೆಗಳನ್ನು ತಟ್ಟಿ, ಮುಂದಿದ್ದ ರಥಸೈನ್ಯವನ್ನೆಲ್ಲ ಭೇದಿಸಿಕೊಂಡು, ಅರ್ಜುನನನ್ನು ಮುಂದಕ್ಕೆ ತಂದು ಬಿಟ್ಟನು. ಹೀಗೆ ಅರ್ಜುನನು ಉಗ್ರತೇಜಸ್ಸಿನಿಂದ ಕರ್ಣನನ್ನು ಇದಿರಿಸಿ

ಬರುವುದನ್ನು ನೋಡಿ, ಅನೇಕ ರಥವೀರರು ಗುಂಪಾಗಿ ಸೇರಿಕೊಂಡು, ಹುಲಿಯ ಬಾಯಿಗೆ ಸಿಕ್ಕಿಬಿದ್ದ ಎತ್ತನ್ನು ಹೇಗೋಹಾಗೆ, ಆ ಕರ್ಣನನ್ನು ಅಪಾಯದಿಂದ ರಕ್ಷಿಸುವುದಕ್ಕಾಗಿ ಆತುರದಿಂದ ಮುಂದುಬಿದ್ದು ಬಂದರು. ಒಳ್ಳೇ ಯೌವನಬಲವುಳ್ಳ ಚಿತ್ರಾಂಗದನು, ಚಿತ್ರರಥನು, ಸಂಗ್ರಾಮ ಜಿತ್ತು, ದುಸ್ಸಹನು, ಚಿತ್ರಸೇನನು, ವಿವಿಂಶತಿ, ದುರ್ಮುಖನು, ದುರ್ಜಯನು, ವಿಕರ್ಣನು, ದುಶ್ಶಾಸನನು, ಶಕುನಿ, ಶೋಣನು, ನಿಷೇಧನು, ಮುಂತಾದವರೆಲ್ಲ ಒಟ್ಟಾಗಿ ಕರ್ಣನ ಬೆಂಬಲಕ್ಕಾಗಿ ಓಡಿಬಂದರು. ಮಹಾ ಬಲಾಢ್ಯರಾದ ರಾಜಪುತ್ರರೆಲ್ಲ ಅರ್ಜುನನು ಕರ್ಣನಮೇಲೆ ಯುದ್ಧಕ್ಕೆ ಬರುವುದನ್ನು ಕಂಡೊಡನೆ, ತಮ್ಮತಮ್ಮ ಸಹೋದರರೆಲ್ಲರನ್ನೂ ಕೂಡಿಸಿಕೊಂಡು ಬಿಲ್ಲು ಬಾಣಗಳನ್ನು ಹಿಡಿದು, ಅರ್ಜುನನಮೇಲೆ ಬಾಣಜ್ವಾಲೆಗಳನ್ನು ನಾನಾಕಡೆಗಳಿಂದ ಸುರಿಯತೊಡಗಿದರು. ಅತ್ತಲಿಂದ ಅರ್ಜುನನೂ ಕೂಡ, ನಾಣೆಂಬ ತಂತಿಗಳಿಂದಲೂ, ಪ್ರಾಸಗಳೆಂಬ ಉಪವೀಣೆಗಳಿಂದಲೂ ಬಾಣಸಮೂಹಗಳೆಂಬ ಕೋಣ (ವಾದ್ಯವನ್ನು ನುಡಿಸುವ ಸಾಧನ) ಗಳಿಂದಲೂ, ಕೈಗಳೆಂಬ ಬಿರಡೆಗಳಿಂದಲೂ, ಬಿಲ್ಲೆಂಬ ದಂಡಿಯಿಂದಲೂ ಕೂಡಿದ ವೀಣೆಯನ್ನು ಶತ್ರುಗಳನಡುವೆ ನುಡಿಸುತಿದ್ದನು. ಹೀಗೆ ದೊಂಬಿಯುದ್ಧವು ನಡೆಯುತ್ತಿರುವಾಗ, ವಿಕರ್ಣನು ಭಯಂಕರವಾದ ತನ್ನ ರಥವನ್ನು ಮುಂದೆ ಬಿಟ್ಟುಕೊಂಡು, ಬಾಣವರ್ಷವನ್ನು ಕರೆಯುತ್ತ ಅರ್ಜುನನನ್ನು ಇದಿರಿಸಿದನು. ಒಡನೆಯೇ ಅರ್ಜುನನು ಚಿನ್ನದ ಕಟ್ಟುಗಳಿಂದಲೂ, ದೃಢವಾದ ಹೆದೆಯಿಂದಲೂ ಕೂಡಿದ ಆ ವಿಕರ್ಣನ ಧನುಸ್ಸನ್ನು ಕತ್ತರಿಸಿ, ಅವನ ಧ್ವಜವನ್ನು ಮುರಿದುಹಾಕಲು, ವಿಕರ್ಣನು ವೇಗದಿಂದ ಹಿಂದೆ ಸರಿದು ಓಡಿಹೋದನು. ಹೀಗೆ ಅತಿಮಾನುಷಕೃತ್ಯಗಳನ್ನು ತೋರಿಸುತ್ತ ಶತ್ರುಗಳನ್ನು ಗುಂಪುಗುಂಪಾಗಿ ಓಡಿಸುತ್ತಿರುವ ಅರ್ಜುನನ ವೀರ್ಯವನ್ನು ನೋಡಿ ಸಹಿಸಲಾರದೆ, ಶತ್ರುಂತಪನೆಂಬವನು ಕೂರ್ಮನಖವೆಂಬ ಬಾಣದಿಂದ ಅರ್ಜುನನನ್ನು ಹೊಡೆದನು. ಶತ್ರುಂತಪನ ಬಾಣದಿಂದ ನೊಂದ ಅರ್ಜುನನು, ವೀರಾವೇಶದಿಂದ ಶತ್ರುಸೈನ್ಯದ ನಡುವೆ ಪ್ರವೇಶಿಸಿ, ಆ ಶತ್ರುಂತಪನನ್ನು ಐದು ಬಾಣಗಳಿಂದಲೂ, ಅವನ ಸಾರಥಿಯನ್ನು ಹತ್ತು ಬಾಣಗಳಿಂದಲೂ ಹೊಡೆದನು. ಅರ್ಜುನನ ಬಾಣವು ಯುದ್ಧಕವಚ

ವನ್ನೂ ಭೇದಿಸಿಕೊಂಡು, ಮೈಯಲ್ಲಿ ನಾಟಲು, ಶತ್ರುಂಜಯನು ಒಡನೆಯೇ ಗತಪ್ರಾಣನಾಗಿ, ಬಿರುಗಾಳಿಯ ಬಡಿತಕ್ಕೆ ಸಿಕ್ಕಿ ಬೆಟ್ಟದಮೇಲಿಂದ ಕೆಳಕ್ಕೆ ಮುರಿದುಬೀಳುವ ದೊಡ್ಡ ಮರದಂತೆ ಕೆಳಕ್ಕೆ ಬಿದ್ದುಬಿಟ್ಟನು. ಹೀಗೆ ರಥಿಕೋತ್ತಮನಾದ ಅರ್ಜುನನ ಪ್ರಹಾರದಿಂದ ನೊಂದ ಮಹಾರಥಿಕರೆಲ್ಲರೂ, ಪ್ರಳಯಕಾಲದಲ್ಲಿ ಮಹಾವಾತಕ್ಕೆ ಸಿಕ್ಕಿದ ಅರಣ್ಯದಂತೆ ಭಯದಿಂದ ನಡುಗಿಹೋದರು. ಇಂದ್ರಪುತ್ರನಾದ ಆ ಅರ್ಜುನನಿಂದ ಹತರಾದ ಅನೇಕ ವೀರರು, ಭೂಷಣಾಲಂಕೃತಗಳಾದ ತಮ್ಮ ಶರೀರಗಳೊಡನೆಯೂ, ಸುವರ್ಣಚಿತ್ರಿತಗಳಾದ ಉಕ್ಕಿನ ಕವಚಗಳೊಡನೆಯೂ ನೆಲಕ್ಕುರುಳುತಿದ್ದರು. ಹಿಮವತ್ಪರ್ವತದ ಕಾಡಿನಲ್ಲಿ ಚೆನ್ನಾಗಿ ಕೊಬ್ಬಿ ಬೆಳೆದ ಆನೆಗಳಂತೆ ರಣರಂಗದಲ್ಲಿ ಬಿದ್ದು ತಿರುಗಿ ಏಳದಂತೆ ದೀರ್ಘನಿದ್ರೆ ಮಾಡಿದರು. ಹೀಗೆ ಅರ್ಜುನನು ಶತ್ರುಗಳನ್ನು ಕೊಲ್ಲುತ್ತ ಬೇಸಗೆಯ ಕೊನೆಯಲ್ಲಿ ಕಾಡುಗಳನ್ನು ದಹಿಸುವ ಕಾಡುಗಿಚ್ಚಿನಂತೆ ರಣರಂಗದಲ್ಲಿ ಶತ್ರುದುಸ್ಸಹವಾದ ತೇಜಸ್ಸಿನಿಂದ ದಿಕ್ಕು ವಿದಿಕ್ಕುಗಳಲ್ಲೆಲ್ಲ ತಾನೇ ತಾನಾಗಿ ಸಂಚರಿಸುತಿದ್ದನು. ವಸಂತಕಾಲದಲ್ಲಿ ಬಿರುಗಾಳಿಯೆದ್ದು, ತರಗೆಲೆಗಳನ್ನೂ, ನೆಲದ ಧೂಳನ್ನೂ ಆಕಾಶಕ್ಕೆ ಹೊಡೆದುಕೊಂಡು ಹೋಗುವಂತೆ ಅತಿರಥನಾದ ಆ ಅರ್ಜುನನು ರಥಸ್ಥನಾಗಿಯೇ ಶತ್ರುಗಳನ್ನು ತನ್ನ ಬಾಣಗಳಿಂದ ತೂರಿಬಿಡುತಿದ್ದನು. ಮತ್ತು ಆ ಕಿರೀಟಿಯು, ಕರ್ಣನ ಒಡಹುಟ್ಟಿದವನೂ, ಕೆಂಪುಬಣ್ಣದ ರಥಾಶ್ವವುಳ್ಳವನೂ ಆದ ಸಂಗ್ರಾಮಜಿತ್ತೆಂಬವನ ತಲೆಯನ್ನು ಒಂದೇ ಬಾಣದಿಂದ ಕತ್ತರಿಸಿ ಕೆಡಹಿದನು. ತನ್ನ ಸಹೋದರನ ಸಾವನ್ನು ಕಂಡೊಡನೆ ವೀರ್ಯಮದದಿಂದ ಕೊಬ್ಬಿದ ಕರ್ಣನು, ಸಿಂಹವನ್ನಿದಿರಿಸುವುದಕ್ಕಾಗಿ ಉದ್ದವಾದ ಕೊಂಬುಗಳೊಡನೆ ಮುಂದೆ ನುಗ್ಗುವ ಮಹಾಗಜದಂತೆ ಅರ್ಜುನನನ್ನು ಇದಿರಿಸಿ ಬಂದು, ಹನ್ನೆರಡು ಬಾಣಗಳಿಂದ, ಅರ್ಜುನನನ್ನೂ, ಅವನ ಎಲ್ಲಾ ಕುದುರೆಗಳನ್ನೂ, ಸಾರಥಿಯಾದ ಉತ್ತರನನ್ನೂ ಪ್ರಹರಿಸಿದನು. ಆದರೇನು? ಇಷ್ಟರಲ್ಲಿಯೇ ಮಹಾ ಧನುರ್ಧಾರಿಯಾದ ಅರ್ಜುನನು ತನ್ನ ಬಾಣಗಳಿಂದ ಕರ್ಣನ ಮೈಯನ್ನೆಲ್ಲ ಮುಚ್ಚಿ, ಶತ್ರುಗಳನ್ನೆಲ್ಲ ಮುಂದೆ ಬಾರದಂತೆ ತಡೆದು ನಿಲ್ಲಿಸಿದನು. ಮತ್ತು ಆ ಕಿರೀಟಿಯು ಆ ಕರ್ಣನಿಗೆ ಹಿಂದೆ ಮುಂದೆ ಬೆಂಗಾವಲಾಗಿ ಬರುತ್ತಿದ್ದ ಸೈನಿಕರನ್ನೆಲ್ಲ ಕೊಂದು, ಸರ್ವ

ಮಾಡಿದನು. ಇತ್ತಲಿಂದ ಕರ್ಣನೂ, ಅತ್ತಲಿಂದ ಅರ್ಜುನನೂ ಒಬ್ಬರ ಮೇಲೊಬ್ಬರು ತೀಕ್ಷ್ಣಬಾಣಗಳನ್ನು ಪ್ರಯೋಗಿಸಿ, ಅವರಿದ್ದ ಕಡೆಯೇ ತಿಳಿಯದಂತೆ ಮರೆಸುತ್ತಿದ್ದರು. ಅಸ್ತ್ರಜ್ಞರಾದ ಅವರಿಬ್ಬರೂ ಹೀಗೆ ಬಾಣ ವರ್ಷಗಳಿಂದ ಮಾಡುವ ಯುದ್ಧವು ನೋಡುವವರಿಗೆ ಭಯಂಕರವಾಗಿ ಕಾಣಿಸಿತು. ಕ್ಷಣಮಾತ್ರದಲ್ಲಿಯೇ ಅವರಿಬ್ಬರೂ ಪ್ರತಿಬಾಣಗಳನ್ನು ತಮ್ಮ ಬಾಣಗಳಿಂದ ನಿವಾರಿಸಿ, ರಾಹುವಿನಿಂದ ಮುಕ್ತರಾದ ಚಂದ್ರಸೂರ್ಯರಂತೆ ಜನಗಳಿಗೆ ಕಾಣಿಸಿಕೊಂಡರು. ಅರ್ಜುನನ ಬಾಣದಿಂದ ಹತರಾದ ಅನೇಕ ರಥಿಕರು, ಸುವರ್ಣಮಯವಾದ ತಮ್ಮ ಉಕ್ಕಿನ ಕವಚಗಳೊಡನೆ, ಹಿಮ ವತ್ಪರ್ವತದಲ್ಲಿ ಕತ್ತರಿಸಿಬಿದ್ದ ಮರಗಳಂತೆ ನೆಲಕ್ಕುರುಳಿಬಿದ್ದರು. ಹೀಗೆ ಅರ್ಜುನನು ಯುದ್ಧದಲ್ಲಿ ಶತ್ರುಗಳನ್ನು ಹೊಡೆದು ಕೆಡಹುತ್ತಾ, ಕಾಡಿನಲ್ಲಿ ದಾವಾಗ್ನಿಯಂತೆ ಯುದ್ಧರಂಗದಲ್ಲಿ ದಿಕ್ಕುವಿದಿಕ್ಕುಗಳಲ್ಲೆಲ್ಲಾ ತಡೆಯಿಲ್ಲ ದೆ ಸಂಚರಿಸುತ್ತಿದ್ದನು. ಇಂದ್ರನು ತನ್ನ ವೈರಿಗಳಾದ ದಾನವರನ್ನು ಹೇಗೋ ಹಾಗೆ ಅನೇಕ ರಥಿಕರನ್ನು ರಣರಂಗದಿಂದೋಡಿಸಿ, ಇನ್ನೂ ಉಳಿದ ಶತ್ರುಸೈನಿಕರನ್ನು ಬಾಣವರ್ಷದಿಂದ ಮರೆಸುತ್ತಿದ್ದನು. ಆಮೇಲೆ ಅರ್ಜುನನು ಉತ್ಸಾಹದಿಂದ ಗರ್ಜಿಸುತ್ತಾ ಕರ್ಣನನ್ನು ನೋಡಿ, "ಓ ಕರ್ಣಾ! ಹಿಂದೆ ನೀನು ಸಭಾಮಧ್ಯದಲ್ಲಿ 'ಯುದ್ಧದಲ್ಲಿ ನನಗೆ ಸಮಾನರಿಲ್ಲ' ವೆಂದು ಅಸಂಬದ್ಧವಾದ ಎಷ್ಟೋ ಮಾತುಗಳನ್ನಾಡಿದೆಯಲ್ಲವೇ? ಈಗ ಅದರ ನಿಜವನ್ನು ತಿಳಿಯತಕ್ಕ ಕಾಲವು ಬಂದಿದೆ. ಸಭೆಯಲ್ಲಿ ಅಷ್ಟೊಂದು ಪೌರುಷವನ್ನು ಹೇಳಿ, ಧರ್ಮಮಾರ್ಗವನ್ನು ಬಿಟ್ಟು, ನೀನು ಯಾವ ಕಾರ್ಯವನ್ನು ಮಾಡಬೇಕೆಂದಿರುವೆಯೋ, ಅದು ನಿನ್ನಿಂದ ಸಾಗಲಾರ ದೆಂದು ನನಗೆ ಚೆನ್ನಾಗಿ ತಿಳಿದಿದೆ. ಹಿಂದೆ ನೀನು ಕುರುಗಳ ಮುಂದೆ ಯುದ್ಧದಲ್ಲಿ ನನಗೆ ಸಾಟಿಯಿಲ್ಲನೆಂದು ಹೇಳಿದ ಮಾತನ್ನು ಈಗ ನನ್ನೊ ಡನೆ ಯುದ್ಧದಲ್ಲಿ ಸತ್ಯವಾಗಿ ಮಾಡು. ಓ ರಾಧೇಯಾ! ಹಿಂದೆ ದ್ಯೂತ ಸಭೆಯಲ್ಲಿ ನಿನ್ನಿಂದ ಕಷ್ಟಕ್ಕೊಳಗಾಗಿಸಲ್ಪಟ್ಟಿದ್ದ ಪಾಂಚಾಲಿಯನ್ನು ನಾನೂ ಕಣ್ಣಾರ ನೋಡಿದ್ದೆನು. ಆಗ ನಾನು ಧರ್ಮಪಾಶಕ್ಕೆ ಕಟ್ಟುಬಿದ್ದು ಸಹಿಸಬೇಕಾಯಿತು. ಆ ಪಾಪಕ್ಕೆ ಈಗ ಫಲವನ್ನು ಹೊಂದುವೆ ಕರ್ಣ! ಮುಂದೆ ಬಾ! ನನ್ನೊಡನೆ ಯುದ್ಧಮಾಡು. ಈ ಕುರುಗಳೆಲ್ಲರೂ ತಮ್ಮ

ಸೈನ್ಯಗಳೊಡನೆ ನಮ್ಮ ಯುದ್ಧವನ್ನು ನೋಡಲಿ. ಸ್ವಲ್ಪ ಮೊದಲು ನೀನು ನನಗೆ ಹೆದರಿ ರಣರಂಗದಿಂದ ಓಡಿಹೋದವನಲ್ಲವೇ? ಹೀಗೆ ಅವಮಾನಿತನಾಗಿ, ತಮ್ಮನು ಸತ್ತುದನ್ನೂ ಕಣ್ಣಾರೆ ನೋಡಿ, ಇನ್ನೂ ನೀನು ಬದುಕಿರುವೆಯಲ್ಲಾ. ನೀನು ಹೊರತು ಬೇರೆ ಯಾವನುತಾನೇ ಇಂತಹ ಅವಮಾನಕ್ಕೀಡಾಗಿ ಸಾಧುಗಳ ಮುಂದೆ ತನಗೆ ಸಮಾನವಿಲ್ಲವೆಂದು ಹೇಳಿಕೊಳ್ಳುವನು" ಎಂದನು. ಅದಕ್ಕಾ ಕರ್ಣನು, "ಓ ಪಾರ್ಥಾ! ಬರೀ ಮಾತುಗಳಿಂದೇನು? ಅದನ್ನು ಕಾರ್ಯದಲ್ಲಿ ನಡೆಸು. ನೀನು ಮಾತಿನಲ್ಲಿ ನನಗಿಂತಲೂ ನಿಪುಣನೇ. ಆದರೆ ಕಾರ್ಯದಲ್ಲಿಲ್ಲ. ಹಿಂದೆ ನೀನು ಸಹನವನ್ನು ವಹಿಸಿದುದೆಲ್ಲವೂ ಕೈಲಾಗದಿದ್ದುದಕ್ಕಾಗಿಯೇ ಹೊರತು ಬೇರೆಯಲ್ಲ. ನೀನು ಧರ್ಮಪಾಶಕ್ಕೆ ಕಟ್ಟುಬಿದ್ದು ಸುಮ್ಮನಿರಬೇಕಾಯಿತೆಂದು ಹೇಳಿದೆಯಲ್ಲವೇ? ಈಗಲೂ ನೀನು ಅದೇ ಪಾಶಕ್ಕೆ ಬದ್ಧನಾಗಿದ್ದರೂ ಬದ್ಧನಲ್ಲವೆಂದು ತಪ್ಪಾಗಿ ತಿಳಿದುಕೊಂಡಿರುವೆ. ನೀನು ಪ್ರತಿಜ್ಞೆಮಾಡಿದಂತೆ ನಿನ್ನ ವನವಾಸಕಾಲವನ್ನು ಇನ್ನೂ ಸರಿಯಾಗಿ ಮುಗಿಸಿಲ್ಲ. ಅನೇಕ ಕಷ್ಟವನ್ನನುಭವಿಸಿದ ನೀನು ಹಣದಾಸೆಯಿಂದ ಈಗ ಪ್ರತಿಜ್ಞಾಭಂಗಕ್ಕೆ ಪ್ರಯತ್ನಿಸಿರುವೆ. ಓ ಪಾರ್ಥಾ! ಇಂದ್ರನೇ ಸಾಕ್ಷಾತ್ತಾಗಿ ಬಂದು ನಿನಗಾಗಿ ಯುದ್ಧಕ್ಕೆ ನಿಂತರೂ, ಪರಾಕ್ರಮಿಯಾದ ನಾನು ಹಿಂಜರಿಯುವವನಲ್ಲ. ಅರ್ಜುನಾ! ನೀನು ಉದ್ದೇಶಿಸಿದ ಕಾರ್ಯವು ಸಮಾಪಿಸಿತು. ನನ್ನೊಡನೆ ಯುದ್ಧಮಾಡು! ನಿನ್ನ ಬಲವನ್ನು ನೋಡುವೆನು' ಎಂದನು.

ಕರ್ಣನು, ಅರ್ಜುನನಿಗೆ ಹೀಗೆಂದು ಹೇಳಿ, ಉಕ್ಕಿನ ಕವಚಗಳನ್ನೂ ಭೇದಿಸತಕ್ಕ ತೀಕ್ಷ್ಣ ಬಾಣಗಳನ್ನು ಪ್ರಯೋಗಿಸುತ್ತ ಅರ್ಜುನನಿಗಿದಿರಾಗಿ ಹೋದನು. ಮಹಾರಥನಾದ ಅರ್ಜುನನೂಕೂಡ ಉತ್ಸಾಹದಿಂದಲೇ ಆ ಬಾಣಗಳನ್ನು ಪ್ರತಿಗ್ರಹಿಸಿ, ಮೇಘವು ದೊಡ್ಡ ಮಳೆಯನ್ನು ಕರೆಯುವಂತೆ ಬಾಣವರ್ಷವನ್ನು ಕರೆಯುತ್ತ ಗಾಂಡೀವಧ್ವನಿಯೊಡನೆ ಮುಂದೆ ಬಂದನು. ಕರ್ಣನನ್ನು ಕೊಲ್ಲಬೇಕೆಂದು ಅರ್ಜುನನು ಅನೇಕ ಬಾಣಗಳನ್ನು ಬಿಟ್ಟನು. ಪರ್ವತವು ವಾಯುವೇಗವನ್ನು ಹೇಗೋಹಾಗೆ ಕರ್ಣನು ಅವೆಲ್ಲವನ್ನೂ ತಡೆದು ನಿಂತನು. ದೇವಾಸುರರಿಗೆ ಹೇಗೋಹಾಗೆ

ಅವರಿಬ್ಬರಿಗೂ ಪ್ರಬಲ ಯುದ್ಧವು ನಡೆಯಿತು. ಅವರ ಬಾಣಗಳು ಆಕಾಶವನ್ನೆಲ್ಲ ನಿಬಿಡವಾಗಿ ತುಂಬಿತು. ಮೇಘಗಳೆಲ್ಲವೂ ನಾನಾಕಡೆಗೆ ಚದರಿದುವು. ಭೂಮಿಯಿಂದ ಪ್ರಬಲವಾದ ರಜೋವರ್ಷವು ಉಂಟಾಯಿತು. ಸೂರ್ಯನ ಕಾಂತಿಯು ಮರೆಸಿಹೋಯಿತು. ಗಾಳಿಯು ಬೀಸದಂತಾಯಿತು. ಆಕಾಶವೆಲ್ಲ ಬಾಣದಲ್ಲಿ ಮುಚ್ಚಿ ಕತ್ತಲೆ ಕವಿದಂತಾಯಿತು. ಗಾಂಡೀವಧ್ವನಿಯೂ, ಕರ್ಣನ ಬಿಲ್ಲಿನ ಧ್ವನಿಯೂ, ಕಾಡುಗಿಚ್ಚಿನಲ್ಲಿ ಬೇಯುವ ಬಿದುರುಮೆಳೆಗಳ ಛಟಛಟಾತ್ಕಾರದಂತೆ ಭಯಂಕರವಾಗಿ ಕೇಳಿಸಿತು. ಅರ್ಜುನನು ಕುದುರೆಗಳನ್ನೂ, ಆನೆಗಳನ್ನೂ, ರಥಗಳನ್ನೂ ಕೆಡಹುತ್ತ, ಶತ್ರುಸೈನ್ಯವನ್ನೆಲ್ಲ ಕಲಕಿ, ಕರ್ಣನನ್ನು ಬಾಣಗಳಿಂದ ಹೊಡೆಯುತಿದ್ದನು. ಕರ್ಣನ ಕೈಯ್ಯಲ್ಲಿದ್ದ ಧನುಸ್ಸನ್ನೂ ಕತ್ತರಿಸಿದನು. ಧನುಸ್ಸು ಮುರಿದಮೇಲೆ ಕರ್ಣನು ಒಂದು ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ಅದನ್ನೂ ಅರ್ಜುನನು ತೀಕ್ಷ್ಣಬಾಣಗಳಿಂದ ಛೇದಿಸಿದನು. ಆಮೇಲೆ ಕರ್ಣನಿಗೆ ಅಂಗರಕ್ಷಕರಾಗಿದ್ದ ಅನೇಕವೀರರು ನಾನಾಕಡೆಗಳಿಂದ ಮೇಲೆಬಿದ್ದು ಬರಲು, ಅವರನ್ನೂ ಅರ್ಜುನನು ಬಾಣಗಳಿಂದ ಯಮಪುರಿಗೆ ಕಳುಹಿಸಿದನು. ಅರ್ಜುನನ ಬಾಣಗಳಿಗಿದಿರಾಗಿ ಸಿಕ್ಕಿದ ಎಷ್ಟೋ ಆನೆಗಳು ನೆಲಕ್ಕುರುಳಿಬಿದ್ದುವು. ಚಿನ್ನದ ಹೊರಜಿಗಳೊಡನೆ ವಿಚಿತ್ರಬಾಣಗಳಿಂದ ನಾಟಿದ ದೇಹವುಳ್ಳ ಆನೆಗಳು, ಕಾಡುಗಿಚ್ಚು ಹತ್ತಿಕೊಂಡು ಉರಿಯುವ ಬೆಟ್ಟಗಳಂತೆ ಕಾಣುತ್ತಿದ್ದುವು. ಅರ್ಜುನನು ಮಾಡತಕ್ಕ ಈ ಅಮಾನುಷಕೃತ್ಯಗಳನ್ನು ನೋಡಿ ಸಹಿಸಲಾರದೆ ಕರ್ಣನು ಆ ಅರ್ಜುನನನ್ನೇ ಗುರಿಮಾಡಿ ಬಾಣಗಳನ್ನು ಬಿಡತೊಡಗಿದನು. ನಾಲ್ಕು ಬಾಣಗಳಿಂದ ಅರ್ಜುನನ ನಾಲ್ಕು ಕುದುರೆಗಳನ್ನು ಪ್ರಹರಿಸಿದನು. ಆರು ಬಾಣಗಳಿಂದ ಸಾರಥಿಯನ್ನೂ, ತಿರುಗಿ ಹತ್ತು ಬಾಣಗಳಿಂದ ಕುದುರೆಗಳನ್ನೂ, ಅರುವತ್ತು ಬಾಣಗಳಿಂದ ಅರ್ಜುನನನ್ನೂ, ಮೂರು ಬಾಣಗಳಿಂದ ಧ್ವಜವನ್ನೂ ಹೊಡೆದನು. ಬಾಣಜ್ವಾಲೆಗಳೆಂಬ ಕಿಡಿಗಳಿಂದಲೂ, ಭಯಂಕರವಾದ ಘೋಷವೆಂಬ ಛಟಛಟತ್ಕಾರದಿಂದಲೂ, ಕೋಪವೆಂಬ ಕಟ್ಟಿಗೆಯಿಂದಲೂ, ಧ್ವಜವೆಂಬ ಶಿಖೆಯಿಂದಲೂ ಕೂಡಿದ ಕರ್ಣನೆಂಬ ಅಗ್ನಿಯು, ಅಸ್ತ್ರಗಳೆಂಬ ಗಾಳಿಯಿಂದ ಪ್ರಬಲವಾಗಿ, ಅರ್ಜುನನೆಂಬ ಪೊದೆಯನ್ನು ದಹಿಸು

ತನ್ನ ಬಾಣಗಳೆಂಬ ಬಲೆಯಿಂದ ಅರ್ಜುನನ ರಥವನ್ನೆಲ್ಲ ಮುಚ್ಚಿಬಿಟ್ಟನು. ಚೆನ್ನಾಗಿ ಸಾಣೆಯಿಕ್ಕಿ ಹೊಳೆಯುತ್ತಿರುವ ತನ್ನ ಬಾಣಪರಂಪರೆಗಳಿಂದ ದಿಕ್ಕುಗಳನ್ನೆಲ್ಲ ಮರೆಸಿಬಿಟ್ಟನು. ಅತ್ತಲಾಗಿ ಅರ್ಜುನನೂ ಹಿಂಜರಿಯದೆ, ಪರ್ವತದಮೇಲೆ ಮೇಘವು ಮಳೆಯನ್ನು ಕರೆದಂತೆ, ಮಹಾವೇಗವುಳ್ಳ ನೂರಾರು ಬಾಣಗಳಿಂದ ದ್ರೋಣನ ರಥದಮೇಲೆ ಬಾಣವರ್ಷವನ್ನು ಕರೆದನು. ತಿರುಗಿ ದ್ರೋಣನು ಅರ್ಜುನನ ರಥವನ್ನು ತನ್ನ ವಿಚಿತ್ರ ಬಾಣಗಳಿಂದ ಮುಚ್ಚಿದನು. ಅತ್ತಲಾಗಿ ಅರ್ಜುನನೂ ಮೇಲೆಮೇಲೆ ಕೋಪಗೊಂಡು, ಶತ್ರುನಾಶಕವಾದ ಗಾಂಡೀವವೆಂಬ ತನ್ನ ದಿವ್ಯ ಧನುಸ್ಸಿನಿಂದ, ಚಿತ್ರವಿಚಿತ್ರಗಳಾದ ಹಲವು ಬಾಣಗಳನ್ನು ಬಿಟ್ಟು, ದ್ರೋಣನ ರಥವನ್ನು ಮುಚ್ಚಿದುದಲ್ಲದೆ, ದ್ರೋಣನಿಂದ ಬಿಡಲ್ಪಟ್ಟ ಬಾಣಗಳನ್ನೆಲ್ಲ ನಡುದಾರಿಯಲ್ಲಿಯೇ ನಿಗ್ರಹಿಸಿದನು. ಮಹಾರಥನೆನಿಸಿದ ಅರ್ಜುನನು, ಆಗ ರಥಸಹಿತನಾಗಿ, ನಿಂತಲ್ಲಿ ನಿಲ್ಲದೆ ಸಂಚರಿಸುತ್ತ ಏಕಕಾಲದಲ್ಲಿ ತನ್ನ ಅಸ್ತ್ರಗಳಿಂದ ಅನೇಕ ದಿಕ್ಕುಗಳನ್ನು ತುಂಬಿಬಿಟ್ಟನು. ಆಗ ಆ ಅರ್ಜುನನು ತಾನು ಬಾಣಗಳನ್ನು ತೆಗೆಯುವುದಾಗಲಿ, ಬಿಲ್ಲಿನಲ್ಲಿ ಸೇರಿಸುವುದಾಗಲಿ, ಅವುಗಳನ್ನು ಪ್ರಯೋಗಿಸುವುದಾಗಲಿ, ಯಾರಿಗೂ ತಿಳಿಯದಂತೆ ತನ್ನ ಹಸ್ತಲಾಘವವನ್ನು ತೋರಿಸುತಿದ್ದನು. ಆಕಾಶವನ್ನೆಲ್ಲ ಅರ್ಜುನನ ಬಾಣಚ್ಛಾಯೆಯೊಂದೇ ಮರೆಸಿಬಿಟ್ಟಿತು. ಮಂಜಿನಲ್ಲಿ ಮುಚ್ಚಿಹೋದ ಬೆಟ್ಟದಂತೆ ದ್ರೋಣನು ಬಾಣಗಳಲ್ಲಿ ಮುಚ್ಚಿಹೋಗಿ, ಅವನಿದ್ದ ಸ್ಥಳವೇ ತಿಳಿಯದಂತಾಯಿತು. ಅತ್ತಲಾಗಿ ಅರ್ಜುನನ ದೇಹವೂ ಕೂಡ, ದ್ರೋಣನ ನೂರಾರು ಬಾಣಗಳಿಂದ ನಾಟಲ್ಪಟ್ಟು, ಕಿರಣಾವೃತವಾದ ಸೂರ್ಯಬಿಂಬದಂತೆ ಕಾಣಿಸುತಿತ್ತು. ದ್ರೋಣನೂ ಕೂಡ, ಅರ್ಜುನನ ಬಾಣಗಳನ್ನೆಲ್ಲ ತನ್ನ ಬಾಣಗಳಿಂದಡಗಿಸಿ, ರಾತ್ರಿಯ ಅಂಧಕಾರವನ್ನು ನೀಗಿಸಿ, ಆಕಾಶದಲ್ಲಿ ಉದಿಸಿ ಬರುವ ಸೂರ್ಯನಂತೆ ಕಾಣಿಸಿಕೊಂಡನು. ದ್ರೋಣಾರ್ಜುನರಿಬ್ಬರೂ ಅಗ್ನಿಚಕ್ರದಂತೆ ಕುಂಡಲಾಕಾರವುಳ್ಳ ಭಯಂಕರವಾದ ದೊಡ್ಡ ಬಿಲ್ಲುಗಳನ್ನೆಳೆದು, ಪರಂಪರೆಯಾಗಿ ಬಾಣಗಳನ್ನು ಬಿಡುತ್ತಿರಲು, ಅವರ ಹಸ್ತಲಾಘವವನ್ನು ಜನರೆಲ್ಲರೂ ಆಶ್ಚರ್ಯದಿಂದ ನೋಡುತ್ತಿದ್ದರು. ಸಿಡಿಲಿನಂತೆ ಘೋರವಾದ ದ್ರೋಣನ ಧನುಷ್ಟಂಕಾರಶಬ್ದವು ಸಮಸ್ತ

ದಿಕ್ಕುಗಳನ್ನೂ ಮೊಳಗಿಸುತ್ತ, ಸೈನ್ಯಗಳಿಗೆಲ್ಲ ಆತ್ಯಾಶ್ಚರ್ಯಕರವಾಗಿ ಕೇಳಿಸಿತು. ದ್ರೋಣನು ಅಗ್ನಿಸಮಾನಗಳಾದ ಮತ್ತು ಸುವರ್ಣಮಯ ಗಳಾದ ಬಾಣಗಳಿಂದ ದಿಕ್ಕುಗಳನ್ನೂ, ಸೂರ್ಯಪ್ರಭೆಯನ್ನೂ ಮರೆಸಿ ಬಿಟ್ಟನು. ಆಕಾಶದಲ್ಲಿ ಎಲ್ಲಿ ನೋಡಿದರೂ ಚಿನ್ನದ ಹಿಡಿಗಳುಳ್ಳ ಬಾಣ ಸಮೂಹಗಳೇ ಹಾರಾಡುತಿದ್ದುವು. ದ್ರೋಣನ ಧನುಸ್ಸಿನಿಂದ ಹೊರಟ ಬಾಣಪರಂಪರೆಗಳೆಲ್ಲ ಆಕಾಶದಲ್ಲಿ ದೀರ್ಘವಾದ ಒಂದೇ ರೇಖಾಕಾರವಾಗಿ, ಹಾರಾಡುತ್ತಿರುವ ಹಂಸಶ್ರೇಣಿಯಂತೆ ಕಾಣಿಸಿತು. ಆ ದ್ರೋಣಾರ್ಜುನ ರಿಬ್ಬರೂ ಸುವರ್ಣಮಯಗಳಾದ ಬಾಣಗಳಿಂದ ಆಕಾಶವೆಲ್ಲವನ್ನೂ ಉಲ್ಕೆ ಗಳಿಂದ (ಆಕಾಶದ ಕೊಳ್ಳಿ) ತುಂಬಿದಂತೆ ಮಾಡಿದರು. ಹದ್ದಿನ ಗರಿಗ ಳುಳ್ಳ ಅವರ ಬಾಣಗಳ ಸಾಲು, ಶರತ್ಕಾಲದಲ್ಲಿ ಆಕಾಶದಲ್ಲಿ ಹಾರಿಹೋಗುವ ಸಾರಸಪಕ್ಷಿಗಳ ಸಾಲಿನಂತೆ ಕಾಣಿಸುತಿತ್ತು. ಆಗಿನ ದ್ರೋಣಾರ್ಜುನರ ಯುದ್ಧವು, ವೃತ್ರ ವಾಸವರ ಯುದ್ಧದಂತೆ ಮಹಾ ಘೋರವಾಗಿ, ಅತ್ಯಾ ಶ್ಚರ್ಯಕರವಾಗಿ, ಮತ್ತು ಹೀಗೆಂದು ಊಹಿಸುವುದಕ್ಕೂ ಅಸಾಧ್ಯವೆನಿ ಸಿತು. ಮದದಾನೆಗಳು ಕೊಂಬುಗಳಿಂದ ತಿವಿದಾಡುವಂತೆ, ಅವರಿಬ್ಬರೂ ಆಕರ್ಣಾಕೃಷ್ಟವಾದ ಬಾಣಗಳಿಂದ ಹೊಡೆದಾಡಿದರು. ದ್ರೋಣಾಚಾ ರ್ಯರಿಂದ ಪ್ರಯೋಗಿಸಲ್ಪಟ್ಟ ತೀಕ್ಷ್ಣ ಬಾಣಗಳನ್ನು ಅರ್ಜುನನು ತನ್ನ ಬಾಣಗಳಿಂದ ಅಲ್ಲಲ್ಲಿಯೇ ಮುರಿಯುತ್ತ ಬಂದುದಲ್ಲದೆ, ತನ್ನಲ್ಲಿರುವ ಇಂದ್ರ ತೇಜಸ್ಸನ್ನು ತೋರಿಸುತ್ತ ಕ್ಷಣಮಾತ್ರದಲ್ಲಿ ಬಾಣಗಳಿಂದ ಆಕಾಶವನ್ನೆಲ್ಲ ಮರೆಸಿದನು. ತನ್ನನ್ನು ಹೊಡೆಯಬೇಕೆಂದು ಪ್ರಯತ್ನಿಸುತಿದ್ದ ಅರ್ಜು ನನನ್ನು ದ್ರೋಣನೂ ತನ್ನ ಬಾಣಗಳಿಂದ ನಿವಾರಿಸಿದನು. ಯುದ್ಧವಿಶಾ ರದನಾದ ತನ್ನ ಶಿಷ್ಯನೊಡನೆ ಯುದ್ಧಕ್ರೀಡೆಯನ್ನಾಡುವುದರಲ್ಲಿ ದ್ರೋಣ ನಿಗೆ ಸಂತೋಷವು ಮೇಲೆಮೇಲೆ ಹೆಚ್ಚಿತು. ಆ ಗುರುಶಿಷ್ಯರಿಬ್ಬರೂ ಬ್ರಹ್ಮಾದಿ ದಿವ್ಯಾಸ್ತ್ರಗಳಿಂದ ಒಬ್ಬರನ್ನೊಬ್ಬರು ಪ್ರಹರಿಸುತ್ತಿದ್ದರು. ರಣ ಶೂರನಾದ ಪಾರ್ಥನು, ತನ್ನ ವೀರ್ಯವನ್ನು ಪ್ರಕಾಶಗೊಳಿಸುವ ಅನೇಕಾ ಸ್ತ್ರಗಳಿಂದ ದ್ರೋಣನನ್ನು ಹೊಡೆದು, ಅವನು ಪ್ರಯೋಗಿಸಿದ ಅಸ್ತ್ರಗಳೆಲ್ಲ ವನ್ನೂ ತನ್ನ ಅಸ್ತ್ರಗಳಿಂದ ನಿವಾರಿಸಿದನು. ಪುರುಷಶ್ರೇಷ್ಠರೆನಿಸಿದ ಅವರಿ ಬ್ಬರೂ ಒಬ್ಬರ ಪರಾಕ್ರಮವನ್ನು ಮತ್ತೊಬ್ಬರು ಸಹಿಸಲಾರದೆ, ಕೋಪ

ಮುರಿದುಹೋಗಲು, ಗಾಯಪಟ್ಟ ದೇಹದೊಡನೆ ಯುದ್ಧವನ್ನು ಬಿಟ್ಟು ಹೊರಟುಹೋದನು. ಅಶ್ವತ್ಥಾಮನು, ತನ್ನ ತಂದೆಗೆ ಉಂಟಾದ ಪರಾಜಯವನ್ನು ನೋಡಿ ಸಹಿಸಲಾರದೆ ಕೋಪಾವೇಶದಿಂದ ದಂಡಪಾಣಿಯಾದ ಯಮನಂತೆ ತಾನೇ ಮುಂದೆಬಂದು ಯುದ್ಧಕ್ಕೆ ನಿಂತನು.

ಇದು ಐವತ್ತೊಂಭತ್ತನೆಯ ಅಧ್ಯಾಯವು.

## ಅಶ್ವತ್ಥಾಮನ ಪರಾಜಯವು.

ಓ ಜನಮೇಜಯರಾಜಾ! ಕೇಳು! ಅಶ್ವತ್ಥಾಮನು ಅಷ್ಟು ತೀವ್ರಕೋಪದಿಂದ ಮುಂದೆ ಬರುತ್ತಿರುವಾಗ, ಪರ್ವತವು ಬಿರುಗಾಳಿಯ ವೇಗವನ್ನು ತಡೆಗಟ್ಟುವಂತೆ, ಅರ್ಜುನನು ಅವನನ್ನು ಇದಿರಿಸಿ ತಡೆದನು. ಮೇಘವು ಮಳೆಯನ್ನು ಸುರಿಯುವಂತೆ ಒಬ್ಬರಮೇಲೊಬ್ಬರು ಬಾಣವರ್ಷವನ್ನು ಕರೆದರು. ದೇವಾಸುರ ಯುದ್ಧದಂತೆ ಅವರಿಬ್ಬರಿಗೂ ಪ್ರಬಲಯುದ್ಧವಾಯಿತು. ವೃತ್ರವಾಸವದಂತೆ ಇಬ್ಬರೂ ಬಾಣವರ್ಷಗಳಿಂದ ಹೋರಾಡಿದರು. ಅವರಿಬ್ಬರ ಬಾಣಗಳಿಂದ ಸೂರ್ಯಪ್ರಕಾಶವೇ ಮರೆಸಿಹೋಯಿತು. ಗಾಳಿಯು ಬೀಸದಂತಾಯಿತು. ಆಕಾಶವನ್ನೆಲ್ಲ ಬಾಣಛ್ಛಾಯೆಯೊಂದೇ ಆವರಿಸಿತು. ಅವರ ಬಾಣಪಾತಧ್ವನಿಯು, ಉರಿಯುವ ಬಿದಿರುಮೆಳೆಗಳ ಛಟಾಛಟಾತ್ಕಾರದಂತೆ ಭಯಂಕರವಾಗಿ ಕೇಳಿಸಿತು. ಅರ್ಜುನನು ತನ್ನ ಬಾಣಘಾತದಿಂದ ಅಶ್ವತ್ಥಾಮನ ಕುದುರೆಗಳ ವೇಗವನ್ನೆಲ್ಲ ಅಡಗಿಸಿಬಿಟ್ಟನು. ಆ ಕುದುರೆಗಳಿಗೆ ಮೂರ್ಛೆಬಂದಂತಾಗಿ ಅವುಗಳಿಗೆ ದಿಕ್ಕೇ ತೋರದಂತಾಯಿತು. ಇಷ್ಟರಲ್ಲಿ ಅಶ್ವತ್ಥಾಮನು ಸರಿಯಾದ ಸಮಯವನ್ನು ನೋಡಿಕೊಂಡಿದ್ದು, ಮುಂದೆ ಬರುತ್ತಿದ್ದ ಅರ್ಜುನನ ಬಿಲ್ಲಿನ ನಾಣನ್ನು ಒಂದು ಬಾಣದಿಂದ ಕತ್ತರಿಸಿಬಿಟ್ಟನು. ಬೇರೆ ಮನುಷ್ಯರಿಗೆ ಸಾಧ್ಯವಲ್ಲದ ಈ ಕಾರ್ಯವನ್ನು ನೋಡಿ ದೇವತೆಗಳು “ಭಲೆ! ಭಲೆ!” ಎಂದು ಅಶ್ವತ್ಥಾಮನನ್ನು ಕೊಂಡಾಡಿದರು. ಅಲ್ಲದೆ, “ಈ ಅಶ್ವತ್ಥಾಮನು

## ಅರ್ಜುನನಿಗೆ ಏಕಕಾಲದಲ್ಲಿ ದ್ರೋಣಾದಿಗಳೆಲ್ಲರೊಡನೆ ಯುದ್ಧವು.

ಓ ಜನಮೇಜಯರಾಜಾ! ಕೇಳು! ಇಷ್ಟರಲ್ಲಿಯೇ ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ಮಹಾರಥನಾದ ಕೃಪಾಚಾರ್ಯನು ಅರ್ಜುನನನ್ನಿದಿರಿಸುವುದಕ್ಕೆ ಬಂದನು. ಇದನ್ನು ನೋಡಿ ಅರ್ಜುನನೂ, ಅಶ್ವತ್ಥಾಮನ ರಥವನ್ನು ಬಿಟ್ಟು, ಕೃಪಾಚಾರ್ಯನ ರಥವಿದ್ದಕಡೆಗೆ ವೇಗದಿಂದ ಬಂದನು. ಮಹಾರಥರಾದ ಅವರಿಬ್ಬರೂ, ಮಳೆಗಾಲದ ಮೇಘಗಳು ಒಂದನ್ನೊಂದು ಇದಿರಿಸುವಂತೆ ಕಾಣಿಸಿದರು. ಅರ್ಜುನನು ಲೋಕಪ್ರಖ್ಯಾತವಾದ ತನ್ನ ಗಾಂಡೀವವನ್ನು ತೆಗೆದುಕೊಂಡು, ಬಾಣಪರಂಪರೆಗಳಿಂದ ಕೃಪನನ್ನು ಪ್ರಹರಿಸುತ್ತ ಬಂದನು. ಕೃಪನೂ ತನ್ನ ಧನುಸ್ಸನ್ನು ತೆಗೆದು ಬಾಣಗಳನ್ನು ಬಿಡುತ್ತ ಅರ್ಜುನನಿಗಿದಿರಾದನು. ಕೃಪನು ತನ್ನ ದೃಢವಾದ ಬಿಲ್ಲನ್ನು ಹಿಡಿದು, ಮಳೆಗಾಲವಲ್ಲಿ ಮೇಘವು ಮಳೆಸುರಿಸುವಂತೆ ರಕ್ತವನ್ನು ಹೀರತಕ್ಕ ಬಾಣಗಳನ್ನು ನೂರುಸಾವಿರ ಲೆಕ್ಕದಿಂದ ಅರ್ಜುನನ ಮೇಲೆ ವರ್ಷಿಸಿದನು ಆ ಕೃಪನ ಬಾಣಪ್ರಯೋಗವು ಅವನ ಕಡೆಯವರೆಲ್ಲರಿಗೂ ಸಂತೋಷಕರವಾಗಿದ್ದಿತು. ಅತ್ತಲಾಗಿ ಅರ್ಜುನನು ಕೂಡ ರಣರಂಗದಲ್ಲಿ ಚಿತ್ರಗತಿಗಳಿಂದ ಸಂಚರಿಸುತ್ತ, ತನ್ನ ಬಲವಾದ ಬಿಲ್ಲಿನಿಂದ ದಿಕ್ಕುವಿದಿಕ್ಕುಗಳನ್ನೆಲ್ಲ ಮರೆಸುವಂತೆ ಬಾಣಗಳನ್ನು ಪ್ರಯೋಗಿಸಿದನು. ಆಕಾಶವೆಲ್ಲ ಒಂದೇ ನೆಳಲಾಗಿ ಬಾಣಸಮೂಹಗಳಿಂದ ಮರೆಸಿಹೋಯಿತು. ಮೇಘವು ವರ್ಷಧಾರೆಯಿಂದ ಬೆಟ್ಟವನ್ನು ಹೇಗೋಹಾಗೆ ಅರ್ಜುನನು ನೂರಾರು ಬಾಣಗಳಿಂದ ಕೃಪನನ್ನು ಮರೆಸಿಬಿಟ್ಟನು. ಅಗ್ನಿಜ್ವಾಲೆಯಂತಿರುವ ಬಾಣಗಳ ಪ್ರಹಾರದಿಂದ ಕೋಪಗೊಂಡ ಕೃಪಾಚಾರ್ಯನು, ಹೊಗೆಯಿಲ್ಲದ ಬೆಂಕಿಯಂತೆ ಉರಿಯುತ್ತ, ಸಾವಿರಾರು ಬಾಣಗಳನ್ನು ಪಾರ್ಥನಮೇಲೆ ಪ್ರಯೋಗಿಸಿ, ದೊಡ್ಡದೊಂದು ಸಿಂಹನಾದವನ್ನು ಮಾಡಿದನು. ಆಮೇಲೆ ಅರ್ಜುನನು ಚಿನ್ನದ ಹಿಡಿಯುಳ್ಳ ಒಂದು ತೀಕ್ಷ್ಣಬಾಣದಿಂದ ಕೃಪನ ಧ್ವಜವನ್ನು ಕತ್ತರಿಸಿ ಕೆಡಹಿದನು. ಸೂರ್ಯಸಮಾನಗಳಾದ ಇನ್ನೂ ಅನೇಕ ಬಾಣಗಳನ್ನು ತೆಗೆದು, ಕೃಪನ ರಥಕ್ಕೆ ಕಾವ

ಲಾಗಿದ್ದ ಮಹಾರಥರನೇಕರನ್ನು ಹೊಡೆದನು. ಚಂದ್ರಕೇತು, ಸುಕೇತು, ಚಿತ್ರಾಶ್ವ, ಮಣಿಮಂತ, ಮುಂಜಮೌಳಿ, ಹೇಮವರ್ಣ, ಸುರಥ, ಅತಿರಥ, ಸುಷೇಣ, ಅರಿಷ್ಟ, ನೃಕೇತು, ಮುಂತಾದ ಆ ರಥರಕ್ಷಕರೆಲ್ಲರೂ ತಮ್ಮ ತಮ್ಮ ಸೈನ್ಯಗಳೊಡನೆ ಹತರಾಗಿ ಸತ್ತುಬಿದ್ದರು. ನಿಮಿಷಮಾತ್ರದಲ್ಲಿ ಅವರನ್ನೆಲ್ಲ ಕೊಂದಮೇಲೆ ತಿರುಗಿ ಅರ್ಜುನನು, ಬೇರೆ ಹದಿಮೂರು ಬಾಣ ಗಳನ್ನು ತೆಗೆದುಕೊಂಡು, ಒಂದರಿಂದ ಕೃಪನ ರಥವೇಗವನ್ನೂ, ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನೂ, ಆರನೆಯ ಬಾಣದಿಂದ ಕೃಪನ ರಥವನ್ನು ನಡೆಸುತ್ತಿದ್ದ ಸಾರಥಿಯ ತಲೆಯನ್ನೂ, ಮೂರು ಬಾಣ ಗಳಿಂದ ರಥದ ಮೂಕಿಯನ್ನೂ, ಎರಡು ಬಾಣಗಳಿಂದ ರಥದ ಅಚ್ಚನ್ನೂ, ಹನ್ನೆರಡನೆಯ ಬಾಣದಿಂದ ಬಾಣಸಹಿತವಾಗಿ ಕೃಪನ ಕೈಯ್ಯಲ್ಲಿದ್ದ ಧನು ಸ್ಸನ್ನೂ ಕತ್ತರಿಸಿ, ಹದಿಮೂರನೆಯ ಬಾಣವನ್ನು ಕೃಪನ ಎದೆಗೆ ಗುರಿ ಯಿಟ್ಟು ಹೊಡೆದನು. ಆಗ ತನ್ನ ರಥಾಶ್ವ ಸಾರಥಿಗಳೆಲ್ಲರೂ ಹೋಗಿ, ಕೈಯಲ್ಲಿದ್ದ ಬಿಲ್ಲೂ ಕತ್ತರಿಸಿಹೋದುದಕ್ಕಾಗಿ ಕೃಪನು ಕೋಪಗೊಂಡು ಸೂರ್ಯಾಗ್ನಿ ತೇಜಸ್ಸುಳ್ಳ ಒಂದು ಶಕ್ತಿಯನ್ನು ತೆಗೆದು ಅರ್ಜುನನಮೇಲೆ ಬೀಸಿದನು. ಆ ಶಕ್ತಿಯು ಬರುತ್ತಿದ್ದಾಗಲೇ ಅರ್ಜುನನು ಅರ್ಧಚಂದ್ರ ಮುಖವುಳ್ಳ ಹತ್ತು ಬಾಣಗಳಿಂದ ಅದನ್ನು ಕತ್ತರಿಸಿಬಿಟ್ಟನು. ಅದು ಹತ್ತು ತುಂಡಾಗಿ ನೆಲಕ್ಕೆ ಬಿದ್ದಿತು. ಇತ್ತಲಾಗಿ ಕೃಪನು, ತನ್ನ ಶಕ್ತ್ಯಾಯು ಧವೂ ವಿಫಲವಾಗಿ, ರಥವೂ ಹೋಗಿ, ತನಗೂ ಬಾಣದಿಂದ ಪೆಟ್ಟಾದು ದನ್ನು ಸಹಿಸಲಾರದೆ, ಒಡನೆಯೇ ರಥದಿಂದ ಕೆಳಕ್ಕೆ ದುಮುಕಿ, ತನ್ನ ರೂಪದಿಂದ ಕೆತ್ತಿದ ಒಂದು ದೊಡ್ಡ ಗದೆಯನ್ನು ಅರ್ಜುನನಮೇಲೆ ಬೀಸಿ ದನು. ಆ ಗದೆಯನ್ನೂ ಅರ್ಜುನನು ತನ್ನ ಬಾಣಗಳಿಂದ ತಡೆದು, ಅದು ತಾನು ಬಂದ ದಾರಿಯನ್ನೇ ಹಿಡಿದುಹೋಗುವಂತೆ ಮಾಡಿದನು. ಆಮೇಲೆ ಕೃಪನು ಒಂದು ಕತ್ತಿಯನ್ನೂ, ಗುರಾಣಿಯನ್ನೂ ಹಿಡಿದು ಪಾಂಡವನನ್ನು ಹೊಡೆಯುವುದಕ್ಕೋಸ್ಕರ ವೇಗದಿಂದ ಮುಂದೆ ಹೋದನು. ಕೌರವರಿಗೆ ಪರಮಾಚಾರ್ಯನೂ ಯುದ್ಧದಲ್ಲಿ ಸುಶಿಕ್ಷಿತನೂ ಆದ ಕೃಪನು, ರಣರಂಗ ದಲ್ಲಿ ಕತ್ತಿ ಗುರಾಣಿಗಳನ್ನು ಹಿಡಿದು, ನಿಂತಲ್ಲಿ ನಿಲ್ಲದೆ ಗಗನಚಾರಿಯಂತೆ ವೇಗದಿಂದ ಸುತ್ತಾಡುತ್ತಿದ್ದನು. ಇಷ್ಟರಲ್ಲಿಯೇ ಅರ್ಜುನನು ಕ್ಷುರಪ್ರಗ

ವುದರಿಂದಾದ ಧ್ವನಿಗಳು ಅತಿಪ್ರಬಲವಾಗಿ ಕೇಳಿಸುತ್ತಿತ್ತು. ಕೈಯಿಂದ ಶಸ್ತ್ರಗಳು ಜಾರಿಬಿದ್ದುದನ್ನೂ ತಿಳಿಯದೆ, ಕುದುರೆಗಳಿಂದ ಕೆಳಗೆ ಬಿದ್ದ ರಾಹುತರ ಶರೀರಗಳು ಯುದ್ಧಭೂಮಿಯಷ್ಟನ್ನೂ ಮರೆಸಿದುವು. ಅರ್ಜುನನೂ ತನ್ನ ಬಾಣಗಳಿಂದ ರಥವೆಲ್ಲವನ್ನೂ ಶೂನ್ಯವನ್ನಾಗಿ ಮಾಡಿದನು. ಮನುಷ್ಯದೇಹದಿಂದ ಭೂಮಿಯೆಲ್ಲವನ್ನೂ ಹರಡಿದನು. ಯುದ್ಧರಂಗದಲ್ಲಿ ಕುಣಿದಾಡುವವನಂತೆ ಅರ್ಜುನನು ಅನೇಕಕ್ಷತ್ರಿಯರ ತಲೆಗಳನ್ನು ಉರುಳಿಸಿಬಿಟ್ಟನು. ಸಿಡಿಲಿನ ಧ್ವನಿಯಂತಿರುವ ಗಾಂಡೀವಧ್ವನಿಯನ್ನು ಕೇಳಿಯೇ ಸೈನ್ಯಗಳು ಭಯಪಟ್ಟು ಬೆದರಿ ಅಲ್ಲಲ್ಲಿ ಅಡಗಿಕೊಂಡುವು. ಕಡುಕುಗಳಿಂದಲೂ, ತಲೆಪಾಗುಗಳಿಂದಲೂ, ಸುವರ್ಣಮಾಲಿಕೆಗಳಿಂದಲೂ ಕೂಡಿದ ಎಷ್ಟೋ ತಲೆಗಳು ರಣರಂಗದಲ್ಲಿ ಬಿದ್ದಿದ್ದುವು. ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟ ತೋಳುಗಳು ಕೈಯಲ್ಲಿ ಹಿಡಿದ ಬಿಲ್ಲುಗಳೊಡನೆಯೂ, ಕೈಬಳೆಗಳೊಡನೆಯೂ ಬಿದ್ದಿದ್ದುವು. ಅರ್ಜುನನು ತನ್ನ ತೀಕ್ಷ್ಣಬಾಣಗಳಿಂದ ಹಾರಿಸಿದ ತಲೆಗಳು ಆಕಾಶದಿಂದ ಕಲ್ಲುಮಳೆಗಳು ಬೀಳುವಂತೆ ಉದಿರುತ್ತಿದ್ದುವು. ಹೀಗೆ ಅರ್ಜುನನು ತನ್ನ ರೌದ್ರಾವೇಶವನ್ನು ತೋರಿಸುತ್ತ ಶತಸಹಸ್ರಸಂಖ್ಯೆಯ ಶೂರರನ್ನು ಕೊಂದು ಕೆಡಹಿದನು. ಹಿಂದೆ ವನವಾಸಾದಿಗಳಿಂದ ಹದಿಮೂರುವರ್ಷಗಳವರೆಗೆ ತನ್ನಲ್ಲಿಯೇ ಅಡಗಿಸಿಕೊಂಡಿದ್ದ ಕೋಪಾಗ್ನಿಯನ್ನು, ಆಗಿನ ಯುದ್ಧದಲ್ಲಿ ಅರ್ಜುನನು ಕೌರವರಮೇಲೆ ಉರುಬಿಬಿಟ್ಟನು. ಹೀಗೆ ಸೈನ್ಯವನ್ನೆಲ್ಲ ದಹಿಸುತ್ತಿರುವ ಅರ್ಜುನನ ಪರಾಕ್ರಮವನ್ನು ನೋಡಿ ದುರ್ಯೋಧನನ ಕಡೆಯ ಯೋಧರೆಲ್ಲ ಶಾಂತಿಯನ್ನು ವಹಿಸಿ ಸುಮ್ಮನಾದರು. ಅರುವತ್ತು ವಯಸ್ಸಿನ ಮದದಾನೆಯು, ಸೊದೆಹುಲ್ಲಿನ ವನಕ್ಕೆ ನುಗ್ಗಿದಂತೆ ಅರ್ಜುನನು ಸೈನ್ಯವನ್ನೆಲ್ಲ ತನ್ನ ಶಸ್ತ್ರತೇಜಸ್ಸಿನಿಂದ ಅಡಗಿಸಿಬಿಟ್ಟನು. ಹೀಗೆ ಸೈನ್ಯವನ್ನೆಲ್ಲ ಓಡಿಸಿ, ಮಹಾರಥರನ್ನು ಅಂಜಿಸಿ ಅರ್ಜುನನು ಜಯಶಾಲಿಯಾಗಿ ಹಿಂತಿರುಗಿದನು. ಇವನು ದಾರಿಯಲ್ಲಿ ಸಿಕ್ಕಿದವರನ್ನು ಹೊಡೆಯುತ್ತ ಬಂದಾಗ, ರಣರಂಗದಲ್ಲಿ ನರಗಳು ಮತ್ತು ರಕ್ತಗಳೆಂಬ ಅಲೆಗಳಿಂದಲೂ, ಅಸ್ಥಿಗಳೆಂಬ ಪಾಚಿಗಳಿಂದಲೂ, ಬಿಲ್ಲುಬಾಣಗಳೆಂಬ ದೋಣಿಗಳಿಂದಲೂ, ರಕ್ತಮಾಂಸಗಳೆಂಬ ಕೆಸರಿನಿಂದಲೂ, ರಥಗಳೆಂಬ ಹಡಗುಗಳಿಂದಲೂ,

ಭೀಷ್ಮಾರ್ಜುನರನ್ನು ಬಹಳವಾಗಿ ಕೊಂಡಾಡುತಿದ್ದರು. ಇತ್ತಲಾಗಿ ರಣಗಂಗದಲ್ಲಿ ದೇವರಾಜಸೈನ್ಯದಂತೆ ಪ್ರಬಲವಾದ ಕೌರವಸೈನ್ಯವೂಕೂಡ, ತೂರ್ಯ ಶಂಖಾದಿ ನಾನಾವಿಧ ವಾದ್ಯಘೋಷಗಳಿಂದಲೂ, ಸಿಂಹನಾದಗಳಿಂದಲೂ, ಕುರುಶ್ರೇಷ್ಠನಾದ ಭೀಷ್ಮನನ್ನು ಗೌರವಿಸುತ್ತಿತ್ತು.

ಇದು ಅರುವತ್ತೆರಡನೆಯ ಅಧ್ಯಾಯವು.



## ಭೀಷ್ಮ ಪರಾಜಯವು.

ಜನಮೇಜಯರಾಜಾ! ಕೇಳು! ಆಮೇಲೆ ಭೀಷ್ಮನು, ಸರ್ಪಗಳಂತಿರುವ ಎಂಟು ಕ್ರೂರ ಬಾಣಗಳನ್ನು ಅರ್ಜುನನ ಧ್ವಜಕ್ಕೆ ಗುರಿಯಿಟ್ಟು ಹೊಡೆದನು. ಆ ಬಾಣಗಳು ಧ್ವಜದಲ್ಲಿದ್ದ ಕಪಿಗೂ, ಧ್ವಜಾಗ್ರದಲ್ಲಿದ್ದ ಭೂತಗಳಿಗೂ ತಾಗಿದುವು. ಆಮೇಲೆ ಭೀಷ್ಮನು ಹತ್ತು ಬಾಣಗಳಿಂದ ಅರ್ಜುನನ ಸಾರಥಿಯನ್ನೂ, ಕುದುರೆಗಳನ್ನೂ ಹೊಡೆದನು. ಬೇರೆ ಮೂರು ಉಕ್ಕಿನ ಬಾಣಗಳನ್ನು ಅರ್ಜುನನ ಎದೆಗೆ ಗುರಿಯಿಟ್ಟು ಹೊಡೆದನು. ಆಮೇಲೆ ಅರ್ಜುನನು ಭೀಷ್ಮನಮೇಲೆ ಕೆಲವು ಬಾಣಗಳನ್ನು ಪ್ರಯೋಗಿಸಿ, ಬೇರೆ ಹತ್ತುಬಾಣಗಳಿಂದ ಭೀಷ್ಮನ ಧ್ವಜವನ್ನೂ, ಸಾರಥಿಯನ್ನೂ ಹೊಡೆದನು. ಭೀಷ್ಮಾರ್ಜುನರಿಗೆ ನಡೆದ ಆ ಯುದ್ಧವು, ವೃತ್ರ ವಾಸವರ ಯುದ್ಧದಂತೆ ನೋಡುವವರಿಗೆ ಭಯಂಕರವಾಗಿ, ಮೈಯಲ್ಲಿ ರೋಮಾಂಚವನ್ನು ಹುಟ್ಟಿಸುವಂತಿದ್ದಿತು. ಮೇಘಗಳಿಂದ ಬಿದ್ದ ಜಲಧಾರೆಗಳಿಂದ ಹೇಗೋಹಾಗೆ, ಭೀಷ್ಮಾರ್ಜುನರ ಬಾಣಸಮೂಹಗಳಿಂದ ಆಕಾಶವೆಲ್ಲವೂ ಮರೆಸಿತು. ಭೀಷ್ಮಾರ್ಜುನರ ಬಾಣಗಳು ಅಂತರಿಕ್ಷದಲ್ಲಿ ಒಂದಕ್ಕೊಂದಕ್ಕೆ ತಗುಲಿ, (ಅದರಿಂದುಂಟಾದ ಕಿಡಿಗಳೊಡನೆ) ಮಳೆಗಾಲದ ಮಿಂಚುಹುಳಗಳಂತೆ ಕಾಣಿಸಿದುವು. ಎರಡುಕೈಗಳಿಂದಲೂ ಎಡೆಬಿಡದೆ ಬಾಣವನ್ನು ಬಿಡುತ್ತ ಅರ್ಜುನನು ಕೈಯಲ್ಲಿ ಹಿಡಿದಿದ್ದ ಗಾಂಡೀವವು ಭಯಂಕರವಾದ ಅಲಾತಚಕ್ರದಂತೆ ಕಾಣಿಸಿತು. ಮೇಘವು ವರ್ಷಧಾರೆಯಿಂದ ಪರ್ವತವನ್ನು ಮುಚ್ಚುವಂತೆ ಅರ್ಜುನನು ಬಾಣಧಾರೆಯಿಂದ ಭೀಷ್ಮನನ್ನು ಮರೆಸಿದನು. ಆದರೇನು? ಭೀಷ್ಮನು ಆ ಬಾಣಗಳನ್ನೆಲ್ಲ ತನ್ನ ಬಾಣಗಳಿಂದ

ಕತ್ತರಿಸಿ, ಅರ್ಜುನನನ್ನೂ ಬಾಣಗಳಿಂದ ತಡೆದನು. ಭೀಷ್ಮನ ಬಾಣಗಳೆಲ್ಲವೂ ಅರ್ಜುನನ ರಥಕ್ಕೆ ತಗುಲಿ ತುಂಡಾಗಿ ಬಿದ್ದುಹೋದುವು. ಚಿನ್ನದ ಹಿಡಿಗಳಿಂದಲೂ, ಗರಿಗಳಿಂದಲೂ ಕೂಡಿದ ಭೀಷ್ಮಾರ್ಜುನರ ತೀಕ್ಷ್ಣ ಬಾಣಗಳು ಆಕಾಶವನ್ನೆಲ್ಲ ಆವರಿಸಿದುವು. ಆಮೇಲೆ ಅರ್ಜುನನು ಅಸಂಖ್ಯಾತಗಳಾದ ಕ್ರೂರ ಬಾಣಗಳನ್ನು ಭೀಷ್ಮನಮೇಲೆ ಪ್ರಯೋಗಿಸಲು, ಭೀಷ್ಮನೂ ಅಷ್ಟೇ ಬಾಣಗಳನ್ನು ಅರ್ಜುನನಮೇಲೆ ಬಿಟ್ಟನು. ಮತ್ತು ವತ್ಸದಂತಗಳೆಂಬ ಶಸ್ತ್ರಗಳಿಂದ ರಥ, ರಥಾಶ್ವ, ಸಾರಥಿಗಳೊಡನೆ ಅರ್ಜುನನನ್ನು ಮುಚ್ಚಿದುದಲ್ಲದೆ, ಬಾಣಜಾಲಗಳಿಂದ, ಎಲ್ಲಾ ದಿಕ್ಕುಗಳನ್ನೂ, ಆಕಾಶವನ್ನೂ ಮರೆಸಿಬಿಟ್ಟನು. ಇದನ್ನು ನೋಡಿ ಅಂತರಿಕ್ಷದಲ್ಲಿ ದೇವತೆಗಳೂ, ಋಷಿಗಳೂ, ಗಂಧರ್ವರೂ ಆಶ್ಚರ್ಯಭರಿತರಾಗಿ “ಭಲೆ! ಭಲೆ! ಭೀಷ್ಮನು ಯಾರಿಗೂ ಸಾಧ್ಯವಲ್ಲದ ದುಷ್ಕರಕಾರ್ಯವನ್ನು ಮಾಡಿದನು. ಅರ್ಜುನನನ್ನೂ ಹೀಗೆ ತನ್ನ ಬಾಣಗಳಿಂದ ತಡೆದನಲ್ಲವೆ? ಅರ್ಜುನನೋ ಮಹಾ ಬಲಾಢ್ಯನು! ಅತ್ಯಂತ ಹಸ್ತಲಾಘವವುಳ್ಳವನು! ಸಮರ್ಥನು! ದೇವಕೀಪುತ್ರನಾದ ಕೃಷ್ಣನೊಬ್ಬನು, ಮಹಾಬಲಶಾಲಿಯೂ, ಆಚಾರ್ಯಶ್ರೇಷ್ಠನೂ ಆದ ದ್ರೋಣನೊಬ್ಬನು, ಭೀಷ್ಮನೊಬ್ಬನು, ಈ ಮೂವರು ಹೊರತು ಬೇರೆ ಯಾವನು ತಾನೇ ಈ ಅರ್ಜುನನನ್ನು ಹೀಗೆ ತಡೆಯಬಲ್ಲನು?” ಎಂದು ಕೊಂಡಾಡುತಿದ್ದರು. ಪುರುಷಶ್ರೇಷ್ಠರೆನಿಸಿದ ಆ ಭೀಷ್ಮಾರ್ಜುನರಿಬ್ಬರೂ, ಒಬ್ಬರು ಪ್ರಯೋಗಿಸಿದ ಅಸ್ತ್ರಗಳನ್ನು ಮತ್ತೊಬ್ಬರು ಪ್ರತ್ಯಸ್ತ್ರಗಳಿಂದ ನಿಗ್ರಹಿಸುತ್ತ ಆಗ ನಡೆಸಿದ ಯುದ್ಧಕ್ರೀಡೆಗಳು, ಎಲ್ಲಾ ಭೂತಗಳ ಕಣ್ಣಿಗೂ ಸಂತೋಷಕರವಾದ ಒಂದು ನೋಟವಾಯಿತು. ಅವರಿಬ್ಬರೂ ಅನ್ಯೋನ್ಯವಾಗಿ ಪ್ರಾಜಾಪತ್ಯ, ಐಂದ್ರ, ಆಗ್ನೇಯ, ಕೌಬೇರ, ವಾರುಣ, ಯಾಮ್ಯ, ವಾಯವ್ಯಾದಿ ದಿವ್ಯಾಸ್ತ್ರಗಳನ್ನು ಒಬ್ಬರಮೇಲೊಬ್ಬರು ಪ್ರಯೋಗಿಸುತ್ತಿದ್ದರು. ಮಹಾತ್ಮರಾದ ಅವರಿಬ್ಬರ ಅಸ್ತ್ರಚಾತುರ್ಯವನ್ನು ನೋಡಿ ಸಮಸ್ತ ಭೂತಗಳೂ ಆಶ್ಚರ್ಯಗೊಂಡು “ಪಾರ್ಥಾ! ಭಲೆ! ಭಲೆ! ಭೀಷ್ಮಾಚಾರ್ಯಾ! ಭಲೆ! ಭಲೆ! ಮನುಷ್ಯರಲ್ಲಿ ಬೇರೆ ಯಾವನೂ ಇಂತಹ ಅಸ್ತ್ರಸಾಮರ್ಥ್ಯವನ್ನು ಯುದ್ಧದಲ್ಲಿ ತೋರಿಸಲಾರನು” ಎಂದುವು. ಇಷ್ಟರಲ್ಲಿ ಅರ್ಜುನನು ತನ್ನ ಧನುಸ್ಸನ್ನೆತ್ತಿ

ತಪಿಸುತ್ತಿರುವ ಮಧ್ಯಾಹ್ನದ ಸೂರ್ಯನನ್ನು ಹೇಗೋಹಾಗೆ, ಶತ್ರುಸೈನ್ಯಗಳು ಅರ್ಜುನನನ್ನು ಕಣ್ಣೆತ್ತಿಯೂ ನೋಡಲಾರವು. ಇಬ್ಬರೂ ಮಹಾತ್ಮರು. ಇಬ್ಬರೂ ಪ್ರಸಿದ್ಧಕಾರ್ಯವುಳ್ಳವರು. ಇಬ್ಬರೂ ಆಶ್ಚರ್ಯಪರಾಕ್ರಮವುಳ್ಳವರು. ಇಬ್ಬರೂ ಶತ್ರುದುರಾಸದರು" ಎಂದನು. ಈ ಮಾತನ್ನು ಕೇಳಿ ದೇವೇಂದ್ರನೂಕೂಡ, ಆ ಭೀಷ್ಮಾರ್ಜುನರ ಯುದ್ಧಕ್ಕೆ ಮೆಚ್ಚಿ, ಪುಷ್ಪವೃಷ್ಟಿಯಮೂಲಕವಾಗಿ ಅವರಿಬ್ಬರನ್ನೂ ಗೌರವಿಸಿದನು.

*[ಇಷ್ಟರಲ್ಲಿಯೇ ಅಶ್ವತ್ಥಾಮನು ಆತುರದಿಂದ ಕರ್ಣನ ಬಳಿಗೆ ಬಂದು "ರಾಧೇಯಾ! ಹಿಂದೆ ನೀನು 'ನಾನೊಬ್ಬನೇ ಪಾಂಡವರೆಲ್ಲರನ್ನೂ ಕೊಲ್ಲುವೆ'ನೆಂದು ನನ್ನ ಮುಂದೆ ಸಭಾಮಧ್ಯದಲ್ಲಿ ಹೇಳಿದವನಲ್ಲವೆ? ಈಗ ನೀನೇಕೆ ಆ ಕಾರ್ಯವನ್ನು ಮಾಡದೆ ಭಯದಿಂದ ಓಡಿಹೋಗುತ್ತಿರುವೆ? ನಿನ್ನನ್ನು ನಂಬಿಕೊಂಡಲ್ಲವೇ ಕೌರವರೆಲ್ಲರೂ ಪಾಂಡವರನ್ನು ಇದಿರಿಸಲು ಪ್ರಯತ್ನಿಸಿದರು. ಈಗ ನೀನು ಯುದ್ಧಮಾಡಿ ಅರ್ಜುನನನ್ನು ಜಯಿಸಬಾರದೇಕೆ?" ಎಂದನು. ಅಶ್ವತ್ಥಾಮನ ಈ ಮಾತನ್ನು ಕೇಳಿ ದುರ್ಯೋಧನನು ಕೋಪಗೊಂಡು, ಕರ್ಣನಿಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ ಅಶ್ವತ್ಥಾಮನೊಡನೆ "ಓ ಬ್ರಾಹ್ಮಣಾ! ನೀನು ಪ್ರಸಿದ್ಧಪರಾಕ್ರಮವುಳ್ಳ ಆ ಕರ್ಣನನ್ನು ಹೀಗೆ ಹಾಸ್ಯಮಾಡಿ ಅವನ ಮಾನವನ್ನು ಕಳೆಯಬಾರದು. ಕ್ಷತ್ರಿಯರಿಗೆ ಮಾನಭಂಗದಿಂದ ಬಲಹಾನಿಯುಂಟಾಗುವುದು. ಶೂರರಾದವರು ಬಾಯಿಂದಲೂ ಆಡುವರು. ಕೆಲಸವನ್ನೂ ಮಾಡುವರು. ತಮ್ಮ ಪರಾಕ್ರಮಕ್ಕೆ ತಕ್ಕಂತೆ ಯುದ್ಧದಲ್ಲಿಯೂ ಹೋರಾಡುವರು. ಆದುದರಿಂದ ನೀನು ಈಗ ಕರ್ಣನನ್ನು ಹೀಗೆ ಹೀಗಳೆಯುವುದು ನ್ಯಾಯವಲ್ಲ" ಎಂದನು. ಈ ಮಾತನ್ನು ಕೇಳಿದಮೇಲೆ ಅಶ್ವತ್ಥಾಮನು ಸುಮ್ಮನಾದನು.]

ಇಷ್ಟರಲ್ಲಿ ಭೀಷ್ಮನು, ಬಿಲ್ಲಿಗೆ ಬಾಣಗಳನ್ನು ಸಂಧಾನಮಾಡಿ ನಿಂತಿದ್ದ ಅರ್ಜುನನಮೇಲೆ ಬಾಣಗಳನ್ನು ಪ್ರಯೋಗಿಸಿದನು. ಇದನ್ನು ನೋಡಿ ಅರ್ಜುನನು ಒಂದು ಬಾಣದಿಂದ ಭೀಷ್ಮನ ಬಿಲ್ಲನ್ನು ಕತ್ತರಿಸಿ,

---

* ಈ ಪಾಠವು ಕೆಲವು ಪುಸ್ತಕದಲ್ಲಿ ಮಾತ್ರ ಇದೆ.

ಕರ್ಣನನ್ನು ಕುರಿತು, “ ಕರ್ಣಾ ! ಹಿಂದೆ ನೀನು ಸಭಾಮಧ್ಯದಲ್ಲಿ ಯುದ್ಧ ದಲ್ಲಿ ನನಗೆ ಸಮಾನರಿಲ್ಲವೆಂದು ಅಸಂಬದ್ಧವಾದ ಹಲವು ಮಾತುಗಳನ್ನಾ ಡಿದೆಯಲ್ಲವೆ? ಈಗ ಅದಕ್ಕೆ ತಕ್ಕ ಸಮಯವು ಒದಗಿಬಂದಿದೆ. ಅಲ್ಲಿ ಅರ್ಜುನನು ಕೋಪಗೊಂಡ ಯಮನಂತೆ ಬರುತ್ತಿರುವನು. ಅದೋ! ಸಮೀಪಕ್ಕೂ ಬಂದುಬಿಟ್ಟಿರುವನು. ಸಿಂಹದಂತೆ ಉತ್ಸಾಹದಿಂದ ಗರ್ಜಿ ಸುತ್ತಿರುವನು. ನೀನು ಶೂರನಾಗಿದ್ದರೆ ಓಡಿಹೋಗಬಾರದು. ಅರ್ಜುನ ನಿಗಿದಿರಾಗಿ ಯುದ್ಧಮಾಡು” ಎಂದನು. ಅದಕ್ಕಾ ಕರ್ಣನು “ ಓ ದ್ರೋ ಣಪುತ್ರಾ! ನಾನು ಈ ಅರ್ಜುನನಿಗಾಗಲಿ, ದೇವಕೀಪುತ್ರನಿಗೇ ಆಗಲಿ, ಪಾಂಡವರೆಲ್ಲರೂ ಒಟ್ಟಾಗಿ ಸೇರಿ ಯುದ್ಧಕ್ಕೆ ಬಂದರಾಗಲಿ ಹೆದರುವೆನೆಂದೆ ಣಿಸಬೇಡ. ನಾನು ಕ್ಷತ್ರಿಯಧರ್ಮವನ್ನೇ ಅನುಸರಿಸುವವನು. ಬಲಾ ಧಿಕರೂ, ಧನುರ್ವಿದ್ಯೆಯಿಂದಲೇ ಉಪಜೀವಿಸತಕ್ಕವರೂ, ಶೂರರೂ ಆದ ನಮಗೆ ಶತ್ರುಗಳನ್ನು ನೋಡುವಾಗಲೇ ದರ್ಪವುಂಟಾಗುವುದೂ ಸಹಜವು. ನಮ್ಮ ಸ್ವರವಾದರೂ ಕುಗ್ಗುವುದಿಲ್ಲ. ಈಗ ಅರ್ಜುನನಿಗೆ ಯುದ್ಧದಲ್ಲಿ ನಾನೂ ಸಮಾನನೆಂದೇ ತಿಳಿ. ಆದರೆ ದೈವಗತಿಯನ್ನು ಮೀರುವುದಕ್ಕೆ ಮಾತ್ರ ಯಾರಿಂದಲೂ ಸಾಧ್ಯವಿಲ್ಲ” ಎಂದನು. ಅದಕ್ಕೆ ಅಶ್ವತ್ಥಾಮನು “ ಓ ಕರ್ಣಾ! ನೀನು ಹೇಳಿದುದು ವಾಸ್ತವವೇ. ಶೂರರಿಗೆ ಮಾತಿಗೆ ತಕ್ಕಂತೆ ಪೌರುಷವೂ ಇದ್ದಪಕ್ಷದಲ್ಲಿ, ಆಗ ಮಾತಾಡುವುದರಲ್ಲಿ ದೋಷವೇ ನಿದೆ? ಅದು ಲೋಕದಲ್ಲಿ ಉತ್ತಮವಾದ ಗುಣವೆನಿಸುವುದು. ಆದುದ ರಿಂದ ನೀನು ಹಿಂದೆ ಆಡಿದುದಕ್ಕೆ ತಕ್ಕಂತೆ ನಿರ್ಭಯವಾಗಿ ಪಾರ್ಥನನ್ನಿದಿ ರಿಸು. ಯುದ್ಧರಂಗದಿಂದ ಮಾತ್ರ ಓಡಿಹೋಗಬೇಡ. ಯುದ್ಧದಲ್ಲಿ ಸಾಟಿ ಯಿಲ್ಲವೆಂದು ಹೇಳಿದ ಮಾತನ್ನು ಮರೆಯಬೇಡ” ಎಂದನು. ಇಷ್ಟರಲ್ಲಿ ಯೇ ಐದುಮಂದಿ ಮಹಾರಥರೂ ಆ ಯುದ್ಧದಲ್ಲಿ ತಮ್ಮ ಪ್ರಾಣವನ್ನಾದ ರೂ ಕೊಡುವುದಕ್ಕೆ ನಿಶ್ಚಯಿಸಿಕೊಂಡು, ಬಾಣಗಳನ್ನು ಬಿಡುತ್ತ, ನಾಲ್ಕು ಕಡೆಗಳಿಂದಲೂ ಅರ್ಜುನನನ್ನು ಮುತ್ತಿಕೊಂಡರು. ಅರ್ಜುನನು ಅಲ್ಲಿಗೆ ಬಂದುದು ತಮಗೆ ಒಂದು ದೊಡ್ಡ ಲಾಭವೆಂದೇ ತಿಳಿದು, ಮಳೆಗಾಲದ ಮೇಘಗಳಂತೆ ಬಾಣಗಳನ್ನು ವರ್ಷಿಸುತ್ತ ಅರ್ಜುನನನ್ನು ನಾನಾಕಡೆ ಯಿಂದ ಹೊಡೆಯುತ್ತ ಬಂದರು. ಆಗಲೂ ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ

ಅರ್ಜುನನು ಅಟ್ಟಹಾಸದಿಂದ ನಗುತ್ತ, ತನ್ನ ದಿವ್ಯಾಸ್ತ್ರಪ್ರಯೋಗದೊಡನೆ ಅವರೆಲ್ಲರನ್ನೂ ಇದಿರಿಸಿದನು. ಸೂರ್ಯನು ತನ್ನ ಕಿರಣಗಳಿಂದ ಭೂಮಿಯನ್ನೆಲ್ಲ ಆವರಿಸುವಂತೆ, ಗಾಂಡೀವಪ್ರಯುಕ್ತಗಳಾದ ಬಾಣಗಳಿಂದ ದಿಕ್ಕುಗಳನ್ನೆಲ್ಲ ಆವರಿಸಿದನು. ಅಲ್ಲಿ ರಥಗಳಿಗಾಗಲಿ, ಆನೆಗಳಿಗಾಗಲಿ, ಕುದುರೆಗಳಿಗಾಗಲಿ ಎರಡಂಗುಲದಷ್ಟಾದರೂ ಮೈಯಲ್ಲಿ ಅವಕಾಶವಿಲ್ಲದೆ ಅರ್ಜುನನ ಬಾಣಗಳು ನಾಟಿಕೊಂಡವು. ಆಗ ಅಲ್ಲಿದ್ದ ಯುದ್ಧವೀರರಿಗೆ ತಮ್ಮ ಬುದ್ಧಿಯೇ ತಮಗೆ ಸ್ವಾಧೀನವಿಲ್ಲದಂತಾಯಿತು. ಆನೆಗಳೂ, ಕುದುರೆಗಳೂ ಭಯದಿಂದೋಡಿ ಎಲ್ಲೆಲ್ಲಿಯೋ ಅವಿತುಕೊಂಡವು. ಹೊಡಕೆಯ ಕಾಡಿಗೆ ನುಗ್ಗಿದ ಮದದಾನೆಯಂತೆ ಅರ್ಜುನನು ತನ್ನ ಶಸ್ತ್ರಬಲದಿಂದ ಎಲ್ಲರನ್ನೂ ಅರೆದುಬಿಟ್ಟನು. ಗಾಂಡೀವಧ್ವನಿಯಿಂದ ಭೂಮಿಯೆಲ್ಲವೂ ನಡುಗಿತು. ಧೃತರಾಷ್ಟ್ರಪುತ್ರರ ಮನಸ್ಸಿಗೆ ಶೂಲವನ್ನಿರಿದಂತಾಯಿತು. ಇಷ್ಟರಲ್ಲಿಯೇ ಅರ್ಜುನನು ಶತ್ರುಸೈನ್ಯಗಳ ನಡುವೆ ಪ್ರವೇಶಿಸಿ, ಸಾರಥಿಯಾದ ಉತ್ತರನನ್ನು ನೋಡಿ “ಉತ್ತರಾ! ಕುದುರೆಗಳ ಹಗ್ಗವನ್ನು ಬಿಗಿಹಿಡಿದು ಮೆಲ್ಲಗೆ ರಥವನ್ನು ನಡೆಸು. ಈಗ ನಾನು ಅಶ್ವತ್ಥಾಮನೊಡನೆ ಯುದ್ಧಮಾಡುವೆನು. ಯಾರಿಗೂ ಸೋಲದ ಆ ಆಚಾರ್ಯಪುತ್ರನೊಡನೆ ಯುದ್ಧಮಾಡಬೇಕಾಗಿದೆ. ಇದಕ್ಕೆ ಮೊದಲೇ ಒಮ್ಮೆ ನಾನು ಅವನೊಡನೆ ಯುದ್ಧಮಾಡಿದ್ದೆನು. ಅದೋ! ಆತನು ನನ್ನ ಹಿಂಭಾಗದಲ್ಲಿರುವನು” ಎಂದು ತೋರಿಸಿದನು. ಈ ಮಾತನ್ನು ಕೇಳಿ ಉತ್ತರನು ಅಶ್ವತ್ಥಾಮನ ರಥವಿದ್ದಕಡೆಗೆ ಕುದುರೆಗಳನ್ನೋಡಿಸಿದನು. ಇದನ್ನು ನೋಡುತ್ತಿದ್ದ ಕರ್ಣನು ಸಮೀಪದಲ್ಲಿದ್ದವರಿಗೆ ಕೇಳುವಂತೆ, “ಓಹೋ! ಈಗಾಗಲೇ ಅರ್ಜುನನು ಬಾಣದಿಂದ ಪೀಡಿತನಾಗಿ, ನೋವನ್ನು ತಡೆಯಲಾರದೆ ಬೇರೆಕಡೆಗೆ ಓಡುವಂತಿದೆ. ನಾನೂ ಅಲ್ಲಿಗೆ ಹೋಗುವೆನು. ಈಗ ಅವನನ್ನು ಜೀವದೊಂದಿಗೆ ಬಿಡಬಾರದು” ಎಂದನು. ಆಗ ದ್ರೋಣಾಚಾರ್ಯನು ಆ ಕರ್ಣನ ಮಾತಿಗೆ ನಗುತ್ತ, “ಕರ್ಣಾ! ಮಹಾತ್ಮನಾದ ಆ ಇಂದ್ರಪುತ್ರನು ಭಯದಿಂದ ಓಡಿಹೋದವನಲ್ಲ. ಭಯಪಟ್ಟವರಾಗಲಿ, ಬಹಳ ನೊಂದವರಾಗಲಿ ಈ ರೀತಿಯಾಗಿ ತಿರುಗಿಹೋಗಲಾರರು. ಅತ್ಯಂತ ಕೋಪೋದ್ರೇಕದಿಂದ ಬರುತ್ತಿರುವ ಆ ಅರ್ಜುನನನ್ನು ಈಗ ನೀನು ಇದಿರಿಸುವೆ

ಯಾದರೆ, ನಿನ್ನನ್ನು ಅವನು ಸುಮ್ಮನೆ ಜೀವದಿಂದ ಬಿಡಲಾರನು. ಅವನು ಅನೇಕಶಸ್ತ್ರಾಸ್ತ್ರಗಳನ್ನು ಬಲ್ಲವನು. ಹಿಂದೆ ಅವನ ಕೈಗೆ ಸಿಕ್ಕಿಬಿದ್ದ ದುರ್ಯೋಧನನು ಹೇಗೋ ಅದೃಷ್ಟವಶದಿಂದ ತಪ್ಪಿಬಂದನು. ಅದೃಷ್ಟವಶದಿಂದ ಹಸುಗಳೂ ತಪ್ಪಿಸಿಕೊಂಡು ಹೋದುವು. ನೀನೂ ದೈವಾಧೀನದಿಂದ ತಪ್ಪಿ ಬಂದೆ! ಈಗ ನೀನು ಯುದ್ಧಕ್ಕೆ ನಿಂತು ಮಾಡುವುದೇನು? ಒಂದು ಕ್ರೋಶದಷ್ಟು ದೂರದವರೆಗೆ ನಾವು ಹಿಂತಿರುಗಿ ಹೋಗಿ, ನಮ್ಮ ಸೈನ್ಯಗಳಿಗೆ ಸಮಾಧಾನವನ್ನು ಹೇಳಿ ಕರೆತರುವೆವು. ಆ ಸೈನ್ಯಗಳನ್ನೆಲ್ಲ ಸೇರಿಸಿಟ್ಟುಕೊಂಡು ತಿರುಗಿ ಎಲ್ಲರೂ ಯುದ್ಧಕ್ಕೆ ನಿಲ್ಲಿರಿ'' ಎಂದನು.

ಇದು ಅರುವತ್ತುನಾಲ್ಕನೆಯ ಅಧ್ಯಾಯವು.

---

ಅರ್ಜುನನು ಉತ್ತರನಿಗೆ ತನ್ನ ಪರಾಕ್ರಮವನ್ನು ತಿಳಿಸಿ ಧೈರ್ಯವನ್ನು ಹೇಳುತ್ತ, ಭೀಷ್ಮಾದಿಗಳಿರುವ ಸ್ಥಳಕ್ಕೆ ರಥವನ್ನು ಬಿಡುವಂತೆ ಪ್ರೋತ್ಸಾಹಿಸಿದುದು. ದುಶ್ಶಾಸನಾದಿಗಳನ್ನು ಜಯಿಸಿ ಭೀಷ್ಮನೊಡನೆ ತಿರುಗಿ ಯುದ್ಧಕ್ಕೆ ನಿಂತುದು.

ಓ ಜನಮೇಜಯರಾಜಾ! ಕೇಳು! ಕರ್ಣನು ಪರಾಜಿತನಾಗಿ ಹಿಂದಾದುದನ್ನು ತಿಳಿದು, ಅರ್ಜುನನು ಉತ್ತರನನ್ನು ಕುರಿತು ''ಓ ಸಾರಥೀ! ನಮ್ಮ ರಥವನ್ನು ಅದೋ! ಮುಂದೆ ಶಸ್ತ್ರಧಾರಿಗಳಾದ ರಥಿಕರಿರುವ ರಥಗಳಬಳಿಗೆ ನಡೆಸು. ಅಲ್ಲಿ ನಮ್ಮೆಲ್ಲರಿಗೂ ಪಿತಾಮಹನಾದ ಭೀಷ್ಮನು ನನ್ನೊಡನೆ ಯುದ್ಧವನ್ನಪೇಕ್ಷಿಸಿ, ಯುದ್ಧಕವಚವನ್ನು ಧರಿಸಿ ರಥದಲ್ಲಿ ಕುಳಿತಿರುವನು. ವಜ್ರ ವೈಡೂರ್ಯಗಳಿಂದ ಅಲಂಕೃತವಾದ ಸುವರ್ಣಮಯವಾದ ತಾಳಧ್ವಜವು, ಗಾಳಿಯಿಂದ ತೂಗಾಡುತ್ತ ಅಲ್ಲಿ ಪ್ರಕಾಶಿಸುತ್ತಿರುವುದು ನೋಡು. ಈಗ ನಾನು ಆ ಧನುರ್ಧಾರಿಗಳೆಲ್ಲರ ರಥಸಮೂಹಗಳನ್ನೆಲ್ಲ ಎಷ್ಟು ತೀವ್ರವಾಗಿ ಹೊಡೆಯುವೆನೋ ನೋಡು. ಅವರ ಬಿಲ್ಲು, ಬಿಲ್ಲಿನ ಹೆದೆ, ಕವಚ ಮುಂತಾದುವುಗಳನ್ನೆಲ್ಲ ಅಪಹರಿಸುವೆನು ನೋಡು. ಈಗ ನಾನು ಚಿತ್ರವಿಚಿತ್ರವಾಗಿ ದಿವ್ಯಾಸ್ತ್ರಪ್ರಯೋಗಮಾಡುವ ರೀತಿಯನ್ನಾ

ದರೂ ನೋಡು. ವರ್ಷಾಕಾಲದಲ್ಲಿ ಮೇಘದಿಂದ ಹೊಳೆಯುವ ಮಿಂಚಿನಂತೆ, ಚಿನ್ನದ ಕಟ್ಟುಳ್ಳ ನನ್ನ ಗಾಂಡೀವವನ್ನು ಕುರುಗಳೆಲ್ಲ ನೋಡಲಿ. ಉತ್ತರಾ! ನಾನು ಬಾಣಗಳನ್ನು ಎಡದಿಂದ ಬಿಡುವೆನೋ ಬಲದಿಂದ ಬಿಡುವೆನೋ ಎಂಬುದನ್ನೇ ಶತ್ರುಗಳು ತಿಳಿದುಕೊಳ್ಳಲಾರರು. ಅಸ್ತ್ರಗಳೆಂಬ ಜಲಪ್ರವಾಹದಿಂದಲೂ, ಕುದುರೆಗಳೆಂಬ ಸುಳಿಗಳಿಂದಲೂ, ಆನೆಗಳೆಂಬ ಮೊಸಳೆಗಳಿಂದಲೂ, ರಥಗಳೆಂಬ ಮಡುಗಳಿಂದಲೂ ಕೂಡಿ, ನಮ್ಮ ವೈರಿಗಳೆಲ್ಲರನ್ನೂ ಪರಲೋಕಕ್ಕೆ ಎಳೆದುಕೊಂಡು ಹೋಗತಕ್ಕ ಮಹಾನದಿಯೊಂದನ್ನು ಈಗ ನಾನು ಹರಿಯಿಸುವೆನು ನೋಡು! ಕೈ, ಕಾಲು, ತಲೆ, ಬೆನ್ನು, ತೋಳು, ಶಂಖಗಳೆಂಬ ಚರಾಚರ ವರ್ಗಗಳಿಂದ ಕೂಡಿದ ಕೌರವಸೈನ್ಯವೆಂಬ ದೊಡ್ಡ ಕಾಡನ್ನು ನನ್ನ ಬಾಣಗಳಿಂದ ಕತ್ತರಿಸಿ ಕೆಡಹುವೆನು. ಈಗ ನಾನು ನನ್ನ ಬತ್ತಳಿಕೆಯಿಂದ ತೆಗೆದು ಪ್ರಯೋಗಿಸುವ ಬಾಣಗಳು, ಕೌರವರನ್ನೆಲ್ಲ ದಹಿಸುವ ರೀತಿಯನ್ನಾದರೂ ನೋಡು. ಧ್ವಜಗಳೆಂಬ ವೃಕ್ಷಗಳಿಂದಲೂ, ಬಾಣಗಳೆಂಬ ಹುಲ್ಲಿನಿಂದಲೂ, ಆನೆ ಕುದುರೆಗಳೆಂಬ ಕಾಡುಮೃಗಗಳಿಂದಲೂ, ರಥಗಳೆಂಬ ಸಿಂಹಗಳಿಂದಲೂ, ಬಿಲ್ಲುಗಳೆಂಬ ಬಲೆಗಳಿಂದಲೂ ಕೂಡಿದ ಕೌರವಸೇನೆಯೆಂಬ ವನವನ್ನು ನನ್ನ ಅಸ್ತ್ರಜ್ವಾಲೆಯಿಂದ ಸುಟ್ಟುಬಿಡುವೆನು. ಯುದ್ಧದಲ್ಲಿ ಏಕಾಕಿಯಾಗಿಯೇ ಆ ಕುರುಸೈನ್ಯವನ್ನಿದಿರಿಸಿ ಜಯಿಸಬಲ್ಲ ನನಗೆ, ದಾವಾಗ್ನಿಗೆ ಕಾಡಿನಲ್ಲಿ ಹೇಗೋ ಹಾಗೆ ನಿರಂಕುಶವಾದ ನೂರಾರುಮಾರ್ಗಗಳು ತಾನಾಗಿ ಏರ್ಪಡುವುವು. ಗೂಡುಗಳಲ್ಲಿ ಅಡಗಿರುವ ಪಕ್ಷಿಗಳನ್ನು ಹೇಗೋ ಹಾಗೆ ನಾನು ಆ ಶತ್ರುಗಳನ್ನು ಅವರ ರಥಗಳೆಂಬ ಗೂಡುಗಳಿಂದ ಪರಲೋಕಗಳಿಗೆ ಓಡಿಸುವೆನು. ಸಮಭೂಮಿಗಳಲ್ಲಿಯಾಗಲಿ, ವಿಷಮಪ್ರದೇಶಗಳಲ್ಲಿಯಾಗಲಿ ನಾನು ನಿಶ್ಚಲವಾಗಿ ರಥದಲ್ಲಿ ಕುಳಿತು, ನನ್ನ ದಾರಿಗಡ್ಡಲಾಗಿರುವ ಪರ್ವತವನ್ನಾದರೂ ಭೇದಿಸುವೆನು. ನಾನು ಹಿಂದೆ ಇಂದ್ರನ ಸಹಾಯಕ್ಕಾಗಿ ಮಾತಲಿಯನ್ನು ಸಾರಥಿಯನ್ನಾಗಿ ಮಾಡಿಕೊಂಡು, ಬಲಗರ್ವಿತರಾದ ನಿವಾತಕವಚರನ್ನಿದಿರಿಸಿ, ಯುದ್ಧದಲ್ಲಿ ನನಗಿದಿರಾದವರನ್ನೂ, ಭಯದಿಂದ ಓಡಿದವರನ್ನೂ, ನನ್ನ ಗಾಂಡೀವಪ್ರಯುಕ್ತಗಳಾದ ಅಸ್ತ್ರಗಳಿಂದ ನಾನಾಕಡೆಗಳಲ್ಲಿ ಹೊಡೆದು ಕೊಂದು, ಸಮುದ್ರಕ್ಕೆ ಆಚೆಯ ದಡ

ದಲ್ಲಿದ್ದ ಹಿರಣ್ಯಪುರವನ್ನು ನಾಶಮಾಡಿದೆನು. ಉಗ್ರಧನುಸ್ಸುಳ್ಳ ಅರುವತ್ತುಸಾವಿರ ರಥಿಕರನ್ನು ಕೊಂದು, ಭಯಂಕರರೂಪಿಗಳಾದ ಪೌಲೋಮ ಕಾಲಕೇಯರೆಂಬ ರಾಕ್ಷಸರನ್ನು ನನ್ನ ರೌದ್ರಾಸ್ತ್ರದಿಂದ ಧ್ವಂಸಮಾಡಿದೆನು. ಓ ಸಾರಥಿ! ನಾನು ಇಂದ್ರನಿಂದ ದೃಢಮುಷ್ಟಿಯನ್ನೂ, ಬ್ರಹ್ಮನಿಂದ ಹಸ್ತಲಾಘವವನ್ನೂ, ಮನುಪ್ರಜಾಪತಿಯಿಂದ ಬಹಳ ಚಮತ್ಕಾರವಾಗಿಯೂ, ವಿಚಿತ್ರವಾಗಿಯೂ ಇರುವ ಯುದ್ಧನೈಪುಣ್ಯವನ್ನೂ ಕಲಿತಿರುವೆನು. ರುದ್ರನಿಂದ ಪಾಶುಪತಾಸ್ತ್ರವನ್ನೂ, ವರುಣನಿಂದ ವಾರುಣಾಸ್ತ್ರವನ್ನೂ, ಹಾಗೆಯೇ ಸೂರ್ಯಾಗ್ನಿ, ಯಮ, ವಾಯು ಮೊದಲಾದ ಬೇರೆಬೇರೆ ದೇವತೆಗಳಿಂದ ಆಯಾ ದೇವತಾತ್ಮಕಗಳಾದ ಅಸ್ತ್ರಗಳನ್ನೂ ಪಡೆದಿರುವೆನು. ಉತ್ತರಾ! ಬೇರೆ ಯಾವ ಮನುಷ್ಯನು ತಾನೇ ಈ ನನ್ನ ಪರಾಕ್ರಮವನ್ನು ತಡೆದುಕೊಳ್ಳಬಲ್ಲನು? ಈಗ ನಾನು ಗಾಂಡೀಪಪ್ರಯುಕ್ತಗಳಾದ ಬಾಣಗಳಿಂದ ಧನುರ್ಧಾರಿಗಳ ಆ ರಥಗಳನ್ನೆಲ್ಲ ಉರುಳಿಸುವ ರೀತಿಯನ್ನಾದರೂ ನೋಡು" ಎಂದನು.

ಓ ಜನಮೇಜಯರಾಜಾ! ಅರ್ಜುನನು ಇಷ್ಟು ಮಾತುಗಳನ್ನು ಹೇಳಿದಮೇಲೆ, ಉತ್ತರನಿಗೆ ಮನಸ್ಸಿನಲ್ಲಿದ್ದ ಭೀತಿಯು ತಗ್ಗಿ ಧೈರ್ಯವುಂಟಾಯಿತು. ಒಡನೆಯೇ ಆ ಭೀಷ್ಮನಿದ್ದ ರಥಗಳ ಮಧ್ಯಕ್ಕೆ ತನ್ನ ರಥವನ್ನು ಬಿಟ್ಟನು. ಇಷ್ಟರಲ್ಲಿಯೇ ಅರ್ಜುನನು ತನ್ನ ಧನುಸ್ಸಿನ ನಾಣನ್ನು ಮಿಡಿಯುತ್ತ, ರಥಿಕರಲ್ಲಿ ಮೇಲೆನಿಸಿದ ಮತ್ತು ಶತ್ರುದುರ್ಜಯನಾದ ಭೀಷ್ಮನನ್ನಿದಿರಿಸಿದನು. ಇದನ್ನು ನೋಡಿ ದುಶ್ಶಾಸನನು, ಭಯಂಕರ ಧನುಸ್ಸನ್ನೂ ವಿಚಿತ್ರಾಭರಣಗಳನ್ನೂ ಅಂದವಾದ ಕುಂಡಲಗಳನ್ನೂ ಧರಿಸಿದ ಒಳ್ಳೆಯ ಯೌವನವುಳ್ಳ ವೀರರೊಡಗೂಡಿ ಧನುಷ್ಟಂಕಾರದೊಡನೆ ಅರ್ಜುನನನ್ನು ಇದಿರಿಸಿ ತಡೆದನು. ದುಶ್ಶಾಸನನನ್ನು ಹಿಂಬಾಲಿಸಿ ವಿಕರ್ಣನೂ, ವೃಷಸೇನನೂ, ವಿವಿಂಶತಿಯೂ ಅರ್ಜುನನನ್ನು ಮುತ್ತಿಕೊಂಡರು. ದುಶ್ಶಾಸನನು ಅರುವತ್ತು ಬಾಣಗಳನ್ನು ಅರ್ಜುನನ ಎಡಪಾರ್ಶ್ವಕ್ಕೆ ಬಿಟ್ಟನು. ಅತ್ತಲಿಂದ ಅರ್ಜುನನು ಬಾಣಗಳನ್ನು ಪ್ರಯೋಗಿಸುತ್ತಿದ್ದರೂ, ದುಶ್ಶಾಸನನು ನಿರ್ಭಯವಾಗಿ ಮುಂದೆಬಿದ್ದು, ಸಾರಥಿಯಾದ ಉತ್ತರನನ್ನು

ಒಂದು ಬಾಣದಿಂದ ಹೊಡೆದನು. ಎರಡನೆಯ ಬಾಣದಿಂದ ಅರ್ಜುನನನ್ನು ಎದೆಯಮೇಲೆ ಹೊಡೆದನು. ಇಷ್ಟರಲ್ಲಿಯೇ ಅರ್ಜುನನು ಹದ್ದಿನ ಗರಿಯುಳ್ಳ ಒಂದು ತೀಕ್ಷ್ಣಬಾಣದಿಂದ ದುಶ್ಶಾಸನನ ಬಿಲ್ಲನ್ನು ಕತ್ತರಿಸಿ, ಐದು ಬಾಣಗಳನ್ನು ಅವನ ಎದೆಯಮೇಲೆ ಹೊಡೆದನು. ಆ ಬಾಣಗಳಿಂದ ದುಶ್ಶಾಸನನು ಬಹಳವಾಗಿ ನೊಂದು ರಥಮಧ್ಯದಿಂದ ತಪ್ಪಿಸಿಕೊಂಡು ಓಡಿಹೋದನು. ಜಯಶೀಲನಾದ ಅರ್ಜುನನಾದರೋ, ರಣರಂಗದಲ್ಲಿ ತಡೆಯಿಲ್ಲದೆ ಎಲ್ಲಾ ಕಡೆಗಳಿಗೂ ನಿರಂಕುಶವಾಗಿ ಸಂಚರಿಸುತ್ತಿದ್ದನು. ಇಷ್ಟರಲ್ಲಿ ವಿಕರ್ಣನು ತೀಕ್ಷ್ಣಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಕೂಡಲೇ ಅರ್ಜುನನು ಒಂದು ತೀಕ್ಷ್ಣಬಾಣವನ್ನು ಅವನ ಹಣೆಗೆ ಗುರಿಯಿಟ್ಟು ಬಲವಾಗಿ ಹೊಡೆಯಲು, ಆ ಪ್ರಹಾರಕ್ಕೆ ನೊಂದು ವಿಕರ್ಣನೂ ಭಯಪಟ್ಟು ಓಡಿಹೋದನು. ಇದನ್ನು ನೋಡಿ ದುಸ್ಸಹ, ವಿವಿಂಶತಿಗಳೆಂಬವರಿಬ್ಬರೂ ತೀಕ್ಷ್ಣಬಾಣಗಳಿಂದ ಅರ್ಜುನನನ್ನು ಪ್ರಹರಿಸಿದರು. ಅರ್ಜುನನು ಅವರಿಬ್ಬರನ್ನೂ ಏಕಕಾಲದಲ್ಲಿ ಎರಡು ತೀಕ್ಷ್ಣಬಾಣಗಳಿಂದ ಹೊಡೆದು, ಅವರ ರಥಾಶ್ವಗಳನ್ನೂ ಕೊಂದುಬಿಟ್ಟನು. ಆಗ ಅವರ ಅನುಚರರಾಗಿ ಬಂದಿದ್ದ ಯೋಧರು, ಅವರಿಬ್ಬರನ್ನೂ ಬೇರೆ ರಥಗಳಮೇಲೆ ಏರಿಸಿಕೊಂಡು ರಣರಂಗದಿಂದ ಸಾಗಿಸಿಬಿಟ್ಟರು. ಹೀಗೆಯೇ ಅರ್ಜುನನು ಇತರ ಧೃತರಾಷ್ಟ್ರಪುತ್ರರೆಲ್ಲರನ್ನೂ ಯುದ್ಧದಿಂದೋಡಿಸಿ, ಯುದ್ಧರಂಗದಲ್ಲಿ ತಾನೇ ತಾನಾಗಿ ಬೆಳಗುತ್ತಿದ್ದನು. ಗುರಿತಪ್ಪದೆ ಬಾಣಗಳನ್ನು ಬಿಡುವ ಸಾಮರ್ಥ್ಯವುಳ್ಳ ಮತ್ತು ಪ್ರತಾಪಶಾಲಿಯಾದ ಪಾರ್ಥನ ಬಾಣಗಳಿಂದ ಅನೇಕ ವೀರರ ತಲೆಗಳೂ, ತೋಳುಗಳೂ ಕತ್ತರಿಸಿ ಕೆಡಹಲ್ಪಟ್ಟಿದ್ದುವು. ಅನೇಕ ವೀರರು ವೇಷಭೂಷಣಗಳೊಡನೆಯೇ ರಣರಂಗದಲ್ಲಿ ಸತ್ತು ಮಲಗಿದ್ದರು. ಆಗ ರಣರಂಗದಲೆಲ್ಲ ಅಂದವಾದ ಮೂಗು, ಪ್ರಕಾಶಮಾನವಾದ ಕಣ್ಣು, ತಿದ್ದಿದ ಮೀಸೆ, ಥಳಥಳಿಸುವ ಮಕರಕುಂಡಲಗಳು, ಇವುಗಳಿಂದ ಅಲಂಕೃತಗಳಾಗಿ ಕಮಲಗಳಿಗೂ, ಸೂರ್ಯಚಂದ್ರರಿಗೂ ಸಮಾನವಾದ ಎಷ್ಟೋ ವೀರರ ತಲೆಗಳು ಕಡಿದುಬಿದ್ದಿದ್ದುವು. ಅನೇಕ ಸೈನ್ಯಗಳು ಭಯಪಟ್ಟು ನಾನಾಕಡೆಗೆ ಓಡಿದುವು. ಇದನ್ನು ನೋಡಿ ದುರ್ಯೋಧನನೂ, ಕರ್ಣನೂ, ಶಕುನಿಯೂ, ದ್ರೋಣನೂ, ಅಶ್ವತ್ಥಾಮನೂ, ಕೃಪನೂ

ಪರಲೋಕದಲ್ಲಿಯೂ ಹೇಗೆ ತಾನೇ ಭೋಗಸಾಧನಗಳಾಗುವುವು? ಓ ಕೌರವಾ! ನಾನು ಆ ಧರ್ಮರಾಜನ ಆಜ್ಞಾಧೀನನಾಗಿ ಬಂದವನು. ಪಾಂಡವರಲ್ಲಿ ನಾನು ಮೂರನೆಯವನು. ಯುದ್ಧದಲ್ಲಿ ಸ್ಥಿರವಾಗಿ ನಿಲ್ಲತಕ್ಕವನು. ಎಲ್ಲಿ? ಇತ್ತಲಾಗಿ ತಿರುಗು! ನಿನ್ನ ಮುಖವನ್ನು ತೋರಿಸು. ಓ ಧಾರ್ತರಾಷ್ಟ್ರಾ! ಕ್ಷತ್ರಿಯಧರ್ಮವನ್ನು ನೆನಸಿಕೊಳ್ಳುವನಾಗು. ನೀನು ದುರ್ಯೋಧನನೆಂದು ಲೋಕದಲ್ಲಿ ಹೆಸರುಗೊಂಡವನು. ಈಗ ಆ ನಿನ್ನ ಹೆಸರು ವ್ಯರ್ಥವಾಯಿತು. ಮೋಸದಲ್ಲಿಯೇ ಬುದ್ಧಿಯುಳ್ಳ ನೀನು ಯುದ್ಧಕ್ಕೆ ಬಲುಸುಲಭನಾಗಿ, ಸುಯೋಧನನೆನಿಸಿದ್ದರೂ, ಹೆಸರಿಗೆಮಾತ್ರ ದುರ್ಯೋಧನನೆನಿಸಿರುವೆ. ಈಗ ರಣರಂಗವನ್ನು ಬಿಟ್ಟು ಭಯದಿಂದೋಡುತ್ತಿರುವ ನಿನಗೆ ಆ ದುರ್ಯೋಧನತ್ವವೆಲ್ಲಿಯದು? ಓ ಕುರುವೀರಾ! ಈಗ ನಿನಗೆ ಹಿಂದೆ ಮುಂದೆ ಯಾರೂ ರಕ್ಷಕರಿರುವಹಾಗೆ ತೋರುವುದಿಲ್ಲ. ನನ್ನ ಬಾಣವೇಗದಿಂದ ಬೆಂದ ನಿನ್ನ ಪ್ರಾಣಗಳನ್ನು ತಿರುಗಿ ನನ್ನೊಡನೆ ಯುದ್ಧದಿಂದ ಆಪ್ಯಾಯನಗೊಳಿಸು'' ಎಂದನು.

ಇದು ಅರುವತ್ತಾರನೆಯ ಅಧ್ಯಾಯವು.



ಅರ್ಜುನನು ಮಾಡಿದ ಹಾಸ್ಯಕ್ಕಾಗಿ ದುರ್ಯೋಧನನು ಹಿಂತಿರುಗಿ ಯುದ್ಧಕ್ಕೆ ನಿಂತುದು. ಅವನ ರಕ್ಷಣೆಗಾಗಿ ಬಂದ ಭೀಷ್ಮಾದಿಗಳೊಡನೆ ಅರ್ಜುನನು ಬಹಳ ಹೊತ್ತು ಯುದ್ಧಮಾಡಿ ಕೊನೆಗೆ ಸಮ್ಮೋಹನಾಸ್ತ್ರವನ್ನು ಬಿಟ್ಟುದು. ಉತ್ತರನು ಮೋಹಿತರಾಗಿ ಮಲಗಿದ್ದ ದ್ರೋಣಾದಿಗಳ ವಸ್ತ್ರವನ್ನು ತಂದುದು.

ಓ, ಜನಮೇಜಯರಾಜಾ! ಅಂಕುಶದಿಂದ ತಿವಿಯಲ್ಪಟ್ಟ ಮದದಾನೆಯಂತೆ, ಅರ್ಜುನನ ಪರಿಹಾಸದ ಮಾತುಗಳಿಂದ ನೊಂದ ದುರ್ಯೋಧನನು ಕೋಪದಿಂದ ಹಿಂತಿರುಗಿದನು. ಅತಿರಥನೆನಿಸಿಕೊಂಡ ಆತನು ಕಾಲಿಂದ ಮೆಟ್ಟಿದ ಸರ್ಪದಂತೆ ನೊಂದು, ತನ್ನ ರಥದೊಡನೆ ಹಿಂತಿರುಗಿ,

ರಮೇಲೆ ಬಿಟ್ಟನು. ಅರ್ಜುನನು ದೃಢವಾದ ಹಿಡಿಗಳುಳ್ಳ ತನ್ನ ತೀಕ್ಷ್ಣ ಬಾಣಗಳಿಂದ ದಿಕ್ಕುವಿದಿಕ್ಕುಗಳನ್ನೆಲ್ಲ ಮರೆಸಿ, ಗಾಂಡೀವ ಶಬ್ದದಿಂದ ಎಲ್ಲರ ಮನಸ್ಸೂ ತತ್ತರಿಸುವಂತೆ ಮಾಡಿ, ಆ ದೊಡ್ಡ ಸೈನ್ಯವನ್ನೆಲ್ಲಾ ಬಹಳವಾಗಿ ನೋಯಿಸಿದನು. ಆಮೇಲೆ ಭಯಂಕರಧ್ವನಿಯುಳ್ಳ ದೇವದತ್ತವೆಂಬ ದಿವ್ಯಶಂಖವನ್ನು ಕೈಗೆತ್ತಿಕೊಂಡು, ಭೂವ್ಯಾಕಾಶಗಳೊಡನೆ ದಿಕ್ಕುವಿದಿಕ್ಕುಗಳೆಲ್ಲವೂ ಮೊಳಗುವಂತೆ ಆ ಶಂಖವನ್ನೂದಿದನು. ಅರ್ಜುನನ ಸಮ್ಮೋಹನಾಸ್ತ್ರದಿಂದುಂಟಾದ ಬಾಣಪರಂಪರೆಗಳು ತಾಗಿದೊಡನೆ ಕೌರವಯೋಧರೆಲ್ಲರೂ ಕೆಳಗೆ ಬಿದ್ದರು. ಅವರ ದೇಹವೇ ಅವರ ಸ್ವಾಧೀನವಿಲ್ಲದಂತಾಯಿತು. ಅವರ ಬಲವೂ, ವೇಗವೂ ಅಡಗಿ, ಕೈಕಾಲುಗಳಾಡದೆ, ಬರೀಗೋಡೆಗಳಂತೆ ಬಿದ್ದುಬಿಟ್ಟರು. ಅರ್ಜುನನ ಶಂಖಧ್ವನಿಯಿಂದ ಅನೇಕಕುರುವೀರರಿಗೆ ಕೈಯಲ್ಲಿದ್ದ ಬಿಲ್ಲುಗಳು ಬಿದ್ದುಹೋಗಲು ಹಾಗೆಯೇ ಮೈಮರೆತು ಬಿದ್ದರು. ಹೀಗೆ ಶತ್ರುಸೈನ್ಯಗಳೆಲ್ಲವೂ ಪ್ರಜ್ಞೆತಪ್ಪಿ ಹೋಗಿರುವುದನ್ನು ನೋಡಿ, ಆಗ ಅರ್ಜುನನಿಗೆ ಉತ್ತರೆಯು ಹೇಳಿದ ಮಾತು ನೆನಪಿಗೆ ಬಂದಿತು. ಆಗ ಅರ್ಜುನನು ಉತ್ತರನನ್ನು ಕುರಿತು, “ಓ ಸಾರಥೀ ! ಕೌರವರೆಲ್ಲರೂ ಪ್ರಜ್ಞೆತಪ್ಪಿರುವರು. ಅವರು ಚೇತರಿಸಿಕೊಂಡು ಏಳುವಷ್ಟರಲ್ಲಿ, ನೀನು ರಥದಿಂದಿಳಿದು ಅಲ್ಲಿ ಹೋಗಿ, ಅವರ ವಸ್ತ್ರಗಳನ್ನು ತೆಗೆದುಕೊಂಡು ಬಾ. ದ್ರೋಣಕೃಪರಿಬ್ಬರೂ ಧರಿಸಿರತಕ್ಕ ಬಿಳಿಯ ವಸ್ತ್ರಗಳನ್ನೂ, ಕರ್ಣನು ಉಟ್ಟಿರತಕ್ಕ ಅಂದವಾದ ಪೀತಾಂಬರವನ್ನೂ, ದುರ್ಯೋಧನನ ಮತ್ತು ಅಶ್ವತ್ಥಾಮನ ಮೈಮೇಲಿರುವ ನೀಲವಸ್ತ್ರಗಳನ್ನೂ ತೆಗೆದುಕೊಂಡು ಬಾ. ಭೀಷ್ಮಾಚಾರ್ಯನನ್ನುಮಾತ್ರ ನೀನು ಮುಟ್ಟಬಾರದು. ಈಗಲೂ ಅವನುಮಾತ್ರ ಪ್ರಜ್ಞೆತಪ್ಪಿಲ್ಲವೆಂದು ನನಗೆ ತೋರಿದೆ. ಏಕೆಂದರೆ, ನನ್ನ ಸಮ್ಮೋಹನಾಸ್ತ್ರವನ್ನು ನಿವಾರಿಸತಕ್ಕ ರೀತಿಯನ್ನು ಅವನು ಚೆನ್ನಾಗಿ ಬಲ್ಲನು. ಆ ಭೀಷ್ಮಾಚಾರ್ಯನ ಕುದುರೆಗಳನ್ನು ನೀನು ಎಡಕ್ಕೆ ಬಿಟ್ಟುಕೊಂಡು ಮುಂದೆ ಹೋಗು. ಹಾಗೆ ನಡೆದುಕೊಳ್ಳಬೇಕಾದುದೇ ಧರ್ಮವು” ಎಂದನು. ಆಗ ಉತ್ತರನು ಕುದುರೆಗಳ ಹಗ್ಗವನ್ನು ಬಿಟ್ಟು, ರಥದಿಂದಿಳಿದು ಹೋಗಿ, ಅಲ್ಲಿ ಮಹಾರಥರ ಮೈಮೇಲಿದ್ದ ವಿಚಿತ್ರವರ್ಣಗಳುಳ್ಳ ನಾನಾತರದ ಬಟ್ಟೆಗಳನ್ನೆಲ್ಲ ತೆಗೆದುಕೊಂಡನು.

ಆ ವಸ್ತ್ರಗಳಲ್ಲಿ ಒಳ್ಳೆಯ ಬೆಲೆಯುಳ್ಳ ದುಕೂಲಗಳೂ, ಚೀನಾಂಬರಗಳೂ, ನಾನಾತರದ ಮನೋಹರಗಳಾದ ಪಟ್ಟೆಮಡಿಗಳೂ ಅನೇಕವಾಗಿದ್ದುವು. ವಸ್ತ್ರಗಳನ್ನು ಮಾತ್ರವಲ್ಲದೆ, ಆಯಾ ರಾಜರು ಧರಿಸಿದ್ದ ಹಾರಗಳನ್ನೂ, ರತ್ನಾಭರಣಗಳನ್ನೂ, ಸುವರ್ಣಭೂಷಣಗಳನ್ನೂ ಮಾಣಿಕ್ಯದಿಂದ ಕೆತ್ತಲ್ಪಟ್ಟ ತೋಳ್ಬಳೆಗಳನ್ನೂ, ಇತರಾಭರಣಗಳನ್ನೂ ಉತ್ತರನು ಕಳಚಿಕೊಂಡು, ಆ ವಸ್ತ್ರಾಭರಣಗಳೊಡನೆ ಬೇಗನೆ ಹಿಂತಿರುಗಿ ಬಂದು, ತಿರುಗಿ ತನ್ನ ರಥವನ್ನೇರಿದನು. ಆಮೇಲೆ ಅರ್ಜುನನು, ತನ್ನ ಸಮ್ಮೋಹನಾಸ್ತ್ರದಿಂದ ಪ್ರಜ್ಞೆತಪ್ಪಿ ಬೊಂಬೆಗಳಂತೆ ಬಿದ್ದಿರುವ ಆ ರಾಜರ ಸ್ಥಿತಿಯನ್ನು ನೋಡಿ, ತನ್ನಲ್ಲಿತಾನೇ ಆಶ್ಚರ್ಯಪಡುತ್ತ ಮೂಗಿನಮೇಲೆ ಬೆರಳಿಟ್ಟು ಕೊಂಡು ನಕ್ಕನು. ಆಮೇಲೆ ಉತ್ತರನು ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನು ತಟ್ಟಿಬಿಡಲು, ಆ ಶ್ವೇತಾಶ್ವಗಳು ಅರ್ಜುನನ ರಥವನ್ನು ಎಳೆದುಕೊಂಡು, ಆ ಶತ್ರುಸೈನ್ಯಮಧ್ಯದಿಂದ ತಿರುಗಿ ಓಡಲಾರಂಭಿಸಿದುವು.

ಹೀಗೆ ಅರ್ಜುನನು ಹೋಗುತ್ತಿರುವುದನ್ನು ತಿಳಿದು ಭೀಷ್ಮನು ಅವನಮೇಲೆ ಬಾಣಗಳನ್ನು ಬಿಡಲಾರಂಭಿಸಿದನು. ಅರ್ಜುನನು ಕೂಡ, ಹಿಂತಿರುಗಿ ಬಾಣಗಳನ್ನು ಬಿಟ್ಟು, ಭೀಷ್ಮನ ಕುದುರೆಗಳನ್ನು ಕೊಂದು, ಹತ್ತು ಬಾಣಗಳಿಂದ ಭೀಷ್ಮನನ್ನು ಹೊಡೆದನು. ಆಮೇಲೆ ಅರ್ಜುನನು ಭೀಷ್ಮನನ್ನು ಬಿಟ್ಟು, ಅವನ ಸಾರಥಿಯನ್ನುಮಾತ್ರ ಹೊಡೆದು, ಅಲ್ಲಿದ್ದ ರಥಸಮೂಹಗಳ ಮಧ್ಯದಿಂದ ಹೊರಗೆ ಬಂದು, ರಾಹುವನ್ನು ಭೇದಿಸಿಕೊಂಡು ಬಂದ ಸೂರ್ಯನಂತೆ ಪ್ರಕಾಶಿಸಿದನು. ಇಷ್ಟರಲ್ಲಿ ಇತ್ತಲಾಗಿ ದುರ್ಯೋಧನನಿಗೂ ಪ್ರಜ್ಞೆ ಬಂದಿತು. ಅರ್ಜುನನು ಯುದ್ಧದಿಂದ ತಪ್ಪಿಸಿಕೊಂಡು ಹೋಗುವುದನ್ನು ನೋಡಿ ಭೀಷ್ಮನನ್ನು ಕುರಿತು, “ಓ ಪಿತಾಮಹಾ! ಅದೋ! ಅರ್ಜುನನು ಹೇಗೋ ಪ್ರಯಾಸದಿಂದ ನಿಮ್ಮಿಂದ ತಪ್ಪಿಸಿಕೊಂಡು ಹೋಗುತ್ತಿರುವನು. ಅವನು ತಪ್ಪಿಸಿಕೊಂಡು ಹೋಗದಂತೆ ಬೇಗನೆ ತಡೆಯಿರಿ” ಎಂದನು. ಆಗ ಭೀಷ್ಮನು ನಗುತ್ತ, “ಕೌರವರಾಜಾ! ಈ ಉತ್ಸಾಹವು ಇದುವರೆಗೆ ಎಲ್ಲಿ ಹೋಗಿತ್ತು? ನಿನ್ನ ವೀರ್ಯವೆಲ್ಲಿ ಹೋಗಿತ್ತು? ಧನುರ್ಬಾಣಗಳನ್ನು ಬಿಟ್ಟುಬಿಟ್ಟು ಏತಕ್ಕಾಗಿ ಇದು

ತೋರಿತು. ಎಲ್ಲರೂ ಹಿಂತಿರುಗಿದರು. ಹೀಗೆ ಕೌರವಸೈನಿಕರು ಹಿಂತಿರುಗುತ್ತಿರುವುದನ್ನು ನೋಡಿ ಅರ್ಜುನನೂ ಸಂತುಷ್ಟಚಿತ್ತನಾದನು. ಆದರೂ ತಿರುಗಿ ಅವರನ್ನು ಯುದ್ಧಕ್ಕಾಗಿ ಕರೆಯುತ್ತ, ಸ್ವಲ್ಪಹೊತ್ತಿನವರೆಗೆ ಅವರನ್ನು ಹಿಂಬಾಲಿಸಿ ಹೋಗಿ, ಲೋಕವೆಲ್ಲವೂ ಮೊಳಗುವಂತೆ ಗಾಂಡೀವವನ್ನು ಧ್ವನಿಮಾಡುತ್ತಿದ್ದನು. ಆ ಸೈನಿಕರು ತಮ್ಮತಮ್ಮ ವಾಹನಗಳನ್ನೂ, ಧ್ವಜಗಳನ್ನೂ ಅಲ್ಲಲ್ಲಿಯೇ ಬಿಟ್ಟುಹೋಗುತ್ತಿರುವುದನ್ನು ನೋಡಿ ಅರ್ಜುನನು, ಘಟ್ಟಿಯಾಗಿ ನಗುತ್ತ, ತನ್ನ ಪೂರ್ಣಬಲದಿಂದ ಶಂಖವನ್ನೂದಿದನು. ಆ ಶಂಖಶಬ್ದವೊಂದು, ಅಂತರಿಕ್ಷದಲ್ಲಿ ಧ್ವಜದ ಶಬ್ದವೊಂದು, ಗಾಂಡೀವ ಧ್ವನಿಯೊಂದು, ಇವೆಲ್ಲ ಒಂದಾಗಿ ಸೇರಲು, ಕೌರವ ಸೈನಿಕರಿಗೆ ಮೇಲೆಮೇಲೆ ಭಯವು ಹೆಚ್ಚಿ, ತಮ್ಮ ಸಮಸ್ತಧನವನ್ನೂ ಬಿಟ್ಟು ಓಡಿಹೋದರು. ಅರ್ಜುನನುಕೂಡ, ವಿರಾಟನ ಗೋಧನವೆಲ್ಲವನ್ನೂ ಇತ್ತಲಾಗಿ ತಿರುಗಿಸಿ, ಅತ್ತಲಾಗಿ ಬಹುದೂರದವರೆಗೆ ಅವರನ್ನು ಹಿಂಬಾಲಿಸಿ ಹೋದನು. ಅರ್ಜುನನು ಉದಾರಬುದ್ಧಿಯುಳ್ಳವನಾದುದರಿಂದ, ತಾನು ಹಿಂತಿರುಗುವುದಕ್ಕಾಗಿ ಅವರ ಅನುಮತಿಯನ್ನು ಕೇಳಿ, ಗುರುಗಳಾದ ಭೀಷ್ಮಾದಿಗಳಿಗೆ ಬಾಣಗಳಿಂದ ಅಭಿವಾದನ ಮಾಡಿದನು. ಮೊದಲು ಪಿತಾಮಹನಾದ ಭೀಷ್ಮನಿಗೆ ಎರಡು ಬಾಣಗಳಿಂದ ಪಾದವಂದನವನ್ನು ಮಾಡಿದನು. ಹಾಗೆಯೇ ದ್ರೋಣನಿಗೂ, ಕೃಪನಿಗೂ, ಬೇರೆ ಎಲ್ಲಾ ಕುರುವಂಶದ ಮಾನ್ಯರಿಗೂ ಬಾಣಗಳಿಂದ ನಮಸ್ಕರಿಸಿದನು. ಆಮೇಲೆ ತನ್ನ ಬಾಣಗಳನ್ನು ದುರ್ಯೋಧನನ ರತ್ನಖಚಿತವಾದ ಕಿರೀಟಕ್ಕೆ ಹೊಡೆದು, “ಓ ದುರ್ಯೋಧನಾ! ರಾಜವಂಶದಲ್ಲಿ ಹುಟ್ಟಿದ ನಿನಗೆ ಈ ಕಿರೀಟದಿಂದೇನು? ನಿನಗೆ ಎಂದಿಗೂ ಈ ಕಿರೀಟವು ಧರಿಸತಕ್ಕುದಲ್ಲ” ಎಂದನು. ಆಗ ದುರ್ಯೋಧನನ ತಲೆಯಿಂದ ಬಿದ್ದ ರತ್ನಕಿರೀಟವನ್ನು ನೋಡಿ ಉತ್ತರನಿಗೆ ಬಹಳ ಆಶ್ಚರ್ಯವಾಗಿತು. ಓ ಜನಮೇಜಯರಾಜಾ! ಅರ್ಜುನನು ಹೀಗೆ ಶತ್ರುಗಳನ್ನೆಲ್ಲ ಜಯಿಸಿ, ಗೋವುಗಳನ್ನು ಹಿಂತಿರುಗಿಸಿಕೊಂಡು, ಮದವೇರಿದ ಆನೆಯಂತೆ ಹೋಗುತ್ತಿರುವುದನ್ನು ಕಣ್ಣಿಂದ ನೋಡುವುದಕ್ಕೂ ಧೈರ್ಯವಿಲ್ಲದೆ, ಕೌರವರೆಲ್ಲರೂ ತಾವು ಬಂದ ದಾರಿಯಲ್ಲಿ ಹಿಂತಿರುಗಿ ಹೊರಟುಹೋದರು. ಮಧ್ಯಾಹ್ನದ ಸೂರ್ಯನಂತೆ

ಅರ್ಜುನನ ತೇಜಸ್ಸು ಅವರ ಕಣ್ಣನ್ನು ಚುಚ್ಚುತಿತ್ತು. ಹೀಗೆ ಯುದ್ಧವೀರನಾದ ಅರ್ಜುನನು ಕೌರವರನ್ನು ಜಯಿಸಿ, ಅವರವರ ವಸ್ತ್ರಗಳನ್ನೆಲ್ಲ ತೆಗೆಯಿಸಿಕೊಂಡು ಹಿಂತಿರುಗಿ ಬರುವಾಗ, ಸಂತೋಷದಿಂದ ಉತ್ತರನನ್ನು ನೋಡಿ, “ಓ ರಾಜಕುಮಾರಾ! ಇನ್ನು ಕುದುರೆಗಳನ್ನು ಹಿಂತಿರುಗಿಸು. ನಿನ್ನ ಗೋವುಗಳೆಲ್ಲವನ್ನೂ ಜಯಿಸಿ ತಂದುದಾಯಿತು. ನಮ್ಮ ಶತ್ರುಗಳೂ ಹೊರಟುಹೋದರು. ಇನ್ನು ನೀನು ಸಂತೋಷದಿಂದ ಪುರಪ್ರವೇಶವನ್ನು ಮಾಡಬಹುದು. ಈಗಲೇ ಪಟ್ಟಣದಲ್ಲಿ ನಿನ್ನ ಜಯವನ್ನು ಉದ್ಘೋಷಿಸುವಂತೆ ಮಾಡು. ನಿನ್ನ ಮೈಯನ್ನು ಗಂಧಾನುಲೇಪನದಿಂದಲಂಕರಿಸು. ನೀನು ಜಯಶೀಲನಾಗಿ ಸಂತೋಷದಿಂದ ಬಂದುದನ್ನು ನೋಡಿ ನಿನ್ನ ತಾಯಿಯೂ, ನಿನ್ನ ಬಂಧುಗಳೂ ಸಂತೋಷಪಡಲಿ” ಎಂದನು.

ಇದು ಅರುವತ್ತೇಳನೆಯ ಅಧ್ಯಾಯವು.

ಅರ್ಜುನನು ತಾವು ಪಾಂಡವರೆಂಬುದನ್ನು ಊರಿನಲ್ಲಿ ತಿಳಿಸ
ಬಾರದೆಂದು ಉತ್ತರನಿಗೆ ಹೇಳಿ, ತಿರುಗಿ ತನ್ನ ಆಯುಧ
ಗಳನ್ನು ಆ ಬನ್ನಿಯ ಮರದಲ್ಲಿಯೇ ಇರಿಸಿ, ಮೊದ
ಲಿದ್ದ ಬೃಹನ್ನಳಾವೇಷದಿಂದ ಸಾರಥ್ಯಕ್ಕೆ ನಿಂತು
ದು. ಅರ್ಜುನನ ಮಾತಿನಮೇಲೆ ಉತ್ತರನು
ಪಟ್ಟಣದಲ್ಲಿ ತನ್ನ ಜಯವನ್ನು ಸಾರುವು
ದಕ್ಕಾಗಿ ದೂತರನ್ನು ಕಳುಹಿಸಿದುದು.

ಓ ಜನಮೇಜಯರಾಜಾ! ಕೇಳು! ಒಳ್ಳೇ ಜಾತಿಯ ವೃಷಭದಂತೆ ಧೀರದೃಷ್ಟಿಯುಳ್ಳ ಆ ಅರ್ಜುನನು, ಹೀಗೆ ಯುದ್ಧದಲ್ಲಿ ಶತ್ರುಗಳನ್ನೆಲ್ಲ ಜಯಿಸಿ, ವಿರಾಟನ ಗೋಧನವನ್ನೆಲ್ಲ ಹಿಂತಿರುಗಿಸಿಕೊಂಡು ಬಂದನು. ಅತ್ತಲಾಗಿ ಕೌರವ ಪ್ರಧಾನ ವೀರರೆಲ್ಲರೂ ಸೋತು, ತಮ್ಮ ಪಟ್ಟಣಕ್ಕೆ ಹಿಂತಿರುಗಿದಮೇಲೆ, ಇತ್ತಲಾಗಿ ಅಲ್ಲಲ್ಲಿ ದುರ್ಗಮವಾದ ಕಾಡುಗಳ ನಡುವೆ ಭಯದಿಂದ ಅವಿತುಕೊಂಡಿದ್ದ ಅನೇಕಸೈನಿಕರು ಅಲ್ಲಿಂದ ಅರ್ಜುನನ ಬಳಿಗೆ ಬಂದರು. ಆಗ ಅವರ ದುರವಸ್ಥೆಯನ್ನು ಕೇಳಬೇಕೆ? ವಿದೇಶಕ್ಕೆ ಬಂದ ಅವರೊಬ್ಬೊಬ್ಬರೂ ಅನ್ನನೀರಿಲ್ಲದೆ, ಹಸಿವು ಬಾಯಾರಿಕೆಗಳಿಂದ

ಮುಂದಾಗಿ ಪುರಕ್ಕೆ ಹೋಗಿ ನಮ್ಮ ಜಯವನ್ನು ತಿಳಿಸಬೇಕು. ಕೌರವ ಸೈನ್ಯವನ್ನು ನಾನೇ ಜಯಿಸಿದೆನೆಂದೂ, ಶತ್ರುಗಳಿಂದ ಗೋವುಗಳನ್ನು ನಾನೇ ಬಿಡಿಸಿಕೊಂಡು ಬಂದೆನೆಂದೂ, ನಾನು ಮಾಡಿದ ಕಾರ್ಯವನ್ನು ನೀವು ಪಟ್ಟಣದಲ್ಲಿ ಯಥೇಚ್ಛವಾಗಿ ಅಲ್ಲಲ್ಲಿ ಉದ್ಘೋಷಿಸಿರಿ'' ಎಂದನು.

ಇದು ಅರುವತ್ತೆಂಟನೆಯ ಅಧ್ಯಾಯವು.

ಅತ್ತಲಾಗಿ ಸುಶರ್ಮನೊಡನೆ ಹೋಗಿದ್ದ ವಿರಾಟನು, ಜಯಶೀಲನಾಗಿ ನಾಲ್ಕುಮಂದಿ ಪಾಂಡವರೊಡನೆ ಹಿಂತಿರುಗಿ ಬಂದುದು. ಉತ್ತರನು ಕೌರವರೊಡನೆ ಉತ್ತರದಿಕ್ಕಿನಲ್ಲಿ ಯುದ್ಧಕ್ಕೆ ಹೋದುದನ್ನು ಕೇಳಿ ಭಯಪಟ್ಟು, ಅವನ ಸಹಾಯಕ್ಕಾಗಿ ಸೇನೆಗಳನ್ನು ಕಳುಹಿಸಿದುದು. ಇಷ್ಟರಲ್ಲಿ ದೂತರು ಬಂದು ಉತ್ತರನ ಜಯವನ್ನು ವಿರಾಟನಿಗೆ ತಿಳಿಸಿದುದು.

ಓ ಜನಮೇಜಯರಾಜಾ! ಅತ್ತಲಾಗಿ ದಕ್ಷಿಣದಿಕ್ಕಿನಲ್ಲಿ ಸುಶರ್ಮನೊಡನೆ ಯುದ್ಧಕ್ಕಾಗಿ ಸೇನಾಸಮೇತನಾಗಿ ಹೋಗಿದ್ದ ವಿರಾಟನು, ಅಲ್ಲಿ ಜಯಶೀಲನಾಗಿ, (ಅರ್ಜುನನು ಹೊರತು) ನಾಲ್ಕು ಮಂದಿ ಪಾಂಡವರೊಡನೆ, ಅಲ್ಲಿಂದ ಹಿಂತಿರುಗಿ, ಆಗಲೇ ಸಂತೋಷದಿಂದ ಪಟ್ಟಣಕ್ಕೆ ಬಂದು ಸೇರಿದನು. ಯುದ್ಧದಲ್ಲಿ ತ್ರಿಗರ್ತರನ್ನು ಜಯಿಸಿ, ಅವರು ಹಿಡಿದಿದ್ದ ಗೋವುಗಳನ್ನೆಲ್ಲ ಬಿಡಿಸಿ ತಂದ ವಿರಾಟನು, ಆಗ ಪಾಂಡವರೊಡಗೂಡಿ ಅಪೂರ್ವಕಾಂತಿಯಿಂದ ಬೆಳಗುತಿದ್ದನು. ಅನೇಕಪ್ರಜೆಗಳೂ, ಬ್ರಾಹ್ಮಣರೂ ಬಂದು ಸಂತೋಷದಿಂದ ಸುತ್ತಿಮುತ್ತಿ ಜಯಶೀಲನಾದ ಅವನನ್ನು ಗೌರವಿಸುತಿದ್ದರು. ವಿರಾಟನೂ ಕೂಡ, ಅವರೆಲ್ಲರನ್ನೂ ಸತ್ಕರಿಸಿ ಕಳುಹಿಸಿಬಿಟ್ಟು, ಅನೇಕ ಸ್ತ್ರೀಯರಿಂದ ತುಂಬಿದ ತನ್ನ ಅಂತಃಪುರಕ್ಕೆ ಬಂದನು. ಅಲ್ಲಿ ತನ್ನ ಮಗನಾದ ಉತ್ತರನನ್ನು ಕಾಣದೆ 'ಕುಮಾರನೆಲ್ಲಿ' ಎಂದು ಕೇಳಿದನು. ಅಲ್ಲಿದ್ದ ಹೆಂಗಸರೂ, ಕನ್ಯೆಯರೂ, ಮತ್ತು ಅಂತಃಪುರದಲ್ಲಿರತಕ್ಕ ಇತರರೂ ಬಹಳ ಸಂತೋಷದೊಡನೆ "ಮಹಾರಾಜಾ! ಕೌರ

ವರು ನಮ್ಮ ಗೋವುಗಳನ್ನು ಅಪಹರಿಸಿಕೊಂಡು ಹೋದ ಸುದ್ದಿಯನ್ನು ಕೇಳಿ, ನಮ್ಮ ಉತ್ತರಕುಮಾರನು ಅವರೊಡನೆ ಯುದ್ಧಕ್ಕಾಗಿ ಆತುರದಿಂದ ತಾನೊಬ್ಬನೇ ಹೊರಟುಬಿಟ್ಟನು. ಬೃಹನ್ನಳೆಯನ್ನು ಮಾತ್ರ ಸಹಾಯಕ್ಕೆ ಕರೆದುಕೊಂಡು ಹೊರಟುಹೋಗಿರುವನು. ಆ ಕೌರವಸೈನ್ಯದಲ್ಲಿ ಭೀಷ್ಮ, ದ್ರೋಣ, ಕೃಪ, ಕರ್ಣ, ದುರ್ಯೋಧನ, ಅಶ್ವತ್ಥಾಮರೆಂಬ ಆರು ಮಂದಿ ಮಹಾರಥಿಕರು ಬಂದಿರುವರೆಂದು ಕೇಳಿ, ಸಾಹಸದಿಂದ ಅವರನ್ನಿದಿರಿಸು ವುದಕ್ಕಾಗಿ ಹೋದನು" ಎಂದರು. ಈ ಮಾತನ್ನು ಕೇಳಿ ವಿರಾಟನ ಮ ನಸ್ಸು ಭಯದಿಂದ ತತ್ತಳಿಸಿತು. ತನ್ನ ಮಗನು ರಥಮಾತ್ರ ಸಹಾಯ ನಾಗಿ, ಶಿಖಂಡಿಯನ್ನು ಸಾರಥ್ಯಕ್ಕಿಟ್ಟುಕೊಂಡು ಹೋದುದನ್ನು ಕೇಳಿ ಬೆಚ್ಚರಬಿದ್ದು ವಿರಾಟನು, ಅಲ್ಲಿದ್ದ ಎಲ್ಲಾ ಮಂತ್ರಿವರ್ಗದೊಡನೆ "ಆಹಾ! ಕುರುಗಳಲ್ಲಿಯಾದರೋ ಎಲ್ಲರೂ ಯುದ್ಧದಲ್ಲಿ ಮಹಾನಿಪುಣರು. ಅವರು ಲೀಲಾಮಾತ್ರದಿಂದ ನನ್ನ ಮಗನನ್ನು ಪರಾಭವಿಸಿ, ನಮ್ಮ ಲಕ್ಷೋಪಲಕ್ಷ ಗೋವುಗಳನ್ನೆಲ್ಲ ಸಾಗಿಸದೆ ಬಿಡಲಾರರು. ಆದುದರಿಂದ ಈಗಲೇ ನಮ್ಮ ಕಡೆಯ ವೀರರು, ದೊಡ್ಡ ಸೈನ್ಯದೊಡನೆ ನನ್ನ ಕುಮಾರನ ಬೆಂಬಲ ಕ್ಕಾಗಿ ಹೋಗಲಿ! ತ್ರಿಗರ್ತರಿಂದ ಗಾಯಪಡದೆ ಹಿಂತಿರುಗಿ ಬಂದ ಸೈನಿಕ ರೆಲ್ಲರನ್ನೂ ಕಳುಹಿಸಿರಿ" ಎಂದನು. ಒಡನೆಯೇ ಆನೆಗಳು, ಕುದುರೆಗಳು, ರಥಗಳು, ನಾನಾಬಗೆಯ ರಣವಾದ್ಯಗಳು, ಇವೆಲ್ಲವನ್ನೂ ತಕ್ಕ ಸನ್ನಾಹಗ ಳೊಡನೆ ಹೊರಡಿಸಿದನು. ಯುದ್ಧಯೋಗ್ಯವಾದ ವಿಚಿತ್ರಾಲಂಕಾರಗಳೊ ಡನೆ ಸೈನ್ಯಗಳೆಲ್ಲ ಹೊರಟುವು. ಹೀಗೆ ವಿರಾಟನು ದೊಡ್ಡ ಚತುರಂಗ ಸೈನ್ಯವನ್ನು ತನ್ನ ಮಗನ ಸಹಾಯಕ್ಕಾಗಿ ಹೊರಡಿಸುತ್ತ "ಎಲೆ ವೀರರೆ! ಬೇಗನೆ ಹೊರಡಿರಿ! ನನ್ನ ಮಗನು ಬದುಕಿರುವನೋ ಇಲ್ಲವೋ ಮೊದಲು ತಿಳಿದುಕೊಳ್ಳಿರಿ. ಅವನು ಯಾವನೋ ಒಬ್ಬ ಷಂಡನನ್ನು ಸಾರಥ್ಯಕ್ಕಿ ಟ್ಟುಕೊಂಡು ಸಾಹಸದಿಂದ ಯುದ್ಧಕ್ಕೆ ಹೊರಟಿರುವನು. ಅವನು ಇಷ್ಟರ ವರೆಗೆ ಬದುಕಿರುವನೆಂದೇ ನನಗೆ ತೋರಲಿಲ್ಲ" ಎಂದನು. ಹೀಗೆ ಕಳವಳಿ ಸುತ್ತಿರುವ ವಿರಾಟನ ಮಾತನ್ನು ಕೇಳಿ ಸಮೀಪದಲ್ಲಿದ್ದ ಧರ್ಮರಾಜನು "ಮಹಾರಾಜಾ! ಹೀಗೇಕೆ ಕಳವಳಿಸುವೆ? ಬೃಹನ್ನಳೆಯು ನಿಜವಾಗಿ ನಿನ್ನ ಮಗನ ಸಾರಥ್ಯಕ್ಕೆ ಹೋಗಿರುವುದಾದರೆ, ಶತ್ರುಗಳು ನಿನ್ನ ಗೋವು

ಗಳನ್ನು ಸಾಗಿಸಿಕೊಂಡು ಹೋಗಲಾರರು. ಇದು ನಿಶ್ಚಯವು. ನಿನ್ನ ಮಗನು ಆ ಬೃಹನ್ನಳೆಯನ್ನು ಸಾರಥ್ಯಕ್ಕಿಟ್ಟುಕೊಂಡಿರುವುದಾದರೆ, ಅನೇಕ ರಾಜರೊಡನೆ ಆ ಕೌರವರನ್ನು ಮಾತ್ರವೇ ಅಲ್ಲ! ದೇವದಾನವ, ಯಕ್ಷ ಪನ್ನಗರೆಲ್ಲರೂ ಸೇರಿ ಬಂದರೂ ನಿನ್ನ ಮಗನು ಅವರೆಲ್ಲರನ್ನೂ ಯುದ್ಧದಲ್ಲಿ ಜಯಿಸಲು ಸಮರ್ಥನೆಂದು ತಿಳಿ! ರಾಜಾ! ಅಷ್ಟೇಕೆ? ಆ ಕೌರವರಾಗಲಿ, ಇತರ ರಾಜರಾಗಲಿ, ತ್ರಿಗರ್ತರು ನಿನ್ನಿಂದ ಪರಾಜಿತರಾಗಿ ಓಡಿ ಹೋದುದನ್ನು ಕೇಳಿದೊಡನೆ, ತಾವಾಗಿಯೇ ಯುದ್ಧವನ್ನು ಬಿಟ್ಟು ಓಡಿ ಹೋಗುವರಲ್ಲದೆ ಹೇಗೂ ನಿಲ್ಲರಾರರು'' ಎಂದನು. ಇಷ್ಟರಲ್ಲಿಯೇ ಉತ್ತರನಿಂದ ಕಳುಹಿಸಲ್ಪಟ್ಟ ದೂತರು, ಬಹುವೇಗದಿಂದ ದಾರಿನಡೆದು, ನಗರವನ್ನು ಸೇರಿ, ಅನೇಕ ಮಂತ್ರಿಗಳನಡುವೆ ಇದ್ದ ವಿರಾಟನಿಗೆ, ಅವನ ಮಗನಾದ ಉತ್ತರನು ಜಯಶೀಲನಾಗಿ ಹಿಂತಿರುಗಿ ಬರುತ್ತಿರುವುದನ್ನು ತಿಳಿಸುತ್ತ, ''ಓ ರಾಜೇಂದ್ರಾ! ನಮ್ಮ ಗೋವುಗಳೆಲ್ಲ ಹಿಂತಿರುಗಿಸಲ್ಪಟ್ಟುವು. ಕೌರವರು ಪರಾಜಿತರಾದರು. ಉತ್ತರನು ತನ್ನ ಸಾರಥಿಯೊಡನೆ ಕ್ಷೇಮದಿಂದ ಬರುತ್ತಿರುವನು'' ಎಂದರು.

ಈ ಮಾತನ್ನು ಕೇಳಿ ಕಂಕನು ''ಓ ರಾಜೇಂದ್ರಾ! ನಾನು ಮೊದಲೇ ಹೇಳಲಿಲ್ಲವೇ. ಭಾಗ್ಯವಶದಿಂದ ನಿನ್ನ ಗೋವುಗಳು ಹಿಂತಿರುಗಿಸಲ್ಪಟ್ಟುವು. ಕುರುಗಳೂ ಪರಾಜಿತರಾದರು. ಭಾಗ್ಯವಶದಿಂದ ನಿನ್ನ ಮಗನು ಯುದ್ಧದಲ್ಲಿ ಜಯಶೀಲನಾದುದನ್ನು ಕೇಳುವೆವು. ಆದರೆ ಈಗ ನಿನ್ನ ಮಗನು ಕುರುಗಳನ್ನು ಜಯಿಸಿದುದೇನೂ ಆಶ್ಚರ್ಯವಲ್ಲ. ಬೃಹನ್ನಳೆಯು ಅವನಿಗೆ ಸಾರಥಿಯಾಗಿರುವಾಗ ಹೇಗಿದ್ದರೂ ಅವನಿಗೆ ಜಯವು ಸಿದ್ಧವೇ. ಪ್ರಸಿದ್ಧ ಪರಾಕ್ರಮವುಳ್ಳ ಇಂದ್ರಸಾರಥಿಯಾದ ಮಾತಲಿಯಾಗಲಿ, ಕೃಷ್ಣ ಸಾರಥಿಯಾದ ದಾರುಕನಾಗಲಿ ಆ ಬೃಹನ್ನಳೆಗೆ ಸಾಟಿಯಲ್ಲ'' ಎಂದನು. ಓ ಜನಮೇಜಯರಾಜಾ! ತನ್ನ ಮಗನಾದ ಉತ್ತರನ ವಿಜಯವಾರ್ತೆಯನ್ನು ಕೇಳಿ ವಿರಾಟನ ಸಂತೋಷಕ್ಕೆ ಪಾರವಿರಲಿಲ್ಲ. ರೋಮಾಂಚದಿಂದ ಅವನ ಮೈ ಉಬ್ಬಿಹೋಯಿತು. ಆ ಪ್ರಿಯವೃತ್ತಾಂತವನ್ನು ತಿಳಿಸಿದ ತನ್ನ ದೂತರಿಗೆ ಅನೇಕವಿಧವಾಗಿ ಧನಗಳನ್ನೂ, ರತ್ನ

ಗಳನ್ನೂ ಕೊಟ್ಟು ಸಂತೋಷಗೊಳಿಸಿದನು. ಆ ದೂತರೆಲ್ಲರೂ ಹೊರಟು ಹೋದಮೇಲೆ, ವಿರಾಟನು ತನ್ನ ಮಗನ ಜಯಕ್ಕಾಗಿ ಸಂತೋಷಗೊಂಡು ತನ್ನ ಮಂತ್ರಿಗಳನ್ನು ಕರೆದು, "ಓ ಅಮಾತ್ಯರೇ! ರಾಜಮಾರ್ಗಗಳನ್ನೆಲ್ಲ ಧ್ವಜಗಳಿಂದ ಅಲಂಕರಿಸಿರಿ ಪುಷ್ಪೋಪಹಾರಗಳಿಂದ ಎಲ್ಲಾ ಕಡೆಯಲ್ಲಿಯೂ ದೇವತೆಗಳನ್ನು ಪೂಜಿಸಿರಿ. ರಾಜಕುಮಾರರೂ, ಪ್ರಧಾನಯೋಧರೂ, ಒಳ್ಳೆಯ ಅಲಂಕೃತರಾದ ವೇಶ್ಯೆಯರೂ ಸಮಸ್ತ ಮಂಗಳವಾದ್ಯಗಳೊಡನೆ ನನ್ನ ಮಗನನ್ನು ಇದಿರುಗೊಂಡು ಹೋಗಲಿ. ನನ್ನ ಮಗನ ಜಯವನ್ನು ಕೊಂಡಾಡುವುದಕ್ಕಾಗಿ ಪುರವಾಸಿಗಳೂ, ಇತರ ಸ್ತ್ರೀಪುರುಷರೂ, ಶುಭ್ರ ವಸ್ತ್ರಗಳನ್ನುಟ್ಟುಕೊಂಡು ದಾರಿಗಿದಿರಾಗಿ ಹೋಗಲಿ. ಹೆಂಗಸರೆಲ್ಲರೂ ಗಂಧಮಾಲ್ಯಗಳಿಂದಲೂ, ಆಭರಣಗಳಿಂದಲೂ ಅಲಂಕೃತರಾಗಿ ಬರಲಿ. ಎಲ್ಲಾ ಗಣಿಕೆಯರೂ, ಕನ್ಯೆಯರೂ ಒಳ್ಳೆಯ ಅಲಂಕಾರಗಳನ್ನು ಮಾಡಿಕೊಂಡು, ರಮ್ಯವಾದ ವೇಷಗಳಿಂದ ನಮ್ಮ ಸಮಸ್ತ ಸೈನ್ಯಗಳೊಡನೆ ಜಯಶೀಲನಾದ ನನ್ನ ಪುತ್ರನನ್ನು ಹಿಂಬಾಲಿಸಿ ಬರಲಿ. ನನ್ನ ಕಿಂಕರರು ಈಗಲೇ ಮದದಾನೆಯನ್ನೇರಿಕೊಂಡು ಘಂಟೆಗಳನ್ನೂ, ಪಣವವಾದ್ಯಗಳನ್ನೂ ಬಾರಿಸುತ್ತ, ನಾಲ್ಕು ಬೀದಿಗಳು ಕೂಡುವ ಎಲ್ಲಾ ಚೌಕಗಳಲ್ಲಿಯೂ ನಮ್ಮ ಜಯವನ್ನು ಸಾರುತ್ತ ಬರಲಿ. ನನ್ನ ಮಗಳಾದ ಉತ್ತರೆಯು ಸರ್ವಾಭರಣಗಳಿಂದಲಂಕೃತಳಾಗಿ, ಇತರ ರಾಜಕುಮಾರಿಯರೆಲ್ಲರೊಡನೆ ತನ್ನ ಪ್ರಿಯಸಖಿಯಾದ ಬೃಹನ್ನಳೆಯನ್ನು ಇದಿರುಗೊಳ್ಳುವುದಕ್ಕೆ ಹೋಗಲಿ" ಎಂದನು. ಈ ರಾಜಾಜ್ಞೆಯನ್ನು ಕೇಳಿದೊಡನೆ ಪುರವಾಸಿಗಳೆಲ್ಲರೂ ಸಂತೋಷದಿಂದ ಮಂಗಳದ್ರವ್ಯಗಳನ್ನು ಕೈಯಲ್ಲಿ ಹಿಡಿದುಕೊಂಡು ಹೊರಟರು. ಸೂತಮಾಗಧರೂ, ಇನ್ನೂ ನಗರದಲ್ಲಿರತಕ್ಕ ಜನಗಳೆಲ್ಲರೂ ಹೊರಟರು. ಭೇರಿಗಳೂ, ತೂರ್ಯಗಳೂ, ಶಂಖಗಳೂ ನುಡಿಸಲ್ಪಟ್ಟುವು. ಸ್ತ್ರೀಯರೆಲ್ಲರೂ ಉತ್ತಮವೇಷಗಳಿಂದ ಸಿದ್ಧರಾಗಿ ಹೊರಟರು. ಹೊಗಳುಭಟರ ಸ್ತೋತ್ರಪಾಠಗಳೊಂದು ಕಡೆ! ಪಣವಾದಿ ಚರ್ಮವಾದ್ಯಗಳೊಂದು ಕಡೆ! ಕೊಳಲಿನ ಧ್ವನಿಯೊಂದು ಕಡೆ! ಕಂಚಿನ ತಾಳಗಳೊಂದು ಕಡೆ! ಮಧುರವಾದ ಗಾನವೊಂದು ಕಡೆ! ಇವೆಲ್ಲವುಗಳೊಡನೆ ಅನೇಕಸ್ತ್ರೀಯರು ಪಟ್ಟಣದಿಂದ ಹೊರಟರು. ವೇದಗಳ

ನ್ನೋದಿದವರೂ, ಶಾಂತಿಪ್ರಧಾನರೂ, ಅಧ್ಯಯನ ಕ್ರಮಗಳನ್ನೊದಿದ ವರೂ, ಸ್ವಸ್ತಿಕಾರ್ಯಗಳನ್ನೂ, ಮಂತ್ರಜಪಗಳನ್ನೂ, ಸಾಮಗಾನಗಳ ನ್ನೂ ಬಲ್ಲವರೂ ಆದ ಅನೇಕಬ್ರಾಹ್ಮಣರು ಉತ್ತರನನ್ನು ಇದಿರುಗೊಳ್ಳು ವುದಕ್ಕಾಗಿ ಹೊರಟು ಬಂದರು.

ಇದು ಅರುವತ್ತೊಂಭತ್ತನೆಯ ಅಧ್ಯಾಯವು.

ಉತ್ತರನ ಜಯವನ್ನು ಕೇಳಿದ ಸಂತೋಷಕ್ಕಾಗಿ ವಿರಾಟನು ಕಂಕನೊಡನೆ ಪಗಡೆಯನ್ನಾರಂಭಿಸಿದುದು. ವಿರಾಟನು ಉತ್ತರನನ್ನು ಹೊಗಳುತಿದ್ದಾಗ, ಬೃಹನ್ನಳೆಯನ್ನು ಪ್ರಶಂಸೆಮಾಡಿದ ಧರ್ಮರಾಜನನ್ನು ವಿರಾಟನು ದಾಳದಿಂದ ಹೊಡೆದುದು. ಸೈರಂಧ್ರಿಯು ಧರ್ಮರಾಜನ ಗಾಯವನ್ನು ಒತ್ತಿ ಹಿಡಿದುದು.

ಓ ಜನಮೇಜಯರಾಜಾ! ಹೀಗೆ ವಿರಾಟನು ತನ್ನ ಸೈನ್ಯವನ್ನೂ, ಕನ್ಯೆಯರನ್ನೂ, ಚೆನ್ನಾಗಿ ಅಲಂಕೃತರಾದ ವೇಶ್ಯೆಯರನ್ನೂ ಕಳುಹಿಸಿ ಕೊಟ್ಟು, ತನ್ನ ಮನಸ್ಸಿನ ಸಂತೋಷವನ್ನು ತಡೆಯಲಾರದೆ ಕಂಕನೊಡನೆ ಹೀಗೆಂದು ಹೇಳುವನು. "ಓ ಯತಿಶ್ರೇಷ್ಠಾ! ಅತ್ತಲಾಗಿ ನಾನು ಯುದ್ಧ ದಲ್ಲಿ ತ್ರಿಗರ್ತರನ್ನೆಲ್ಲ ಜಯಿಸಿ ಬಂದೆನು. ಈಗ ನನ್ನ ಮಗನು ಜಯಿಸಿದ ಮತ್ತೊಂದು ಸಂತೋಷವಾರ್ತೆಯೂ ಕಿವಿಗೆ ಬಿದ್ದಿತು. ಇನ್ನು ನಾವು ಅಂತಃಪುರಕ್ಕೆ ಹೋಗಿ ಸಂತೋಷವಾಗಿ ಪಗಡೆಯನ್ನಾಡುವೆವು. ಸೈ ರಂಧ್ರೀ! ಪಗಡೆಯ ಕಾಯಿಗಳನ್ನು ತಂದಿಡು. ಪಗಡೆಯ ಹಾಸನ್ನು ಹಾಸಿ ಡು. ಕುಳ್ಳಿರುವುದಕ್ಕೆ ಆಸನವನ್ನು ಕಲ್ಪಿಸು. ನೀನು ಬೀಸಣಿಗೆಯನ್ನು ಹಿಡಿದು ನಮ್ಮ ಪಕ್ಕದಲ್ಲಿಯೇ ನಿಂತು ಬೀಸುತ್ತಿರು" ಎಂದನು. ಈ ಮಾ ತನ್ನು ಕೇಳಿ ಧರ್ಮರಾಜನು, "ಓ ಮಹಾರಾಜಾ! ಜೂಜಾಡುವವನು ಸಂತೋಷದಿಂದಿದ್ದ ಕಾಲದಲ್ಲಿ, ಅಂತವನೊಡನೆ ಜೂಜಾಡಬಾರದೆಂದು ನಾನು ಕೇಳಿರುವೆನು. ನಿನಗಾದರೋ ಈಗ ಸಂತೋಷವು ಉಕ್ಕುತ್ತಿರು

ವುದು. ಈಗ ನಿನ್ನೊಡನೆ ಜೂಜಾಡುವುದು ನನಗೆ ಸಮ್ಮತವಿಲ್ಲ. ನಿನಗೆ ಪ್ರಿಯವಾದ ಬೇರೆ ಯಾವುದಾದರೂ ಕಾರ್ಯವನ್ನು ಹೇಳು ನಡೆಸುವೆನು. ಈಗ ಈ ಜನಗಳಮುಂದೆ ದ್ಯೂತವನ್ನಾಡುವುದು ನಮಗೆ ಉಚಿತವಲ್ಲ'' ಎಂದನು. ಅದಕ್ಕಾ ವಿರಾಟನು '' ಓ ಬ್ರಾಹ್ಮಣಾ ! ನಿನ್ನಿಂದ ನಾನೇನೂ ಧನವನ್ನಾಗಲಿ, ಸ್ತ್ರೀಯರನ್ನಾಗಲಿ, ಗೋವುಗಳನ್ನಾಗಲಿ, ಸುವರ್ಣವನ್ನಾಗಲಿ, ಬೇರೆ ಯಾವ ವಸ್ತುವನ್ನೇ ಆಗಲಿ, ಜೂಜಾಡಿ ಕಿತ್ತುಕೊಳ್ಳಬೇಕೆಂಬ ಉದ್ದೇಶವಿಲ್ಲ. ಸುಮ್ಮನೆ ವಿನೋದಕ್ಕಾಗಿ ಆಡುವುದೊಂದೇ ಹೊರತು ಬೇರೆಯಲ್ಲ'' ಎಂದನು. ಅದಕ್ಕಾ ಕಂಕನು '' ಎಲೈ ಮಾನ್ಯನೇ ! ಅನೇಕ ದೋಷಾಸ್ಪದವಾದ ಆ ಜೂಜಿನಿಂದ ಈಗ ನಿನಗೇನಾಗಬೇಕಾಗಿದೆ ? ಜೂಜಾಟದಲ್ಲಿ ಬಹಳ ದೋಷಗಳುಂಟು. ಆ ವ್ಯಸನವನ್ನು ಪೂರ್ಣವಾಗಿ ಬಿಟ್ಟುಬಿಡಬೇಕು. ಧರ್ಮರಾಜನಾದ ಯುಧಿಷ್ಠಿರನ ಗತಿಯನ್ನು ನೀನು ಕಂಡಾದರೂ, ಕೇಳಿಯಾದರೂ ಇಲ್ಲವೇ ? ಅವನು ರಾಜ್ಯವನ್ನೂ, ಅಪರಿಮಿತವಾದ ಧನವನ್ನೂ, ತನಗೆ ಪ್ರಿಯಭಾರ್ಯೆಯಾದ ಕೃಷ್ಣೆಯನ್ನೂ, ದೇವಸಮಾನರಾದ ಸಹೋದರರನ್ನೂ ಒಂದೇ ಪಣವಾಗಿಟ್ಟು ಎಲ್ಲವನ್ನೂ ಸೋತುಬಿಟ್ಟನು. ಈಗಲೂ ಆ ಪಾಂಡುಪುತ್ರನು ತಾನು ಮಾಡಿದ ಕೆಲಸಕ್ಕಾಗಿ ಪಶ್ಚಾತ್ತಾಪಪಡುತ್ತಿರುವನೆಂಬುದರಲ್ಲಿ ಸಂದೇಹವಿಲ್ಲ. ಅವನು ಸಮಸ್ತ ರತ್ನಗಳನ್ನೂ, ಧನಗಳನ್ನೂ ಕಳೆದುಕೊಂಡು, ಈಗ ಸಂಕಟಪಡುತ್ತಿರುವನು. ಜೂಜೆಂಬುದು ಮನುಷ್ಯನಿಗೆ ಸರ್ವಾಭೀಷ್ಟಗಳನ್ನೂ ಕೆಡಿಸುವುದು. ಸರ್ವಸ್ವವೂ ನಷ್ಟವಾಗುವುದು. ಮೇಲೆಮೇಲೆ ಮಾತುಗಳು ಕ್ರೂರವಾಗುವುವು. ಜೂಜಾಟದಲ್ಲಿ ವಿವೇಕಿಗಳು ಎಂದಿಗೂ ನಂಬಿಕೆಯನ್ನಿಡರು. ಜೂಜಿನಿಂದ ಒಂದೇ ದಿನದಲ್ಲಿ ಯುಧಿಷ್ಠಿರನು ಸರ್ವಸ್ವವನ್ನೂ ಕಳೆದುಕೊಂಡನು. ಆದುದರಿಂದ ನನಗೆ ಆ ಜೂಜಾಟದಲ್ಲಿ ಸ್ವಲ್ಪವೂ ಇಷ್ಟವಿಲ್ಲ. ಹಾಗಿದ್ದರೂ ನೀನು ಆಡಬೇಕೆಂದು ನಿರ್ಬಂಧಿಸುವುದಾದರೆ, ಅದು ನಿನಗೂ ಪ್ರಿಯವಾಗಿದ್ದರೆ, ನಿನಗಾಗಿ ಆಡುವೆನು'' ಎಂದನು. ಆ ಮೇಲೆ ಇಬ್ಬರೂ ಆಟಕ್ಕೆ ತೊಡಗಿದರು. ಆಡುತ್ತಿರುವಾಗ ನಡುವೆ ವಿರಾಟನು, ಧರ್ಮರಾಜನನ್ನು ಕುರಿತು, '' ಮುನಿವರ್ಯಾ ! ನೋಡಿದೆಯಲ್ಲವೆ ? ನನ್ನ ಮಗನು ಯುದ್ಧದಲ್ಲಿ ಅಂತಹ ಕುರುಗಳನ್ನೆಲ್ಲ ಜಯಿಸಿಬಿಟ್ಟನು. ಆ

ಕುರುಗಳಾದರೋ ಎಲ್ಲರೂ ಅತಿರಥರು. ದೇವತೆಗಳಿಗೂ ದುರ್ಜಯರು" ಎಂದನು. ಆಗ ಧರ್ಮರಾಜನು, "ಓ ರಾಜಾ! ನಿನ್ನ ಗೋವುಗಳನ್ನು ಜಯಿಸಿದುದೂ, ಕೌರವರು ಪರಾಜಿತರಾದುದೂ ಭಾಗ್ಯವಶದಿಂದಲೇ ಹೊರತು ಬೇರೆಯಲ್ಲ. ನಿನ್ನ ಮಗನಾದ ಉತ್ತರನು ಕುರುಗಳನ್ನು ಜಯಿಸುವುದಾದರೆ, ಅದು ಅತ್ಯಾಶ್ಚರ್ಯವೆಂದೇ ನನಗೆ ತೋರಿದೆ. ಆದರೆ ಬೃಹನ್ನಳೆಯು ಯಾವನಿಗೆ ಸಾರಥಿಯೋ, ಅವನು ಹೇಗಿದ್ದರೂ ಜಯಿಸುವುದೇನೋ ನಿಶ್ಚಯವು" ಎಂದನು. ಈ ಮಾತನ್ನು ಕೇಳಿ ವಿರಾಟನ ಮನಸ್ಸು ಕಲಗಿತು. ಕೋಪದಿಂದ ರೇಗಿ ಧರ್ಮರಾಜನನ್ನು ಕುರಿತು "ಓ ಬ್ರಾಹ್ಮಣಾ! ನನ್ನ ಮಗನಾದರೋ ಮಹಾ ಧನುರ್ಧಾರಿ. ಬಹಳ ಧೀಮಂತನು. ಒಳ್ಳೆಯ ಯೋಧನು. ಅಂತವನು ಯುದ್ಧದಲ್ಲಿ ಕುರುಗಳನ್ನು ಜಯಿಸಿದನೆಂದರೆ ಆಶ್ಚರ್ಯವೇನಿದೆ?" ಎಂದನು. ಅದಕ್ಕಾ ಯುಧಿಷ್ಠಿರನು, "ಅಂತಹ ವೀರ್ಯವಂತನಾದವನು ಸಾರಥಿಯಾಗಿ ರಥದಲ್ಲಿ ಕುಳಿತು, ನಿನ್ನ ಮಗನು ಆ ದುಷ್ಕರಕಾರ್ಯವನ್ನು ತಾನೇ ಮಾಡಿದನೆಂದರೆ ಅದು ಆಶ್ಚರ್ಯವಲ್ಲದೆ ಮತ್ತೇನು?" ಎಂದನು. ಆಗ ವಿರಾಟನು "ಓ ಬ್ರಾಹ್ಮಣಾಧಮಾ! ನನ್ನ ಮಗನನ್ನು ಆ ಷಂಡನೊಡನೆ ಸಾಟಿಮಾಡಿ ಮಾತಾಡುತ್ತಿರುವೆ? ನನ್ನ ಮುಂದೆ ಇದನ್ನಾಡಬಹುದು, ಇದನ್ನಾಡಬಾರದು ಎಂಬೀ ವಿವೇಕವನ್ನೇ ತಿಳಿಯದೆ, ನೀನು ನನ್ನನ್ನು ಹೀಗೆ ಅವಮಾನಗೊಳಿಸುತ್ತಿರುವೆಯಾ! ನಾನು ಎಷ್ಟೋ ಪುರುಷರನ್ನು ನೋಡಿರುವೆನು. ಎಷ್ಟೋ ಮಂದಿ ಸಾರಥಿಗಳನ್ನೂ ನೋಡಿರುವೆನು. ಸಾರಥಿಯಾಗಿದ್ದವನು ಹಾಗೆ ಪರಾಕ್ರಮವನ್ನು ತೋರಿಸಿ ಯುದ್ಧಮಾಡಿದುದನ್ನು ನಾನು ಇದುವರೆಗೆ ನೋಡಿದುದಿಲ್ಲ. ಓ ಬ್ರಾಹ್ಮಣಾ! ಅರಸರಿಗೆ ಅಪ್ರಿಯವಾದ ಕಾರ್ಯವನ್ನು ಎಂದಿಗೂ ಮಾಡಬಾರದು. ರಾಜರಿಗೆ ಪ್ರಿಯವಾಗಿಯೂ, ಅನುಕೂಲವಾಗಿಯೂ ಇರುವ ಮಾತನ್ನೇ ಯಾವಾಗಲೂ ನುಡಿಯುತ್ತಿರಬೇಕು. ರಾಜರಿಗೆ ಅಪ್ರಿಯವನ್ನುಂಟುಮಾಡಿದವನು ಎಂದಿಗೂ ಸುಖವಾಗಿ ಬಾಳುವುದಿಲ್ಲ. ನೀನು ನನಗೆ ಸ್ನೇಹಿತನಾದುದರಿಂದ, ಈಗಮಾತ್ರ ನಾನೇನೋ ನಿನ್ನ ಅಪರಾಧವನ್ನು ಮನ್ನಿಸಿರುವೆನು. ನಿನಗೆ ಬದುಕಬೇಕೆಂಬ ಆಸೆಯಿದ್ದರೆ, ಇನ್ನುಮೇಲೆ ಇಂತಹ ಮಾತನ್ನಾಡಬೇಡ" ಎಂದನು.

ಈ ವೃತ್ತಾಂತವನ್ನು ಕೇಳಿ ಕಂಕನು ಗಟ್ಟಿಯಾಗಿ ನಕ್ಕು, ತಿರುಗಿ ವಿರಾಟ ನೊಡನೆ “ಓ ರಾಜೇಂದ್ರಾ! ಅಲ್ಲಿ ಉತ್ತರನೇ ಸಾರಥ್ಯವನ್ನು ಮಾಡಿರುವ ನೆಂಬುದರಲ್ಲಿ ಸಂದೇಹವಿಲ್ಲ! ಬೃಹನ್ನಳೆಯು ಜಯಿಸಿದಳೆಂದೇ ನೀನು ನಗ ರದಲ್ಲಿ ಜಯವನ್ನು ಸಾರಿಸು! ಈ ವಿಚಾರದಲ್ಲಿ ನನಗೊಂದು ನಿಮಿತ್ತವೂ ಕಂಡುಬಂದಿದೆ. ನನ್ನ ಊಹೆಯು ದೃಢವಾದುದೇ! ನನ್ನ ಮನಸ್ಸಿಗೆ ಈಗ ಏನು ತೋರಿದೆಯೋ ಅದು ಬೇರೆ ವಿಧವಾಗಿ ಆಗಿರಲಾರದು. ಆ ಕೌರ ವರೇನೂ ಸಾಮಾನ್ಯರಲ್ಲ. ಅಗ್ನಿ, ಸೋಮ, ವರುಣ, ಸೂರ್ಯ, ಕುಬೇರ ನೇ ಮೊದಲಾದ ದೇವತೆಗಳಿಂದಲೂ ಅವರನ್ನು ಜಯಿಸುವುದಕ್ಕಾಗದೆಂದು ತಿಳಿ. ಅಲ್ಲಿರುವವರೇನು ಸಾಮಾನ್ಯರೆ? ಶಂತನುಪುತ್ರನಾದ ಭೀಷ್ಮನು! ಎಂತವರಿಗೂ ದುರ್ಜಯರಾದ ದ್ರೋಣಕರ್ಣರು! ಅಶ್ವತ್ಥಾಮನು! ಈ ಮೊದಲಾದ ಮಹಾತ್ಮರೆಲ್ಲರೂ ಅಲ್ಲಿರುವರು. ವಿಕರ್ಣ, ಸೋಮದತ್ತ, ಜಯದ್ರಥ, ಭೂರಿಶ್ರವಸ್ಸು, ಶಲ, ಭೂರಿ, ಜಲಸಂಧಿ ಮೊದಲಾದ ಅನೇಕ ಶೂರರಿರುವರು. ದುರ್ಯೋಧನನೂ, ದುಷ್ಪ್ರಹಸನೂ, ದುಶ್ಶಾಸನನೂ, ವಿವಿಂಶತಿಯೂ ಆ ಕಡೆಯಲ್ಲಿರುವರು. ವೃಷಸೇನ, ಅಶ್ವವೇಗ, ವಾಯು ವೇಗ, ಸುವರ್ಚಸ್ಸು, ಬಾಹ್ಲೀಕ, ಶೂರಸೇನ, ಯುಯುತ್ಸು, ಶಕುನಿ, ಸಾಲ್ವರಾಜನಾದ ದ್ಯುಮತ್ಸೇನ, ಮೊದಲಾಗಿ ಇನ್ನೂ ನಾನಾದೇಶದ ಅರ ಸರೂ, ಬಹಳ ಮಂದಿ ಶೂರರೂ ಅಲ್ಲಿರುವರು. ಆಚಾರ್ಯರಲ್ಲಿ ಮುಖ್ಯನಾ ದ ಕೃಪನೊಡನೆ ಧನುರ್ಬಾಣಗಳನ್ನೂ, ಕತ್ತಿಗಳನ್ನೂ ಸಿದ್ಧವಾಗಿ ಹಿಡಿದು ಅನೇಕರಥಗಳಿಗೆ ಅಧಿಪತಿಗಳಾದ ರಥಿಕರಿರುವರು. ಮಹಾವೀರ್ಯವುಳ್ಳ ಎಷ್ಟೋ ಮಂದಿ ರಾಜಪುತ್ರರೂ, ಮಹಾರಥರೂ ಆ ಕಡೆಯಲ್ಲಿರುವರು. ಸಾಕ್ಷಾದ್ದೇವೇಂದ್ರನೇ ದೇವಗಣಗಳೊಡನೆ ಬಂದರೂ ಭೀಷ್ಮದ್ರೋಣರಿಂದ ರಕ್ಷಿತವಾದ ಆ ಕೌರವರನ್ನು ಜಯಿಸಲಾರನು. ಆ ಬೃಹನ್ನಳೆಯನ್ನು ಬಿಟ್ಟರೆ, ಬೇರೆ ಯಾವನು ತಾನೇ ಆ ಸೈನ್ಯಕ್ಕಿದಿರಾಗಿ ನಿಂತು ಯುದ್ಧಮಾಡ ಬಲ್ಲನು? ಬಾಹುಬಲದಲ್ಲಿ ಅವನಿಗೆ ಸಮಾನನಾದ ಮನುಷ್ಯನು ಬೇರೊಬ್ಬ ನಿಲ್ಲ. ಯುದ್ಧವನ್ನು ಕಂಡರೆ ಅವನಿಗೆ ಮೇಲೆಮೇಲೆ ಉತ್ಸಾಹವೂ, ಸಂತೋ ಷವೂ ಹೆಚ್ಚುತ್ತಿರುವುದು. ಅಂತಹ ವೀರಪುರುಷನು ಈ ಭೂಮಿಯಲ್ಲಿ ಯಾಗಲಿ, ಸ್ವರ್ಗಲೋಕದಲ್ಲಿಯಾಗಲಿ ಇರುವನೆಂದು ತಿಳಿದಿರುವೆಯಾ?”

ದಿಂದ ಗ್ರಹಿಸುವೆಯಲ್ಲ? ಕಾರಣವೇನು? ನಿಜವನ್ನು ತಿಳಿಸು" ಎಂದನು. ಅದಕ್ಕಾ ಸೈರಂಧ್ರಿಯು "ಓ ರಾಜಾ! ಈ ಕಂಕನ ದೇಹದಿಂದ ಎಷ್ಟು ರಕ್ತಬಿಂದುಗಳು ನೆಲಕ್ಕೆ ಬಿಳುವುವೋ, ಅಷ್ಟು ವರ್ಷಗಳವರೆಗೆ ನಿನ್ನ ದೇಶದಲ್ಲಿ ಅನಾವೃಷ್ಟಿಯುಂಟಾಗುವುದು. ನಿನಗೆ ಆ ಅನರ್ಥವಾಗಬಾರದೆಂದೇ ನಾನು ಇವನ ರಕ್ತವನ್ನು ನನ್ನ ಸೆರಗಿನಿಂದ ಗ್ರಹಿಸಿಕೊಂಡೆನು. ನಿನ್ನ ನಾಶವನ್ನು ತಪ್ಪಿಸುವುದೇ ನನ್ನ ಉದ್ದೇಶವು. ಈ ಯತಿಶ್ರೇಷ್ಠನನ್ನು ಯಾವನು ದುಃಖಪಡಿಸುವನೋ, ಅವನ ಆಯುಸ್ಸು ಕ್ಷೀಣಿಸುವುದು. ಇವನನ್ನು ಪೀಡಿಸಿದವನಿಗೆ ನರಕದಲ್ಲಿ ಸಾವಿರಾರು ಯಾತನೆಗಳುಂಟು. ಈ ಯತಿಯ ದೇಹದಿಂದ ಹೊರಟ ರಕ್ತವು ನೆಲಕ್ಕೆ ಬಿದ್ದು ಎಷ್ಟು ರಜಃಕಣಗಳನ್ನು ನೆನೆಸುವುದೋ, ಅವಕ್ಕೆ ಕಾರಣಭೂತನಾದವನ ಅಷ್ಟು ಮಂದಿ ಪಿತೃಗಳೂ ಪಿತೃಲೋಕದಿಂದ ಅಧೋಗತಿಗೆ ಬೀಳುವರು. ಇವೆಲ್ಲವನ್ನೂ ತಿಳಿದೇ ನಾನು ಈ ಸನ್ಯಾಸಿಯ ರಕ್ತವನ್ನು ಬಟ್ಟೆಯಿಂದ ಗ್ರಹಿಸಿದೆನು. ನಿನ್ನಲ್ಲಿ ನನಗಿರುವ ಅಭಿಮಾನದಿಂದ, ನಿನ್ನ ಹಿತಕ್ಕಾಗಿಯೇ ಈ ಕೆಲಸವನ್ನು ಮಾಡಿದೆನು" ಎಂದಳು.

ಇದು ಎಪ್ಪತ್ತನೆಯ ಅಧ್ಯಾಯವು.



ಯುದ್ಧವನ್ನು ನೋಡಬೇಕೆಂದು ಬಂದಿದ್ದ ದೇವತೆಗಳೆಲ್ಲರೂ ಅರ್ಜುನನನ್ನು ಸ್ತೋತ್ರಮಾಡುತ್ತಾ ಸ್ವರ್ಗಕ್ಕೆ ಹಿಂತಿರುಗಿದುದು. ಉತ್ತರನು ಮಹೋತ್ಸವದೊಡನೆ ಪುರಪ್ರವೇಶಮಾಡಿದುದು.

ಈ ನಡುವೆ ಜನಮೇಜಯರಾಜನು ವೈಶಂಪಾಯನನನ್ನು ಕುರಿತು, "ಓ ಮಹರ್ಷೀ! ಮನುಷ್ಯಲೋಕದಲ್ಲಿ ನಡೆಯುವ ಈ ಯುದ್ಧವನ್ನು ನೋಡುವುದಕ್ಕಾಗಿ ಬಂದಿದ್ದ ದೇವತೆಗಳೆಲ್ಲ, ಆಮೇಲೆ ಏನುಮಾಡಿದರೆಂಬುದನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ವೈಶಂಪಾಯನನು, "ಓ ಜನಮೇಜಯರಾಜಾ! ಕೇಳು! ಇಂದ್ರಾದಿದೇವತೆಗಳೂ, ದೇವಋಷಿಗಳೂ, ಯಕ್ಷಗಂಧರ್ವರೂ, ಅಪ್ಸರೋಗಣಗಳೂ, ಅತ್ತಲಾಗಿ ಏಕಾ

ಕಿಯಾದ ಅರ್ಜುನನಿಗೂ, ಇತ್ತಲಾಗಿ ಬಹುಮಂದಿ ಕುರುಗಳಿಗೂ ನಡೆದ ಭಯಂಕರವಾದ ಯುದ್ಧವನ್ನೂ, ಅವರು ದಿವ್ಯಾಸ್ತ್ರಗಳನ್ನು ಪ್ರಯೋಗಿಸುವ ಮತ್ತು ಉಪಸಂಹಾರಮಾಡುವ ರೀತಿಗಳನ್ನೂ, ಅವರು ಆ ಯುದ್ಧದಲ್ಲಿ ಬಹಳ ವೇಗವಾಗಿಯೂ, ವಿಚಿತ್ರವಾಗಿಯೂ ಕೆಲಸಮಾಡುವ ರೀತಿಯನ್ನೂ ನೋಡಿ ಆಶ್ಚರ್ಯಭರಿತರಾದರು. ಆ ಅರ್ಜುನನೊಬ್ಬನೇ ಭೀಷ್ಮ, ದ್ರೋಣ, ಕೃಪ, ಕರ್ಣನೇ ಮೊದಲಾದ ಅನೇಕರಾಜರನ್ನು ಜಯಿಸಿದ ಅದ್ಭುತಪರಾಕ್ರಮವನ್ನು ನೋಡಿ, ಸಂತೋಷದಿಂದ ದೇವತೆಗಳು ಅರ್ಜುನನನ್ನು ಸ್ತೋತ್ರಮಾಡುತ್ತ, ವೇಗವತ್ತಾಗಿಯೂ, ಎಲ್ಲಿಯೂ ತಡೆಯಿಲ್ಲದುದಾಗಿಯೂ ಇರುವ ತಮ್ಮತಮ್ಮ ವಿಮಾನಗಳನ್ನೇರಿ ಸ್ವರ್ಗಕ್ಕೆ ಹಿಂತಿರುಗಿ ಹೋಗುತ್ತಿರುವಾಗ ದಾರಿಯಲ್ಲಿ “ಆಹಾ! ಭೀಷ್ಮ ದ್ರೋಣ ಕೃಪರು ಮೊದಲಾದ ಕೌರವವೀರರೋ ಇಂದ್ರಾದಿ ದೇವತೆಗಳಿಂದಲೂ ಜಯಿಸಲಸಾಧ್ಯರು. ಅಂಥವರು ಈ ಯುದ್ಧದಲ್ಲಿ ಒಬ್ಬನಾದ ಅರ್ಜುನನಿಂದಲೇ ಜಯಿಸಲ್ಪಟ್ಟರು. ಇದು ಆಶ್ಚರ್ಯಕರವಾಗಿದೆ. ಆಹಾ! ಆ ಅರ್ಜುನನೆಂಬ ಮಹಾತ್ಮನು ಯಾವ ಮುಹೂರ್ತದಲ್ಲಿ ಹುಟ್ಟಿದನೋ, ಅದು ಯಾವ ಧರ್ಮದ ಫಲವೋ ತಿಳಿಯಲಿಲ್ಲ. ಸಾಕ್ಷಾದ್ರುದ್ರನೊಡನೆ ಯುದ್ಧಮಾಡಿ, ಮೂವತ್ತು ಕೋಟಿ ಮಂದಿ ನಿವಾತಕವಚರನ್ನು ಯುದ್ಧದಲ್ಲಿ ಜಯಿಸಿದ ಆ ಫಲ್ಗುನನಿಗೆ ಇದೊಂದಾಶ್ಚರ್ಯವಲ್ಲ” ಎಂದು ಪ್ರಶಂಸಿಸುತ್ತಾ ಆಶ್ಚರ್ಯಭರಿತರಾಗಿ ಸ್ವರ್ಗವನ್ನು ಸೇರಿದರು. ಇತ್ತಲಾಗಿ ಯುದ್ಧದಲ್ಲಿ ಅರ್ಜುನನ ಬಾಣದಿಂದ ಗಾಯಪಟ್ಟ ಕುರುಗಳೂ ತಮ್ಮತಮ್ಮ ಸೈನ್ಯವಾಹನಗಳೊಡನೆ ತಮ್ಮ ದೇಶಗಳನ್ನು ಸೇರಿದರು. ಇಷ್ಟರಲ್ಲಿಯೇ ವಿರಾಟನಿಂದ ಉತ್ತರನನ್ನು ಇದಿರುಗೊಳ್ಳುವುದಕ್ಕಾಗಿ ಕಳುಹಿಸಲ್ಪಟ್ಟ ಸೈನ್ಯವೆಲ್ಲ, ನಗರದಿಂದ ಹೊರಟು ಬೇಗಬೇಗನೆ ಬರುತಿದ್ದಿತು. ಅಪರಿಮಿತವಾದ ಆನೆಗಳೂ, ಕುದುರೆಗಳೂ, ರಥಗಳೂ, ಬಲಾಢ್ಯರಾದ ಉತ್ತಮ ಕ್ಷತ್ರಿಯವಂಶದ ಯುದ್ಧವೀರರಿಂದ ನಡೆಸಲ್ಪಡುತ್ತ, ಸಾರಥಿಯಾದ ಬೃಹನ್ನಳೆಯೊಡನೆ ಬರುತಿದ್ದ ಉತ್ತರನನ್ನು ಸಂಧಿಸುವುದಕ್ಕಾಗಿ ಬಹಳ ಅಟ್ಟಹಾಸದೊಡನೆ ಇದಿರುಗೊಂಡು ಬರುತಿದ್ದುವು. ಅನೇಕ ವಾದ್ಯಧ್ವನಿಗಳಿಂದಲೂ, ಆನೆ ಕುದುರೆಗಳ ಮತ್ತು ರಥಗಳ ಸಮೂಹದಿಂದ

"ಉತ್ತರ ಕುಮಾರಾ ! ನೀನು ನಮ್ಮಲ್ಲಿ ಪ್ರೇಮವುಳ್ಳವನು. ಪುರುಷರಲ್ಲಿ ಹುಲಿಯಂತೆ ಮೇಲೆನಿಸಿದವನು. ಸದಾ ಸಂತೋಷಚಿತ್ತನು. ದೈವವಶದಿಂದ ನೀನು ಜಯಶೀಲನಾದೆ. ನಿನಗೆ ಮಂಗಳವಾಗಲಿ ! ಅದೃಷ್ಟದಿಂದ ಬೃಹನ್ನಳೆಯು ನಿನಗೆ ಸಾರಥ್ಯಕ್ಕೆ ಸಿಕ್ಕಿದಳು. ಅಂತಹ ಯುದ್ಧರಂಗಕ್ಕೆ ಹೋಗಿ ನೀನು ಸ್ವಲ್ಪವೂ ಭಯಪಡದಿದ್ದುದೂ ಭಾಗ್ಯವೇ" ಎಂದರು. ಅದಕ್ಕೆ ಉತ್ತರನು "ಓ ಪ್ರಿಯಜನರೇ ! ಈ ಜಿಷ್ಣುವೇ (ಜಯಶೀಲನೇ) ಈ ಜಯಕ್ಕೆ ಮುಖ್ಯ ಕಾರಣಭೂತನು. ಇವನೇ ಏಕರಥನಾಗಿ ಆ ಕುರುಗಳೆಲ್ಲರನ್ನೂ ಯುದ್ಧದಲ್ಲಿ ಜಯಿಸಿದನು. ಇವನ ಬಾಹುವೀರ್ಯದಿಂದಲೇ ನಾನು ಗೋವುಗಳನ್ನು ಜಯಿಸಿ ತರುವಂತಾಯಿತು. ಅಮಿತ ಪರಾಕ್ರಮವುಳ್ಳ ಕುರುಗಳೂ, ಇವನ ಬಲದಿಂದಲೇ ಪರಾಜಿತರಾದರು. ದೇವಕುಮಾರನಿಗೆ ಸಾಟಿಯಾದ ಈ ತರುಣನೇ ಮಹಾಕಾರ್ಯವನ್ನು ನಡೆಸಿದವನು. ಈ ಪುರುಷವ್ಯಾಘ್ರನೇ ಕೌರವಸೇನೆಯನ್ನು ಕಲಗಿಸಿ, ನನ್ನನ್ನೂ ಕಾಪಾಡಿದವನು" ಎಂದನು. ಹೀಗೆ ಉತ್ತರನು ಅರ್ಜುನನನ್ನು ಪ್ರಶಂಸೆಮಾಡಿದುದನ್ನು ಕೇಳಿ, ಆ ಜನರೆಲ್ಲರೂ ರಾಜಪುತ್ರನಾದ ಆ ಉತ್ತರನ ಪ್ರೇರಣೆಯಿಂದ, ಬೃಹನ್ನಳೆಗೆ ಜಯಘೋಷದೊಡನೆ ಶುಭಾಶಂಸನವನ್ನು ಮಾಡಿದರು. ಕನ್ಯೆಯರು ಗಂಧ, ಪುಷ್ಪ, ಧೂಪಾದ್ಯುಪಚಾರಗಳಿಂದಲೂ, ಸುವರ್ಣಗಳಿಂದಲೂ ಅಲಂಕರಿಸಿದರು. ಆಗ ಅರ್ಜುನನು, ಗಂಧಾನುಲೇಪನಗಳ ಮತ್ತು ವಿವಿಧ ಪುಷ್ಪಮಾಲಿಕೆಗಳ ಭಾರದಿಂದ ಬಳಕುತ್ತ, ಎಲ್ಲರಿಂದಲೂ ಪೂಜಿಸಲ್ಪಟ್ಟು, ಪುರದ್ವಾರಕ್ಕೆ ಬಂದನು. ಎಲ್ಲೆಲ್ಲಿಯೂ ಭೇರಿಗಳೂ, ತೂರ್ಯಗಳೂ, ವೇಣುವಾದ್ಯಗಳೂ ಮೊಳಗುತ್ತಿದ್ದುವು. ಪುರಸ್ತ್ರೀಯರು ವಿಚಿತ್ರವೇಷಗಳಿಂದ ಅಲಂಕೃತರಾಗಿ ಬಂದರು. ಇವರೆಲ್ಲರೂ ಪಟ್ಟಣದಿಂದ ಬಂದು, ಭೂಮಿಂಜಯನನ್ನು (ಉತ್ತರನನ್ನು) ಇದಿರುಗೊಂಡು ಶ್ಲಾಘಿಸಿದರು. ಆ ಜನರೆಲ್ಲರೂ ತನ್ನ ಜಯವನ್ನು ಕೊಂಡಾಡುತ್ತಿರುವುದನ್ನು ಕೇಳಿದಷ್ಟೂ, ಉತ್ತರನಿಗೆ ಮನಸ್ಸಿನಲ್ಲಿ ಜಿಹಾಸೆಯೂ, ಲಜ್ಜೆಯೂ ಹೆಚ್ಚುತ್ತಿತ್ತು. ಆಗಾಗ ಅವನು ಅರ್ಜುನನ ಮುಖವನ್ನು ನೋಡುತಿದ್ದನು. ಆಮೇಲೆ ಅರ್ಜುನನು ವಿರಾಟಪುತ್ರಿಯಾದ ಉತ್ತರೆಗೂ, ಅವಳ ಸಖಿಯರಿಗೂ ಯುದ್ಧದಿಂದ ತಂದ ಕೆಲವು

ಉತ್ತರನೊಬ್ಬನೇ ಇಲ್ಲಿಗೆ ಬರಲಿ! ಬೃಹನ್ನಳೆಯನ್ನು ಈಗ ಒಳಕ್ಕೆ ಬಿಡಬಾರದು. ಏಕೆಂದರೆ, ಆ ಬೃಹನ್ನಳೆಗೆ ಒಂದು ವ್ರತವುಂಟು. ಯುದ್ಧಕಾಲದಲ್ಲಿಹೊರತು, ಬೇರೆಕಾಲದಲ್ಲಿ ಯಾವನು ನನ್ನ ಮೈಯಲ್ಲಿ ಗಾಯವನ್ನುಂಟುಮಾಡುವನೋ, ಅಥವಾ ರಕ್ತವನ್ನು ಕಾಣಿಸುವನೋ ಅವನು ಹೇಗೂ ಜೀವಿಸಿರಬಾರದೆಂದೇ ಮಹಾತ್ಮಳಾದ ಆ ಬೃಹನ್ನಳೆಯ ವ್ರತವು. ಹೀಗಿರುವುದರಿಂದ, ನನ್ನ ಮುಖದಲ್ಲಿ ರಕ್ತಮಿಶ್ರವಾದ ಘಾಯವು ಅವಳ ಕಣ್ಣಿಗೆ ಬಿದ್ದರೆ, ಈ ವಿರಾಟನನ್ನು ಅವನ ಮಂತ್ರಿಗಳೊಡನೆಯೂ, ಸೈನ್ಯವಾಹನಗಳೊಡನೆಯೂ ಅವಳು ತೀರಿಸಿಬಿಡುವುದೇ ನಿಶ್ಚಯವು. ನನ್ನ ಮೈಯಿಂದ ರಕ್ತವನ್ನು ಹೊರಡಿಸಿದವನು ಇಂದ್ರನಾಗಿರಲಿ, ಕುಬೇರನಾಗಿರಲಿ, ಯಮನಾಗಿರಲಿ, ವರುಣನಾಗಿರಲಿ, ಅವರನ್ನು ಅವಳು ತಿಕ್ಕಿಕೆಡಹದೆ ಬಿಡುವುದಿಲ್ಲ. ಹೀಗಿರುವಾಗ ಕೇವಲ ಮನುಷ್ಯಮಾತ್ರನಾದ ಈ ರಾಜನ ಪಾಡೇನು? ಆದುದರಿಂದ ಸಾರಥಿಯು ಸ್ವಲ್ಪ ಹೊತ್ತಿನವರೆಗೆ ಬಾಗಿಲಲ್ಲಿಯೇ ಇರಲಿ" ಎಂದನು. ದಯಾಸ್ವಭಾವವುಳ್ಳ ಧರ್ಮರಾಜನು ಈ ಮಾತನ್ನು ಗುಟ್ಟಾಗಿ ಹೇಳಿ, ವಿರಾಟನೊಡನೆ ಸಭೆಯಲ್ಲಿ ಸುಮ್ಮನೆ ಕುಳಿತಿದ್ದನು. ಇಷ್ಟರಲ್ಲಿ ರಾಜಕುಮಾರನಾದ ಉತ್ತರನು ಒಳಗೆ ಕರೆತರಲ್ಪಟ್ಟನು. ಆತನು ಮೊದಲು ತಂದೆಯ ಪಾದಗಳೆರಡನ್ನೂ ಹಿಡಿದು ನಮಸ್ಕರಿಸಿ, ಆಮೇಲೆ ಕಂಕನನ್ನು ಗೌರವಿಸಿದನು. ಇಷ್ಟರಲ್ಲಿಯೇ ಉತ್ತರನ ಓರೆನೋಟವು ಯುಧಿಷ್ಠಿರನ ಹಣೆಯಮೇಲೆ ಬಿದ್ದಿತು. ಅಲ್ಲಿ ರಕ್ತವು ಹರಿಯುವುದನ್ನು ಕಂಡು ಅವನ ಹೃದಯವು ನಡುಗಿತು. ಮೃತ್ಯುಗ್ರಸ್ತನಂತೆ ಮನಸ್ಸಿನಲ್ಲಿ ತಪಿಸುತ್ತ, ಧರ್ಮರಾಜನನ್ನು ನಟ್ಟಕಣ್ಣಿಂದ ನೋಡಿದನು. ಆ ಧರ್ಮರಾಜನ ಮೈಯಲ್ಲಿ ಅಲ್ಲಲ್ಲಿ ರಕ್ತದ ಗುರುತುಗಳು ಕಾಣಿಸಿದುವು. ಅವನ ಮನಸ್ಸು ಹೇಗೋ ವ್ಯಾಕುಲವಾಗಿರುವಂತೆ ತೋರಿತು. ಸೈರಂಧ್ರಿಯು ಅವನ ಪಕ್ಕದಲ್ಲಿ ನಿಂತು ಉಪಚರಿಸುತ್ತಿದ್ದಳು. ನಿರಪರಾಧಿಯಾದ ಆತನು ಹೀಗೆ ವ್ಯಾಕುಲನಾಗಿ ನೆಲದಮೇಲೆ ಕುಳಿತಿರುವುದನ್ನು ನೋಡಿ, ಉತ್ತರನು ಆತುರದಿಂದ ತನ್ನ ತಂದೆಯನ್ನು ಕುರಿತು, "ಓ ಜನಕಾ! ಕಂಕನನ್ನು ಹೀಗೆ ಹೊಡೆದವರಾರು? ಇಂತಹ ಪಾಪಕಾರ್ಯಕ್ಕೆ ಕೈಯಿಕ್ಕಿದವನಾವನು? ಮೃತ್ಯುವಿಗೆ ಆಸೆಪಟ್ಟು ಕೃಷ್ಣಸರ್ಪ

ವನ್ನು ಕಾಲಿಂದ ಮೆಟ್ಟಿದವನಾವನು ? ಅಪ್ಪಾ ! ಇವನಾದರೋ ಶ್ರೋತ್ರಿಯನು. ಬ್ರಾಹ್ಮಣಶ್ರೇಷ್ಠನು. ಇಂದ್ರನ ಅರ್ಧಾಸನವನ್ನು ಏರುವುದಕ್ಕೆ ಯೋಗ್ಯನು. ಪರಮ ಪೂಜ್ಯನು. ನಮಸ್ಕಾರಯೋಗ್ಯನು. ಇಂತವನನ್ನು ಹೀಗೆ ನೋಯಿಸುವುದೆಂದರೇನು" ಎಂದನು. ಓ ಜನಮೇಜಯ ರಾಜಾ ! ಮಗನು ಹೇಳಿದ ಮಾತನ್ನು ಕೇಳಿ ವಿರಾಟನು ಒಳಗೊಳಗೆ ಭಯದಿಂದ ಕದಲಿದ ಮನಸುಳ್ಳವನಾಗಿ, ಹೀಗೆಂದು ಹೇಳುವನು. "ಕುಮಾರಾ ! ನಿನ್ನ ವಿಜಯವಾರ್ತೆಯನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಆ ಸಂತೋಷದಿಂದ ಪಗಡೆಯಾಟಕ್ಕಾಗಿ ಇವನನ್ನು ಕರೆದು ಕುಳ್ಳಿರಿಸಿ ಕೊಂಡು, ಅವನೊಡನೆ ಆಟವಾಡುತ್ತ ವಿನೋದವಾಗಿ ಕಾಲವನ್ನು ಕಳೆಯುತ್ತಿದ್ದೆನು. ಈ ನಡುವೆ ಕುರುಗಳೆಲ್ಲರನ್ನೂ ನನ್ನ ಮಗನಾದ ಉತ್ತರನು ಜಯಿಸಿದನೆಂದು ನಾನು ಹೇಳಿದೆನು. ಅದಕ್ಕೆ ಕಂಕನು, "ಹಾಗಲ್ಲ ಬೃಹನ್ನಳೆಯೇ ಕುರುಗಳನ್ನು ಜಯಿಸಿದ"ಳೆಂದು ಬಾರಿಬಾರಿಗೂ ಹಟ ಹಿಡಿದು ಹೇಳುತ್ತಿದ್ದನು. ನಾನು ನಿನ್ನ ವಿಜಯದ ವಿಷಯವಾಗಿ ಮಾತೆತ್ತಿದಾಗಲೆಲ್ಲ, ಇವನು ಬೃಹನ್ನಳೆಯನ್ನೇ ಸ್ತೋತ್ರಮಾಡುತ್ತ, ಅವಳ ವಿಜಯವನ್ನೇ ಕೊಂಡುತ್ತಿದ್ದನು ಕುಮಾರಾ ! ನಾನು ನಿನ್ನನ್ನು ಸ್ತೋತ್ರಮಾಡುವಾಗ, ಆ ಷಂಡನನ್ನು ಇವನು ಹೊಗಳುವುದನ್ನು ಕೇಳಿ ನನಗೆ ಕೋಪವುಂಟಾಯಿತು. ವತ್ಸಾ ! ದುರ್ಬುದ್ಧಿಯಿಂದ ಯಾವಾಗಲೂ ಬೇರೆ ಪಕ್ಷವನ್ನೇ ಹಿಡಿದು ವಾದಿಸುತ್ತಿದ್ದ ಈ ಸನ್ಯಾಸಿಯನ್ನು ನಾನೇ ಹೊಡೆದೆನು" ಎಂದನು. ಈ ಮಾತನ್ನು ಕೇಳಿದೊಡನೆಯೇ ಉತ್ತರನಿಗೆ ಮಹಾಕೋಪವುಂಟಾಯಿತು. ಆಗ ಅವನು ತಂದೆಯನ್ನು ಕುರಿತು "ರಾಜಾ ! ನೀನು ಮಾಡಬಾರದ ಕಾರ್ಯವನ್ನು ಮಾಡಿದೆ. ಈಗಲೇ ಅವನಲ್ಲಿ ಮನ್ನಣೆಯನ್ನು ಬೇಡು. ಬ್ರಾಹ್ಮಣಕೋಪವೆಂಬ ಭಯಂಕರವಾದ ವಿಷವು ನಿನ್ನನ್ನು ನಿರ್ಮೂಲವಾಗಿ ನಾಶಮಾಡದಂತೆ ನೋಡು. ಸಮೃದ್ಧವಾದ ಮತ್ತು ಪುರಾತನವಾದ ಈ ಮತ್ಸ್ಯಕುಲವು ನಿಶ್ಶೇಷವಾಗಿ ನಾಶವಾಗುವುದಕ್ಕೆ ಮೊದಲೇ, ಇವನನ್ನು ಪ್ರಸನ್ನನನ್ನಾಗಿ ಮಾಡು. ಇವನಿಗೆ ದಂಡಪ್ರಣಾಮವನ್ನು ಮಾಡಿ, ಕೈಗಳಿಂದ ಅವನ ಪಾದಗಳೆರನ್ನೂ ಹಿಡಿದು, ಅವನ ಕ್ಷಮೆಯನ್ನು ಪ್ರಾರ್ಥಿಸು. ಜನಕಾ ! ಈ ಕಂಕ

ಸನ್ಯಾಸಿಯು ತನ್ನ ಬಲಗೈಯಿಂದ ನಿನ್ನ ಕೈಯನ್ನು ತಟ್ಟಿ, 'ನಾನು ಕ್ಷಮಿಸಿದೆ'ನೆಂದು (ಕೈಮುಟ್ಟಿ) ಪ್ರತಿಜ್ಞೆಮಾಡುವವರೆಗೆ ನೀನು ಅವನ ಕಾಲುಗಳನ್ನು ಬಿಡದೆ ಪ್ರಾರ್ಥಿಸಿ, ಅವನ ಕ್ಷಮೆಯನ್ನು ಬೇಡಬೇಕು" ಎಂದನು.

ಉತ್ತರನ ಮಾತನ್ನು ಕೇಳಿ ವಿರಾಟನು, ಭಯದಿಂದ ಧರ್ಮರಾಜನ ಕಾಲುಗಳನ್ನು ಹಿಡಿದು ಕ್ಷಮೆಯನ್ನು ಬೇಡಿದನು. ಆಗ ಧರ್ಮರಾಜನು ವಿರಾಟನನನ್ನು ಕುರಿತು, "ರಾಜಾ! ನಾನು ಕ್ಷಮಿಸಿದೆನು. ಎಂದೆಂದಿಗೂ ಕ್ಷಮಿಸಿರುವೆನು. ನನಗೆ ಸ್ವಲ್ಪಮಾತ್ರವೂ ಕೋಪವಿಲ್ಲ. ಆದರೆ, ನನ್ನ ಗಾಯದ ರಕ್ತದಲ್ಲಿ ಒಂದು ಬಿಂದುವಾದರೂ ಭೂಮಿಯಲ್ಲಿ ಬಿದ್ದಿದ್ದರೆ, ನಿನ್ನ ರಾಜ್ಯದೊಡನೆ ನೀನು ಆಕ್ಷಣವೇ ನಾಶಹೊಂದುತ್ತಿದ್ದೆ. ರಾಜೇಂದ್ರ! ಯಾರಿಗೂ ಕೆಡುಕನ್ನು ಮಾಡದ ನನ್ನ ವಿಷಯದಲ್ಲಿ ಬೇರೊಬ್ಬರು ಅಪರಾಧವನ್ನು ಮಾಡಿದರೂ, ನಾನಾಗಿ ಅವರನ್ನು ಕೆಡಿಸುವುದಿಲ್ಲ. ಆ ಪಾಪಕ್ಕೆ ತಕ್ಕ ಫಲವನ್ನು ಅವನು ತಾನಾಗಿಯೇ ಬಹುಶೀಘ್ರದಲ್ಲಿ ಅನುಭವಿಸುವನು" ಎಂದನು. ಇಷ್ಟರಲ್ಲಿ ಧರ್ಮರಾಜನ ಗಾಯದ ರಕ್ತವೆಲ್ಲವೂ ಸಂಪೂರ್ಣವಾಗಿ ಆರಿಹೋಯಿತು. ಆಮೇಲೆ ಬೃಹನ್ನಳೆಯು ಒಳಗೆ ಬಂದು, ಮೊದಲು ವಿರಾಟನಿಗೆ, ಆಮೇಲೆ ಕಂಕನಿಗೆ ನಮಸ್ಕರಿಸಿ, ಪಕ್ಕದಲ್ಲಿ ನಿಂತಳು. ವಿರಾಟನು ಧರ್ಮರಾಜನ ಕ್ಷಮೆಯನ್ನು ಬೇಡಿ, ಆತನನ್ನು ಪ್ರಸನ್ನನನ್ನಾಗಿಮಾಡಿದಮೇಲೆ, ಯುದ್ಧಶ್ರಮಪಟ್ಟು ಬಂದ ಉತ್ತರನನ್ನು ಪ್ರೀತಿಯಿಂದ ಆಲಿಂಗಿಸಿಕೊಂಡು, ಬೃಹನ್ನಳೆಯೊಡನೆ ಆತನನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ, ಅಲ್ಲಿ ಅರ್ಜುನಿಗಿದಿರಾಗಿಯೇ ಅವನನ್ನು ಸ್ತೋತ್ರಮಾಡತೊಡಗಿದನು. ಕುಮಾರಾ! ನಿನ್ನಿಂದ ನಾನು ಒಳ್ಳೆಯ ಸುಪುತ್ರವಂತನಾದೆನು. ಕೇಕಯ ಪುತ್ರಿಯಾದ ಸುದೇಷ್ಣೆಗೂ ನೀನು ಆನಂದವರ್ಧಕನು. ನಿನಗೆ ಸಮಾನನಾದ ಪುತ್ರನು ಹಿಂದೆ ಹುಟ್ಟಿದುದೂ ಇಲ್ಲ! ಮುಂದೆ ಹುಟ್ಟುವುದೂ ಇಲ್ಲ! ಆಹಾ! ನಿನ್ನ ಪರಾಪರಾಕ್ರಮನ್ನೇನೆಂದು ಹೇಳಲಿ! ಅಪ್ಪಾ! ಯಾವನು ಸಾವಿರಾರು ಲಕ್ಷ್ಯಗಳನ್ನು ಒಂದೇ ಕಾಲದಲ್ಲಿ ಹೊಡೆಯುವುದಕ್ಕಾಗಿ, ರಣಾಂಗಣದಲ್ಲಿ ಅತ್ತಿತ್ತ

ಸಂಚರಿಸುತ್ತಿದ್ದರೂ, ಒಂದು ಗುರಿಯಾದರೂ ತಪ್ಪದಂತೆ ಸರಿಯಾಗಿ ಹೊಡೆಯುವನೋ ಅಂತಹ ಕರ್ಣನೊಡನೆ ನೀನು ಹೇಗೆ ಯುದ್ಧಮಾಡಿದೆ? ಯುದ್ಧದಲ್ಲಿ ಯಾವನ ಪರಾಕ್ರಮವನ್ನು ನೋಡಿದಮಾತ್ರದಲ್ಲಿಯೇ ಶತ್ರುಗಳ ವೀರ್ಯವೂ, ಪರಾಕ್ರಮವೂ ಅಡಗಿಹೋಗುವುದೋ, ಅಂತಹ ಕೃಪನೊಡನೆ ನೀನು ಹೇಗೆ ಯುದ್ಧದಲ್ಲಿ ಕೈಕಲಿತೆ? ಯಾವನ ಎಣೆಯಿಲ್ಲದ ಕಾರ್ಯವು ಲೋಕಪ್ರಸಿದ್ಧವಾದುದೋ, ಯಾವನು ತನ್ನ ತಂದೆಗಾಗಿ ಕಠಿನವಾದ ಬ್ರಹ್ಮಚರ್ಯವನ್ನು ಹಿಡಿದನೋ, ಯಾವನು ಸಾಕ್ಷಾತ್ ಪರಶುರಾಮನೊಡನೆ ಯುದ್ಧದಲ್ಲಿ ಹೋರಾಡಿದನೋ, ಯಾವನು ಯುದ್ಧದಲ್ಲಿ ಎಂದಿಗೂ ಪರಾಜಯವನ್ನು ಹೊಂದದವನೋ, ವಿದ್ವಾಂಸನೂ, ಶೂರನೂ, ಜಿತೇಂದ್ರಿಯನೂ, ದೃಢವಾಗಿ ಲಕ್ಷ್ಯವನ್ನು ಭೇದಿಸತಕ್ಕವನೂ, ಅತಿವೇಗವಾದ ಹಸ್ತಲಾಘವವುಳ್ಳವನೂ, ಸಮಸ್ತ ಕಾರ್ಯಗಳಲ್ಲಿ ಪ್ರಸಿದ್ಧನೂ ಆದ, ಕುರುವೃದ್ಧನಾದ, ಕೌರವರೆಲ್ಲರಿಗೂ ಪಿತಾಮಹನೆನಿಸಿದ ಆ ಭೀಷ್ಮನೊಡನೆ ನೀನು ಯುದ್ಧಮಾಡಿದ ಬಗೆ ಹೇಗೆ? ಕುಮಾರಾ! ಅವೆಲ್ಲವನ್ನೂ ನನಗೆ ತಿಳಿಸಬೇಕು. ಯಾವನು ತನ್ನ ಬಾಣಗಳಿಂದ ಪರ್ವತವನ್ನೂ ಭೇದಿಸಬಲ್ಲನೋ, ಅಂತಹ ದುರ್ಯೋಧನನನ್ನು ನೀನು ಹೇಗೆ ಇದಿರಿಸಿದೆ? ಯಾವನು ವೃಷ್ಣಿಗಳಿಗೂ, ಪಾಂಚಾಲರಿಗೂ, ಕೌರವ ಪಾಂಡವರಿಗೂ ಸಮಸ್ತ ಕ್ಷತ್ರಿಯಕುಲಕ್ಕೂ ವಿದ್ಯಾಗುರುವೋ, ಯಾವನು ಶಸ್ತ್ರಧಾರಿಗಳಲ್ಲಿ ಮೇಲೆನಿಸಿ, ಸಮಸ್ತಲೋಕದಲ್ಲಿಯೂ ಪ್ರಖ್ಯಾತಿಗೊಂಡಿರುವನೋ ಅಂತಹ ದ್ರೋಣಾಚಾರ್ಯನೊಡನೆ ನೀನು ಹೇಗೆ ಯುದ್ಧಮಾಡಿದೆ? ಯುದ್ಧದಲ್ಲಿ ಆ ದ್ರೋಣಾಚಾರ್ಯನಿಗೆ ಸಮಾನನಾಗಿ, ಆಚಾರ್ಯಪುತ್ರನೆನಿಸಿಕೊಂಡ ಆ ಅಶ್ವತ್ಥಾಮನೊಡನೆ ಹೇಗೆ ಕೈಕಲಿತೆ? ಆ ಧೃತರಾಷ್ಟ್ರಪುತ್ರರಾದರೋ ಒಬ್ಬೊಬ್ಬರೂ ಮಹಾವೀರ್ಯವುಳ್ಳವರು! ಒಬ್ಬೊಬ್ಬರೂ ಮಹಾರಥರು. ಅಂತವರೊಡನೆ ಹೇಗೆ ಯುದ್ಧಮಾಡಿದೆ?'' ಎಂದನು.

ಆದಕ್ಕಾ ಉತ್ತರನು, “ ಮಹಾರಾಜಾ! ನಾನು ಕೌರವರನ್ನು ಜಯಿಸಿದವನೂ ಅಲ್ಲ. ಗೋವುಗಳನ್ನು ಬಿಡಿಸಿತಂದವನೂ ನಾನಲ್ಲ. ದೇವಕುಮಾರನಾದ ಯಾವನೋ ಒಬ್ಬನಿಂದ ಈ ಕಾರ್ಯಗಳೆಲ್ಲವೂ ನಡೆಯಿ

ರಥಿಕರೂ, ಕೊಬ್ಬಿದ ಹುಲಿಯಿಂದ ಜಿಂಕೆಗಳು ಹೇಗೋಹಾಗೆ ಪರಾಜಿತ ರಾದರು. ಕುದುರೆಗಳೂ, ಆನೆಗಳೂ, ಧನುರ್ಧಾರಿಗಳಾದ ವೀರರ ಸಮೂಹವೂ ಸಹಸ್ರಸಂಖ್ಯೆಯಿಂದ ಹತವಾದುವು. ಕುರುಸೈನ್ಯವೆಲ್ಲ ಭಗ್ನ ವಾಯಿತು. ಆ ದೇವಕುಮಾರನು ಕರ್ಣನನ್ನು ನೂರು ಬಾಣಗಳಿಂದ ಹೊಡೆದು, ಅವನ ಕುದುರೆಗಳನ್ನೆಲ್ಲ ಕೊಂದು, ಸಮ್ಮೋಹನಾಸ್ತ್ರದಿಂದ ಅವನನ್ನೂ ಮೋಹಗೊಳಿಸಿ, ಅವನ ಕೆಂಪುವಸ್ತ್ರವನ್ನು ಸೆಳೆದುತಂದನು. ಭೀಷ್ಮನನ್ನು ನಾಲ್ಕು ಬಾಣಗಳಿಂದ ನೋಯಿಸಿ, ಅವನ ಕುದುರೆಗಳನ್ನು ಕೊಂದನು. ಆದರೆ, ಅವನನೊಬ್ಬನ ವಸ್ತ್ರವನ್ನುಮಾತ್ರ ತೆಗೆದುಕೊಳ್ಳಲಿಲ್ಲ. ದುರ್ಯೋಧನನನ್ನು ಏಳು ಬಾಣಗಳಿಂದ ಹೊಡೆದು, ಅವನ ಕುದುರೆಗಳ ನ್ನೂ ಪ್ರಹರಿಸಿ, ಅವನ ಹೊಂಬಟ್ಟೆಯನ್ನು ತಂದನು. ಹಾಗೆಯೇ ಆದೇವ ಕುಮಾರನು, ದ್ರೋಣ, ಕೃಪ, ಸೋಮದತ್ತ, ಜಯದ್ರಥರನ್ನೂ, ಭೂರಿ ಶ್ರವಸ್ಸನ್ನೂ, ಶಕುನಿಯನ್ನೂ, ದುಶ್ಶಾಸನಾದಿಗಳನ್ನೂ ಮೂರುಮೂರು ಬಾಣಗಳಿಂದ ಹೊಡೆದು, ಅವರ ಮೈಮೇಲಿದ್ದ ಬೆಲೆಯುಳ್ಳ ವಿವಿಧವಸ್ತ್ರ ಗಳನ್ನು ತಂದನು. ಅಶ್ವತ್ಥಾಮನನ್ನು ಎರಡು ಬಾಣಗಳಿಂದ ಹೊಡೆದು, ವಿಕರ್ಣನ ಬಿಲ್ಲನ್ನೂ ಕತ್ತರಿಸಿ, ಅವರ ಮೈಮೇಲಿದ್ದ ಎರಡು ನೀಲವಸ್ತ್ರ ಗಳನ್ನು ತಂದನು'' ಎಂದನು. ಆಗ ವಿರಾಟನು ‘‘ಕುಮಾರಾ! ನೀನು ಹೇಳಿದ ಆ ವೀರನೆಲ್ಲಿರುವನು? ಮಹಾಯಶಸ್ವಿಯಾದ ಆ ದೇವಕುಮಾ ರನು ಈಗ ಎಲ್ಲಿ ಹೋಗಿರುವನು? ಯುದ್ಧದಲ್ಲಿ ಕುರುಗಳ ಕೈಗೆ ಸಿಕ್ಕಿ ಬೀಳುತ್ತಿದ್ದ ನನ್ನ ಪುತ್ರನನ್ನು (ನಿನ್ನನ್ನು) ಕಾಪಾಡಿದ ಆ ಮಹಾಬಾಹು ವೆಲ್ಲಿ? ಅವನನ್ನು ಈಗಲೇ ನೋಡಿ ಸತ್ಕರಿಸಬೇಕೆಂದು ನನ್ನ ಮನಸ್ಸು ಬಹಳವಾಗಿ ತವಕಿಸುತ್ತಿದೆ. ಯಾವ ದೇವಕುಮಾರನು ನನ್ನ ಮಗನ ನ್ನೂ, ನನ್ನ ಗೋವುಗಳನ್ನೂ ಶತ್ರುಗಳಿಂದ ಕಾಪಾಡಿದನೋ, ಅವನಿಗೆ ಈಗಲೇ ನನ್ನ ಮಗಳನ್ನೂ, ಅನೇಕಗ್ರಾಮಗಳನ್ನೂ, ಸುವರ್ಣಗಳನ್ನೂ, ಒಳ್ಳೇ ರತ್ನಖಚಿತವಾದ ಉಡೆದಾರವನ್ನೂ, ನೂರುಸಾವಿರಮಂದಿ ಸ್ತ್ರೀಯ ರನ್ನೂ ಕೊಡುವೆನು'' ಎಂದನು. ಅದಕ್ಕಾ ಉತ್ತರನು ‘‘ಜನಕಾ! ಪ್ರತಾಪಶಾಲಿಯಾದ ಆ ದೇವಕುಮಾರನು ಆಗಲೇ ಕಣ್ಮರೆಯಾದನು.

ಆದರೆ ಈಗಲೋ, ನಾಳೆಯೋ, ತಪ್ಪಿದರೆ ನಾಡಿದೋ ಅವನು ತಿರುಗಿ ನಮಗೆ ಕಾಣಿಸಿಕೊಳ್ಳಬಹುದು " ಎಂದನು.

ಓ ಜನಮೇಜಯರಾಜಾ! ಇಷ್ಟು ಹೇಳಿದರೂ, ತನ್ನ ಸಮೀಪದಲ್ಲಿಯೇ ವೇಷವನ್ನು ಮರೆಸಿಕೊಂಡು ನಿಂತಿದ್ದ ಅರ್ಜುನನನ್ನು ವಿರಾಟನು ತಿಳಿಯಲಾರದೆ ಹೋದನು. ಆಮೇಲೆ ಅರ್ಜುನನು ವಿರಾಟನ ಅನುಮತಿಯನ್ನು ಪಡೆದು, ಉತ್ತರನನ್ನು ಮಾತಾಡಿಸಿ. " ನೀನು ರಾಜನಿಗೆ ಹೀಗೆಯೇ ಹೇಳುತ್ತಿರು " ಎಂದು ಸೂಚಿಸಿ, ಅಲ್ಲಿಂದ ಅಂತಃಪುರಕ್ಕೆ ಬಂದನು. ಅಲ್ಲಿ ವಿರಾಟಪುತ್ರಿಯಾದ ಉತ್ತರೆಗೆ ತಾನು ತಂದಿದ್ದ ಬೆಲೆಯುಳ್ಳ ವಸ್ತ್ರಾಭರಣಗಳೆಲ್ಲವನ್ನೂ ತನ್ನ ಕೈಯಿಂದಲೇ ಕೊಟ್ಟನು. ಉತ್ತರೆಯು ಅವನ್ನೆಲ್ಲ ಸ್ವೀಕರಿಸಿ, ತನ್ನ ಸಖಿಯರೊಡನೆ ಸಂತೋಷದಿಂದಿದ್ದಳು.

ಇದು ಎಪ್ಪತ್ತೆರಡನೆಯ ಅಧ್ಯಾಯವು.



ಭೀಮಾರ್ಜುನಾದಿಗಳು ಆ ರಾತ್ರಿ ಧರ್ಮರಾಜನ ಬಳಿಗೆ ಬಂದುದು. ಯುಧಿಷ್ಠಿರನು ಎಂದಿನಂತೆ ಸಂತೋಷದಿಂದ ಮಾತಾಡಿಸದಿದ್ದುದನ್ನು ನೋಡಿ, ಅರ್ಜುನನು ಭೀಮನನ್ನು ಪ್ರಶ್ನೆಮಾಡಿದಾಗ, ಯುಧಿಷ್ಠಿರನು ಕಾರಣವನ್ನು ತಿಳಿಸಿದುದು. ಭೀಮಾರ್ಜುನರು ವಿರಾಟನನ್ನು ಕೊಲ್ಲುವುದಕ್ಕೆ ಯತ್ನಿಸಲು, ಧರ್ಮರಾಜನು ಅವರನ್ನು ತಡೆದುದು.

ಓ ಜನಮೇಜಯರಾಜಾ ! ಹೀಗೆ ಅರ್ಜುನನು ಉತ್ತರೆಗೂ, ಅವಳ ಸಖಿಯರಿಗೂ ತಾನು ತಂದ ವಸ್ತ್ರಾಭರಣಾದಿಗಳನ್ನು ಕೊಟ್ಟು, ತಾನು ಯುದ್ಧದಲ್ಲಿ ದೊಡ್ಡ ಕಾರ್ಯವನ್ನು ನಡೆಸಿ ಬಂದಮೇಲೆ, ಯುಧಿಷ್ಠಿರನನ್ನು ಏಕಾಂತವಾಗಿ ನೋಡುವುದಕ್ಕಾಗಿ ಅಣ್ಣನ ನಿವಾಸಕ್ಕೆ ಹೋದನು. ಅಲ್ಲಿ ಧರ್ಮರಾಜನ ಮುಖದಲ್ಲಿ ಎಂದಿನಂತೆ ಉಲ್ಲಾಸವಿಲ್ಲದುದನ್ನು ಕಂಡು, ಪಕ್ಕದಲ್ಲಿದ್ದ ಭೀಮನನ್ನು ಕುರಿತು, " ಅಣ್ಣ ಭೀಮಸೇನಾ ! ಇದೇನಿದು?

ನಮ್ಮ ಹಿರಿಯಣ್ಣನು ಎಂದಿನಂತೆ ಹರ್ಷಯುಕ್ತನಾಗಿ ನಮ್ಮನ್ನು ಮಾತಾಡಿಸದೆ ಮುಖವನ್ನು ಮುಚ್ಚಿಕೊಂಡಿರಲು ಕಾರಣವೇನು?'' ಎಂದು ಪ್ರಶ್ನೆ ಮಾಡಿದನು. ಹೀಗೆ ಶಂಕಿಸುತ್ತಿರುವ ಭೀಮಾರ್ಜುನರನ್ನು ನೋಡಿ ಧರ್ಮರಾಜನು, ತನ್ನ ಮುಖದಲ್ಲಿದ್ದ ರಕ್ತವನ್ನು (ಕೆಳಗೆ ಬೀಳದಂತೆ) ಚೆನ್ನಾಗಿ ಒರೆಸಿಕೊಂಡು, ''ಅರ್ಜುನಾ! ನಿನ್ನನ್ನು ನಾನು ಪ್ರಶಂಸೆಮಾಡುತ್ತಿದ್ದಾಗ, ಅದನ್ನು ಕೇಳಿ ಸಹಿಸಲಾರದೆ ಬುದ್ಧಿಹೀನನಾದ ವಿರಾಟನು ನನ್ನನ್ನು ದಾಳದಿಂದ ಹೊಡೆದನು. ಆ ಗಾಯದಿಂದ ರಕ್ತವು ಬರುವುದನ್ನು ಕಂಡು ಆ ರಕ್ತಬಿಂದುವು ಭೂಮಿಯಲ್ಲಿ ಬೀಳದಹಾಗೆ, ಮುಖಕ್ಕೆ ಬಟ್ಟೆಯನ್ನು ಒತ್ತಿ ಹಿಡಿದು ಕೋಪವನ್ನಡಗಿಸಿಕೊಂಡು ಕುಳಿತೆನು. ಓ ಶುಭಾರ್ಹನೆ! ನೀನಾದರೂ ಈಗ ಕೋಪಿಸಬಾರದು. ನಾವು ಇದುವರೆಗೆ ಸುಖವಾಗಿ ವಾಸಮಾಡಿದ ಈ ಮತ್ಸ್ಯರಾಷ್ಟ್ರವು ನಷ್ಟವಾಗದಂತೆ ನೀನು ತಾಳ್ಮೆಯನ್ನು ವಹಿಸು. ವೀರನಾದ ನೀನು ಕೋಪಿಸಿಕೊಂಡರೆ ವಿರಾಟನು ಸುಖದಿಂದ ಬದುಕಲಾರನು. ವತ್ಸ ಪಾರ್ಥಾ! ವೇಷವನ್ನು ಮರೆಸಿಕೊಂಡಿದ್ದ ನಿನ್ನ ಶೌರ್ಯವನ್ನೂ, ಬಲವನ್ನೂ, ತಿಳಿಯದ ಆ ವಿರಾಟನು ನನ್ನಲ್ಲಿ ಈ ಅಪರಾಧವನ್ನು ಮಾಡಿಬಿಟ್ಟನು. ಈಗ ನಿನ್ನನ್ನು ಕಂಡೂ ನಾನು ಸಂತೋಷದಿಂದ ಮಾತಾಡಿಸದಿದ್ದುದಕ್ಕೆ ಇದೇ ಕಾರಣವು'' ಎಂದನು,

ಅಪ್ರಮೇಯಪ್ರಭಾವವುಳ್ಳವನೂ, ಮಹಾಬಲಾಢ್ಯನೂ, ಕ್ಷಮಾಶೀಲನೂ ಆದ ಧರ್ಮರಾಜನು ಇಷ್ಟು ಸಮಾಧಾನದಿಂದ ಹೇಳಿದರೂ, ಕೋಪಸ್ವಭಾವವುಳ್ಳ ಭೀಮನು ಆಗ್ರಹವನ್ನು ತಡೆಯಲಾರದೆ, ತನ್ನಂತೆಯೇ ಕೋಪಗೊಂಡಿದ್ದ ಅರ್ಜುನನನ್ನು ನೋಡಿ ''ವತ್ಸ ಪಾರ್ಥಾ! ಜ್ಞಾನಿಗಳೊಳಗೆಲ್ಲ ಮೇಲೆನಿಸಿದ ಬೃಹಸ್ಪತಿಯು, 'ತಾಳ್ಮೆಯೆಂಬುದು ಯಾವಾಗಲೂ ಇರಬೇ'ಕೆಂದು ಹೇಳಲಿಲ್ಲ. ಅದಕ್ಕೂ ಕಾಲವುಂಟು. ಯಾವಾಗಲೂ ತಾಳ್ಮೆಯೇ ಸ್ವಭಾವವಾಗಿ ಉಳ್ಳವನು, ವಿಷವೇಗವಿಲ್ಲದ ಸರ್ಪದಂತೆ ಎಲ್ಲರಿಂದಲೂ ಪರಾಭವಿಸಲ್ಪಡುವನು. ಆದುದರಿಂದ, ಈಕ್ಷಣವೇ ನಾವು ಆ ವಿರಾಟನನ್ನು ಪುತ್ರಪೌತ್ರ ಸೈನ್ಯಾದಿಗಳೊಡನೆ ಕೊಂದು, ಅವನ ವಂಶವನ್ನೇ

ನಿರ್ಮೂಲವಮಾಡಿ, ಈಗಲೇ ನಮ್ಮ ಅಣ್ಣನಾದ ಧರ್ಮರಾಜನನ್ನು ಈ ರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡುವೆವು. ಆ ಮಾತ್ಸ್ಯನು ನಮಗೆ ದೊಡ್ಡ ವೈರಿಯಾಗಿರುವನು. ಕೀಚಕನು ಪಾಂಚಾಲಪುತ್ರಿಯಾದ ಕೃಷ್ಣೆಯನ್ನು ಪರಾಭವಿಸುವುದಕ್ಕೆ ಬಂದಾಗಲೂ ಇವನು ಅವಳನ್ನು ರಕ್ಷಿಸದೆ ಉಪೇಕ್ಷಿಸಿದನಲ್ಲವೆ? ಆದುದರಿಂದ ಆ ವಿರಾಟನು 'ರಾಜ' ನೆನಿಸಿಕೊಳ್ಳುವುದಕ್ಕೇ ಅರ್ಹನಲ್ಲ! ಅಣ್ಣಾ! ಈ ಅರ್ಜುನನ ವೀರ್ಯಬಲದಿಂದ ಇಲ್ಲಿಗೆ ನೀನೇ ರಾಜನಾಗಿರು. ಅರ್ಜುನಾ! ಈ ಯುಧಿಷ್ಠಿರನು ಕುರುದೇಶಗಳಿಗೆ ರಾಜನಾಗುವಂತೆ ಮಾತ್ಸ್ಯದೇಶಗಳಿಗೂ ರಾಜನಾಗಲಿ! ತುಂಬಿದ ಮಡಕೆಯನ್ನು ಕಲ್ಲಿನಮೇಲೆ ಕುಕ್ಕಿ ಒಡೆಯುವಂತೆ, ಆ ವಿರಾಟನ ದೇಹವನ್ನು ನೂರಾರು ಶಕಲಗಳಾಗಿ ಭೇದಿಸುವೆನು" ಎಂದನು. ಆಗ ಅರ್ಜುನನು ಧರ್ಮರಾಜನನ್ನು ನೋಡಿ "ಅಣ್ಣಾ! ನಿನ್ನ ಈ ತಾಳ್ಮೆಯಿಂದಲೇ ನಮಗೆ ಈ ಎಲ್ಲಾ ಕಷ್ಟಗಳೂ ಬಂದುವು. ಈಗಲೇ ನಾನು ಆ ವಿರಾಟನನ್ನು ಪುತ್ರ, ಮಿತ್ರ, ಜ್ಞಾತಿ ಬಾಂಧವ ಸೈನ್ಯವಾಹನಗಳೊಡನೆ ಸಂಹರಿಸಿ, ಆಮೇಲೆ ಕೌರವರನ್ನು ಕೊಲ್ಲುವೆನು" ಎಂದನು. ಭೀಮಾದಿಗಳೆಲ್ಲರೂ "ಅದೇ ಸರಿ" ಎಂದರು. ಆಗ ಧರ್ಮರಾಜನು, "ಸಹೋದರರೆ! ಸ್ವಲ್ಪ ತಾಳಿರಿ! ಆ ವಿರಾಟನು ಈಗಲಾದರೂ ಪತ್ನೀಸಮೇತನಾಗಿ ಬಂದು ನಮ್ಮಲ್ಲಿ ಕ್ಷಮೆಯನ್ನು ಬೇಡದಿದ್ದರೆ, ಆಗ ಅವನು ವಧ್ಯನೇ! ಅರ್ಜುನಾ! ದುರಾತ್ಮನಾದರೂ ಈ ವಿರಾಟನನ್ನು ಈಗಲೇ ಕೊಲ್ಲಬಾರದು. ನಾವೆಲ್ಲರೂ ನಾಳೆ ಬೆಳಗ್ಗೆ ಈ ವೇಷಾಂತರವನ್ನೆಲ್ಲ ತೆಗೆದು, ರಾಜವೇಷದಿಂದ ಹೋಗಿ, ವಿರಾಟನ ಸಿಂಹಾಸನದಲ್ಲಿ ಕುಳಿತುಬಿಡುವೆವು. ವಿರಾಟನು ಆಗಲೂ ನಮ್ಮನಾಗದ ಪಕ್ಷದಲ್ಲಿ, ಅವನನ್ನು ತೀರಿಸಿಬಿಡುವೆವು" ಎಂದನು. ಹೀಗೆಂದು ನಿಶ್ಚಯ ಮಾಡಿಕೊಂಡು, ಆ ಪಾಂಡವರೆಲ್ಲರೂ ಆ ರಾತ್ರಿಯನ್ನು ಕಳೆದರು. ಅತ್ತಲಾಗಿ ವಿರಾಟನೂ ತನ್ನ ಕುಮಾರನೊಡನೆ ಸಂತೋಷದಿಂದ ರಾತ್ರಿಯನ್ನು ಕಳೆದನು. ಇದು ಎಪ್ಪತ್ತುಮೂರನೆಯ ಅಧ್ಯಾಯವು.

**ಇಲ್ಲಿಗೆ ಗೋಗ್ರಹಣಪರ್ವವು ಮುಗಿದುದು.**



ಧರ್ಮರಾಜನನ್ನು ಕುರಿತು "ನನಗೆ ಸಭಾಸ್ತಾರನಾಗಿ, ನನ್ನೊಡನೆ ಪಗಡೆಯಾಡುತಿದ್ದ ಕಂಕನಲ್ಲವೇ ನೀನು? ಸನ್ಯಾಸಿಯಾದ ನೀನು ಹೀಗೆ ರಾಜಯೋಗ್ಯಗಳಾದ ಅಲಂಕಾರಗಳನ್ನು ಮಾಡಿಕೊಂಡು, ಹೀಗೆ ನನ್ನ ಸಿಂಹಾಸನವನ್ನೇರಿ ಕುಳಿತುಕೊಳ್ಳುವುದೆಂದರೇನು?" ಎಂದನು.

ಓ ಜನಮೇಜಯರಾಜಾ! ವಿರಾಟನು ಹೇಳಿದ ಈ ಮಾತನ್ನು ಕೇಳಿ ಅರ್ಜುನನು, ಅವನನ್ನು ಮತ್ತಷ್ಟು ಪರಿಹಾಸಮಾಡಬೇಕೆಂಬ ಉದ್ದೇಶದಿಂದ, ನಗುಮುಖದೊಡನೆ ಹೀಗೆಂದು ಹೇಳುವನು. "ಓ ರಾಜಾ! ಇವನು ಇಂದ್ರನ ಅರ್ಧಾಸನವನ್ನೇರುವುದಕ್ಕೂ ಅರ್ಹನೆಂದು ತಿಳಿ! ಇವನನ್ನು ಯಾರೆಂದು ಬಲ್ಲೆ! ಬ್ರಾಹ್ಮಣಪ್ರಿಯನು. ಶಾಸ್ತ್ರಜ್ಞನು. ತ್ಯಾಗಿಯು. ಸಮಸ್ತಲೋಕಗಳಿಂದಲೂ ಪೂಜಿಸಲ್ಪಡತಕ್ಕವನು. ಧರ್ಮವೇ ಮೂರ್ತೀಭವಿಸಿದಂತಿರುವನು. ವೀರ್ಯವಂತರಲ್ಲಿ ಶ್ರೇಷ್ಠನು. ಬುದ್ಧಿಯಲ್ಲಿಯೂ ಮೇಲೆನಿಸಿದನು. ತಪಸ್ಸುಗಳಿಗೆಲ್ಲ ಆಶ್ರಯಭೂತನು. ಚರಾಚರಾತ್ಮಕವಾದ ತ್ರೈಲೋಕ್ಯದಲ್ಲಿ ಯಾವಯಾವ ಅಸ್ತ್ರಗಳುಂಟೋ ಅಂತಹ ವಿವಿಧಾಸ್ತ್ರಗಳನ್ನೂ ಇವನು ಬಲ್ಲನು. ಇವನಂತೆ ಅಸ್ತ್ರಗಳನ್ನು ತಿಳಿದವನು ಬೇರೊಬ್ಬನಿಲ್ಲ. ಮುಂದೆ ಎಂದಾದರೂ ಇವನಂತೆ ತಿಳಿಯಬಲ್ಲವನೂ ಇರಲಾರನು. ದೇವಾಸುರ ಮನುಷ್ಯರಲ್ಲಿಯಾಗಲಿ, ಯಕ್ಷರಾಕ್ಷಸ ಗಂಧರ್ವ ನಾಗ ಕಿನ್ನರರಲ್ಲಿಯಾಗಲಿ, ಇವನಿಗೆ ಸಮಾನರಿಲ್ಲ. ಇವನು ಬಹಳ ದೂರದೃಷ್ಟಿಯುಳ್ಳವನು. ಮಹಾತೇಜಸ್ವಿಯು. ಪುರವಾಸಿಗಳಿಗೂ, ದೇಶವಾಸಿಗಳಿಗೂ ಪ್ರಿಯನಾದವನು. ಪಾಂಡವರಲ್ಲಿ ಅತಿರಥನು. ಯಜ್ಞಧರ್ಮಗಳಲ್ಲಿ ನಿತ್ಯನಿರತನು. ಜಿತೇಂದ್ರಿಯನು. ಮಹರ್ಷಿಗಳಿಗೆ ಸಮಾನನು. ರಾಜರ್ಷಿಯು. ಸರ್ವಲೋಕಗಳಲ್ಲಿ ಪ್ರಖ್ಯಾತವಾದ ಬಲವೂ, ಧೈರ್ಯವೂ, ಸಾಮರ್ಥ್ಯವೂ ಉಳ್ಳವನು. ಸತ್ಯವಾದಿಯು. ಐಶ್ವರ್ಯದಲ್ಲಿಯೂ, ಧನಸಮೃದ್ಧಿಯಲ್ಲಿಯೂ ಇಂದ್ರಕುಬೇರರಿಗೆ ಸಮಾನನು. ಮಹಾತೇಜಸ್ವಿಯಾದ ಮನುವು ಹೇಗೆ ಲೋಕರಕ್ಷಕನೆನಿಸಿದನೋ, ಹಾಗೆ ಇವನೂ ಪ್ರಜೆಗಳನ್ನು ಪ್ರೀತಿಯಿಂದ ಕಾಪಾಡತಕ್ಕವನು. ಓ ರಾಜಾ! ಕುರುಗಳಿಗೆಲ್ಲ ಉತ್ತಮನೆನಿಸಿದ ಕುಂತೀಪುತ್ರನಾದ ಆ ಯುಧಿಷ್ಠಿರನೇ

ರಾದರೋ, ಸೈರಂಧ್ರಿಯೆನಿಸಿದ ಆಕೆಯೇ ದ್ರೌಪದಿ. ದ್ರುಪದನ ಪ್ರಿಯ ಪುತ್ರಿ. ಧೃಷ್ಟದ್ಯುಮ್ನನ ಸಹೋದರಿ. ಅಗ್ನಿಕುಂಡದಿಂದ ಹುಟ್ಟಿದವಳು" ಎಂದನು. ಆಮೇಲೆ ಭೀಮನು ವಿರಾಟನನ್ನು ಕುರಿತು, "ರಾಜಾ! ಈ ಬೃಹನ್ನಳೆ ಯಾರೆಂಬುದನ್ನು ನಾನು ತಿಳಿಸುವೆನು ಕೇಳು. ಇವನೇ ಧನಂಜ ಯನೆನಿಸಿದ ಆ ಅರ್ಜುನನು. ಭೂಮಿಯನ್ನೆಲ್ಲಾ ಸುತ್ತಿದರೂ, ಇವನಂತೆ ಅಸ್ತ್ರಜ್ಞನು ಬೇರೊಬ್ಬನು ಸಿಕ್ಕಲಾರನು. ಕುಂತೀಕುಮಾರನಾದ ಈತನೇ ಹಿಂದೆ ನಾಗವನವೆನಿಸಿಕೊಂಡಿದ್ದ ಇಂದ್ರನ ಖಾಂಡವವನವನ್ನು ಅಲ್ಲಿನ ಸಮಸ್ತ ನಾಗಗಳೊಡನೆ ಅಗ್ನಿಗೆ ಆಹುತಿಯಾಗಿ ಮಾಡಿ, ಆಗ ಇಂದ್ರನು ಸುರಿಸಿದ ಮಹಾವೃಷ್ಟಿಯನ್ನು ತನ್ನ ಬಾಣವರ್ಷದಿಂದ ತಡೆದನು. ಇವನೇ ಧರ್ಮರಾಜನ ರಾಜಸೂಯಕ್ಕಾಗಿ ಭೂಮಿಯಲ್ಲಿ ಅನೇಕರಾಜರಿಂದ ಕಪ್ಪ ವನ್ನು ತರಿಸಿಕೊಟ್ಟವನು. ನಿನ್ನ ಅಂತಃಪುರದಲ್ಲಿ ಬೃಹನ್ನಳೆಯೆಂಬ ಹೆಸರಿನಿಂದ ಸ್ತ್ರೀವೇಷವನ್ನು ಧರಿಸಿಕೊಂಡು, ಇದುವರೆಗೂ ಇದ್ದ ಇವನೇ ನನ್ನ ತಮ್ಮನಾದ ಅರ್ಜುನನು. ಓ ರಾಜೇಂದ್ರಾ! ನಾವೆಲ್ಲರೂ ಅಜ್ಞಾತ ವಾಸಕ್ಕಾಗಿ ಇಲ್ಲಿ ಬಂದು ಸೇರಿ, ಗರ್ಭವಾಸದಲ್ಲಿ ಶಿಶುಗಳು ಹೇಗೋಹಾಗೆ, ನಿನ್ನನ್ನಾಶ್ರಯಿಸಿ, ಸುಖದಿಂದಿರುತಿದ್ದೆವು" ಎಂದನು. ಹೀಗೆ ಭೀಮಾ ರ್ಜುನರಿಬ್ಬರೂ ತಮ್ಮ ನಿಜಸ್ಥಿತಿಯನ್ನು ವಿರಾಟನಿಗೆ ಸೂಚಿಸಿದಮೇಲೆ, ಉತ್ತರನು ತಿರುಗಿ ತನ್ನ ತಂದೆಗೆ ಅವರೊಬ್ಬೊಬ್ಬರನ್ನೂ ತೋರಿಸುತ್ತ ಹೀಗೆಂದು ಹೇಳತೊಡಗಿದನು. "ಜನಕಾ! ಇಲ್ಲಿ ಯಾವನು ಹೊಂಬ ಣ್ಣದ ಮೈಯುಳ್ಳವನಾಗಿ, ಕೊಬ್ಬಿದ ಸಿಂಹದಂತೆ ದೊಡ್ಡ ಆಕಾರದಿಂದ ಲೂ, ಎತ್ತರವಾದ ಮೂಗಿನಿಂದಲೂ, ಉಬ್ಬಿ ಅಗಲವಾದ ಕಣ್ಣುಗಳಿಂದ ಲೂ, ಕೆಂಪಾದ ಕಡೆಗಣ್ಣುಗಳಿಂದಲೂ ಶೋಭಿಸುತ್ತಿರುವನೋ, ಅವನೇ ಕುರುರಾಜನಾದ ಯುಧಿಷ್ಠಿರನು. ಯಾವನು ಪುಟಹಾಕಿದ ಚಿನ್ನದಂತೆ ಮೈಬಣ್ಣವುಳ್ಳವನಾಗಿ, ಆನೆಯಂತೆ ಗಂಭೀರವಾದ ನಡೆಯಿಂದಲೂ, ಉಬ್ಬಿ ವಿಶಾಲವಾದ ಭುಜದಿಂದಲೂ, ದುಂಡಗೆ ನೀಡಿದ ತೋಳುಗಳಿಂದಲೂ, ಶೋಭಿಸುವನೋ, ಅವನೇ ವೃಕೋದರನು. ಅವನನ್ನು ನೋಡು! ಎಲ್ಲರೂ ನೋಡಿರಿ! ಅವನ ಪಕ್ಕದಲ್ಲಿ ಯಾವನು ಶ್ಯಾಮಲದೇಹವುಳ್ಳವನಾಗಿ, ಯು ವಕನಾಗಿ, ಆನೆಯ ಸಲಗಕ್ಕೆ ಸಮಾನನಾಗಿ, ಸಿಂಹದಂತೆ ಉಬ್ಬಿದ ಹೆಗಲಿ

ನಿಂದಲೂ, ಆನೆಯಂತೆ ನಡೆಯಿಂದಲೂ, ಕಮಲದಂತೆ ವಿಸ್ತಾರವಾದ ಕಣ್ಣು ಗಳಿಂದಲೂ ಶೋಭಿಸುವನೋ, ಅವನೇ ವೀರನಾದ ಮಹಾಧನುಷ್ಮಂತನಾದ ಅರ್ಜುನನು. ಧರ್ಮರಾಜನ ಸಮೀಪದಲ್ಲಿ ವಿಷ್ಣುಮಹೇಂದ್ರರಂತೆ ಕುಳಿತಿರುವ ಪುರುಷಶ್ರೇಷ್ಠರಾದ ಆ ಅವಳಿಮಕ್ಕಳಿಬ್ಬರೂ ನಕುಲಸಹದೇವರು. ಇವರಿಗೆ ರೂಪದಲ್ಲಿಯೂ, ಬಲದಲ್ಲಿಯೂ, ಶೀಲದಲ್ಲಿಯೂ ಸಾಟಿಯಾದವರು ಮನುಷ್ಯಲೋಕದಲ್ಲಿಯೇ ಇಲ್ಲವು. ಅದೋ! ಅವರಿಬ್ಬರ ಪಕ್ಕದಲ್ಲಿ ಚಿನ್ನದಂತೆ ದೇಹಲಾವಣ್ಯದಿಂದೊಪ್ಪುತ್ತ, ಮೂರ್ತಿಗೊಂಡ ಪ್ರಭೆಯಂತೆಯೂ, ಸಾಕ್ಷಾದ್ಗೌರೀದೇವಿಯಂತೆಯೂ, ದೇವತಾ ಸ್ತ್ರೀಯಂತೆಯೂ, ಮೂರ್ತಿಮತಿಯಾದ ಲಕ್ಷ್ಮೀದೇವಿಯಂತೆಯೂ ಒಪ್ಪುತ್ತ, ನೀಲೋತ್ಪಲದಂತಿರುವ ದೇಹಛಾಯೆಯುಳ್ಳ ಹೆಂಗಸೇ ಕೃಷ್ಣೆಯೆಂದು ಹೆಸರುಗೊಂಡ ದ್ರೌಪದಿ'' ಎಂದನು. ಉತ್ತರನು ಹೀಗೆಂದು ಪಂಚಪಾಂಡವರ ಗುರುತುಗಳನ್ನು ತಂದೆಗೆ ತಿಳಿಸಿ, ಅರ್ಜುನನ ಪರಾಕ್ರಮವನ್ನು ಪ್ರತ್ಯೇಕವಾಗಿ ವರ್ಣಿಸತೊಡಗಿದನು. ''ಜನಕಾ! ಈ ಅರ್ಜುನನು ಮೃಗಗಳ ಗುಂಪಿನಲ್ಲಿ ಸಿಂಹವು ಹೇಗೋ ಹಾಗೆ ಶತ್ರುಗಳ ರಥಸೈನ್ಯದ ನಡುವೆ ಪ್ರವೇಶಿಸಿ, ಅವನ್ನೆಲ್ಲ ಕೊಲ್ಲುತ್ತ ಯಥೇಚ್ಛವಾಗಿ ಸಂಚರಿಸಿದನು. ಮಹಾಮೇಘಗಳಂತಿರುವ ಎಷ್ಟೋ ಆನೆಗಳು ಯುದ್ಧದಲ್ಲಿ ಇವನಿಂದ ಹತವಾಗಿ, ದಂತಗಳು ಭೂಮಿಯಲ್ಲಿ ನಾಟುವಂತೆ ಮುಗ್ಗರಿಸಿಬಿದ್ದು ಸತ್ತುವು. ಇವನೇ ಕೌರವರನ್ನೋಡಿಸಿ ನಮ್ಮ ಗೋವುಗಳನ್ನು ಹಿಂತಿರುಗಿಸಿದವನು. ಇವನ ಶಂಖಧ್ವನಿಯಿಂದ ನನ್ನ ಕಿವಿಗಳು ಕಿವುಡುಬಿದ್ದುವು. ಇವನ ಬಿಲ್ಲಿನ ಧ್ವನಿಯನ್ನು ನೆನೆಸಿಕೊಂಡರೆ ಈಗಲೂ ನನಗೆ ರೋಮಾಂಚವೇಳುವುದು. ಇವನ ಧ್ವಜದಲ್ಲಿದ್ದ ವಾನರನ ಮತ್ತು ಭೂತಗಳ ಕೂಗಾಟವು ನನ್ನನ್ನು ಈಗಲೂ ನಡುಗಿಸುತ್ತಿದೆ. ಇವನು ಹೇಗೆ ಬಾಣಗಳನ್ನು ತೆಗೆಯುತ್ತಿದ್ದನೋ, ಹೇಗೆ ಬಿಲ್ಲನ್ನೆಳೆಯುತ್ತಿದ್ದನೋ, ಹೇಗೆ ಬಾಣಗಳನ್ನು ಪ್ರಯೋಗಿಸುತ್ತಿದ್ದನೋ ಅದನ್ನುಕೂಡ ನೋಡಿ ತಿಳಿಯಲು ನನಗೆ ಸಾಧ್ಯವಾಗಲಿಲ್ಲ. ಇವನ ಬಿಲ್ಲಿನಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಪುಂಖಾನುಪುಂಖವಾಗಿ ಹೊರಡುತ್ತಿದ್ದುವು. ಇವನ ಒಂದು ಬಾಣವಾದರೂ ಗುರಿತಪ್ಪಿ ಬೇರೆಕಡೆಗೆ ಬಿದ್ದುದಿಲ್ಲ. ಇವನ ತೀಕ್ಷ್ಣಬಾಣಗಳಿಂದ ಕತ್ತರಿಸ

ಲ್ಪಟ್ಟ ಯೋಧರ ಕೈ, ಕಾಲು, ತೋಳು, ತೊಡೆ, ಎದೆ ಮುಂತಾದ ದೇಹಾವಯವಗಳು ರಣರಂಗದ ಎಲ್ಲಾ ಕಡೆಯಲ್ಲಿಯೂ ಹರಡಿದ್ದುವು. ಇವನು ಆ ಯುದ್ಧರಂಗದಲ್ಲಿ ಹರಿಸಿದ ದೊಡ್ಡ ರಕ್ತನದಿಯನ್ನು ನೆನೆಸಿಕೊಂಡು ಈಗಲೂ ನನ್ನ ಎದೆಯು ಬಿರುಗಾಳಿಗಿದಿರಾದ ಬಾಳೆಯ ಗಿಡದಂತೆ ಕಂಪಿಸುತ್ತಿದೆ. ಮಹಾರಾಜಾ! ಭಯಂಕರಾಕಾರವುಳ್ಳ ಈತನೇ ದುರ್ಯೋಧನನೊಡನೆ ಸೇರಿಸಿ ಭೀಷ್ಮದ್ರೋಣಾದಿ ಮಹಾರಥರನ್ನೆಲ್ಲ ಜಯಿಸಿದವನು. ಇವನು ಭಯಪಟ್ಟು ಓಡಿಹೋಗುತ್ತಿದ್ದ ನನ್ನನ್ನೂ ತಡೆದು ನಿಲ್ಲಿಸಿದನು. ಇವನ ಬಾಹುಬಲದಿಂದಲೇ ನಾನು ತಿರುಗಿ ಬದುಕಿ ಬಂದೆನು" ಎಂದನು.

ಈ ಮಾತನ್ನು ಕೇಳಿದೊಡನೆ ವಿರಾಟನು, ಅರ್ಜುನನನ್ನೂ, ಆಮೇಲೆ ಇತರ ಪಾಂಡವರನ್ನೂ ಪ್ರೀತಿಯಿಂದಾಲಿಂಗಿಸಿದನು. ಧರ್ಮರಾಜನಿಗೆ ಕಾಲುಹಿಡಿದು ನಮಸ್ಕರಿಸಿದನು. ಅವರನ್ನು ಎಷ್ಟು ಹೊತ್ತು ನೋಡಿದರೂ ವಿರಾಟನಿಗೆ ತೃಪ್ತಿಯಿಲ್ಲದಂತಾಯಿತು. ಆಮೇಲೆ ಅವನು ಪ್ರೇಮದಿಂದ ಧರ್ಮರಾಜನನ್ನು ಕುರಿತು "ಭಾಗ್ಯವಶದಿಂದ ನೀವೆಲ್ಲರೂ ಕ್ಷೇಮದಿಂದ ಇಲ್ಲಿಗೆ ಬಂದಿರಿ. ದುರಾತ್ಮರಾದ ಕೌರವರಿಗೆ ತಿಳಿಯದಂತೆ ನೀವು ಕಷ್ಟತರವಾದ ಅಜ್ಞಾತವಾಸವನ್ನೂ ದೈವವಶದಿಂದ ಕೊನೆಮುಟ್ಟಿಸಿದಿರಿ. ಧರ್ಮರಾಜಾ! ಇನ್ನುಮೇಲೆ ನನ್ನ ರಾಜ್ಯವೆಲ್ಲವೂ ನಿಮ್ಮದು. ನನ್ನಲ್ಲಿರುವ ದ್ರವ್ಯವೆಲ್ಲವೂ ನಿಮ್ಮದು. ಇವನ್ನೆಲ್ಲ ನಿಮಗೇ ಹಂಚಿಕೊಟ್ಟಿರುವೆನು. ನೀವು ನಿಶ್ಚಿಂತರಾಗಿ ಇಲ್ಲಿಯೇ ಇರಬಹುದು. ನೀವೂ, ನಾವೂ ಭೇದವಿಲ್ಲದಂತೆಯೇ ಇದನ್ನನುಭವಿಸುವೆವು. ಇದರಲ್ಲಿಸಂದೇಹವಿಲ್ಲ" ಎಂದನು.

ಇದು ಎಪ್ಪತ್ತೈದನೆಯ ಅಧ್ಯಾಯವು.



ಪರಲೋಕಸಾಧಕವಾದ ಧರ್ಮದಲ್ಲಿಯೇ ದೃಷ್ಟಿಯುಳ್ಳವನಾಗಿ, ಹೀಗೆಂದು ಹೇಳುವನು. "ಓ ರಾಜಾ! ನನ್ನ ವಿಷಯದಲ್ಲಿ ನೀನೇನೂ ಭಯಪಡಬೇಕಾಗಿಲ್ಲ. ನಿನ್ನ ಮನೋಭಾವವು ಎಂತಹದೆಂಬುದನ್ನು ತಿಳಿದು ನಾನು ಬಹಳ ಸಂತೋಷಗೊಂಡೆನು. ಈಗ ನೀನೂ, ಬ್ರಾಹ್ಮಣರೂ ಪಂಡಿತರೂ ಆದ ನಿನ್ನ ಈ ಮಂತ್ರಿಗಳೂ, ಮಾಡಿದ ಕೆಲಸವು ಒಳ್ಳೆಯದಾಯಿತು. ಅಲಂಕೃತೆಯಾದ ಈ ನಿನ್ನ ಮಗಳನ್ನು ನೋಡಿ ನಾನು ಬಹಳ ಸಂತೋಷಪಟ್ಟೆನು. ಓ ಮಹಾಬಾಹೂ! ನೀನು ಇಷ್ಟು ಹೇಳಿದಮೇಲೆ ನಾನು ಸಂಪೂರ್ಣವಾಗಿ ಮನ್ನಿಸಿದೆನು. ನಿನ್ನ ಮನಸ್ಸಿನಲ್ಲಿ ಕಪಟವಿಲ್ಲವೆಂಬುದನ್ನೂ ನಾನು ಚೆನ್ನಾಗಿ ತಿಳಿದೆನು" ಎಂದನು. ಇದನ್ನು ಕೇಳಿ ವಿರಾಟನಿಗೆ ಪರಮಸಂತೋಷವಾಯಿತು. ಧರ್ಮರಾಜನೊಡನೆ ನಿರ್ಣಯ ಮಾಡಿಕೊಂಡು, ತನ್ನ ಅಧಿಕಾರವನ್ನೂ, ಭಂಡಾರವನ್ನೂ, ಪುರವನ್ನೂ, ಸಮಸ್ತರಾಜ್ಯವನ್ನೂ ಅವನಿಗೆ ಒಪ್ಪಿಸಿದನು.

ಇದು ಎಪ್ಪತ್ತಾರನೆಯ ಅಧ್ಯಾಯವು.

---

ವಿರಾಟನು ತನ್ನ ಮಗಳಾದ ಉತ್ತರೆಯನ್ನು ಅರ್ಜುನನಿಗೆ ಕೊಡಲುದ್ದೇಶಿಸಿದಾಗ ಅರ್ಜುನನು ತನ್ನ ಸೊಸೆಯನ್ನಾಗಿ ಅವಳನ್ನು ಪರಿಗ್ರಹಿಸುವಂತೆ ಹೇಳಿದುದು. ದುರ್ಯೋಧನನು ಪಾಂಡವರಿಗೆ ದೂತಮುಖವಾಗಿ ಅಜ್ಞಾತಪಾಸಕ್ಕೆ ಮೊದಲೇ ತಮ್ಮ ಕಣ್ಣಿಗೆ ಬಿದ್ದುದರಿಂದ ತಿರುಗಿ ಕಾಡಿಗೆ ಹೋಗಬೇಕೆಂದು ಹೇಳಿಕಳುಹಿಸಿದುದು. ಭೀಷ್ಮನು ಈ ಸಂದೇಹವನ್ನು ಪರಿಹರಿಸುವನೆಂದು ಧರ್ಮರಾಜನು ಹೇಳಿಕಳುಹಿಸಿದುದು.

ಓ ಜನಮೇಜಯರಾಜಾ! ಆಗ ವಿರಾಟನು ಯುಧಿಷ್ಠಿರನನ್ನು ಕುರಿತು "ಓ ಮಹಾತ್ಮಾ! ಈಗ ನಾನು ಹೇಳುವ ಮಾತನ್ನು ಕುರಿತು ನೀನು ಸ್ವಲ್ಪವೂ ಶಂಕಿಸಬೇಕಾದುದಿಲ್ಲ. ಇದೋ! ನನ್ನ ನಗರವನ್ನೂ, ರಾಷ್ಟ್ರ

ಸೊಸೆಯನ್ನಾಗಿ ಸ್ವೀಕರಿಸಿ, ತನ್ನ ವ್ರತವನ್ನು ಮುಗಿಸಿ, ತನ್ನ ಶೀಲವನ್ನೂ, ಶುದ್ಧವಾದ ನಡತೆಯನ್ನೂ, ಆಚಾರವನ್ನೂ ಲೋಕಕ್ಕೆ ಪ್ರಕಾಶಗೊಳಿಸಿದನು. ಇದರಿಂದ ಅವನ ಮಹಿಮೆಯೂ, ಕೀರ್ತಿಯೂ ಲೋಕಪ್ರಖ್ಯಾತವಾಯಿತು. ಆಗ ಅರ್ಜುನನು, ಇದರಿಂದ ತಾನು ಕೃತಾರ್ಥನೂ, ಶುದ್ಧನೂ ಆದೆನೆಂದು ತಿಳಿದು ನಿಶ್ಚಿಂತನಾಗಿ ಸಂತೋಷದಿಂದಿದ್ದನು. ಆಗ ಯುಧಿಷ್ಠಿರನು ವಿರಾಟನನ್ನು ನೋಡಿ, "ಮಹಾರಾಜಾ! ನಿನ್ನಲ್ಲಿ ನಾನು ಪ್ರೀತಿಗೊಂಡೆನು. ನಿನಗೆ ಮಂಗಳವಾಗಲಿ. ಈಗ ನೀನು ನನಗೆ ಪರಮಸ್ನೇಹಿತನಾಗಿರುವೆ! ನಾವು ಯಾರಿಗೂ ತಿಳಿಯದಂತೆ ನಿನ್ನ ಆಶ್ರಯದಲ್ಲಿ ಸುಖವಾಗಿ ವಾಸಮಾಡಿದೆವು" ಎಂದನು. ಓ ಜನಮೇಜಯರಾಜಾ! ಧರ್ಮಾತ್ಮನೂ, ಕಠಿನವ್ರತವುಳ್ಳವನೂ ಆದ ಆ ಯುಧಿಷ್ಠಿರನು, ವಿರಾಟನಗರದಲ್ಲಿ ವಿಶೇಷವಾಗಿ ಸತ್ಕರಿಸಲ್ಪಟ್ಟನು. ಅವನಿಗೆ ವಿರಾಟನು ಅಭಿಷೇಕವನ್ನು ಮಾಡಿ, ರತ್ನಗಳಿಂದಲೇ ಅರ್ಚಿಸಿದನು. ಧರ್ಮರಾಜನ ಮಾತನ್ನು ಕೇಳಿ ವಿರಾಟನು ಬಹಳ ಸಂತೋಷಗೊಂಡು, ಅವನನ್ನು ಬಹಳ ಪ್ರೀತಿಯಿಂದ ತೋಳುಗಳನ್ನು ನೀಡಿ ಆಲಿಂಗಿಸಿಕೊಂಡನು. ಪಾಂಡವರಿಗೆ ಬೇಕಾದ ಹಾಗೆ ಧನವನ್ನೂ ಕೊಟ್ಟನು.

ಓ ಜನಮೇಜಯರಾಜಾ! ಕೇಳು! ಇಷ್ಟರಲ್ಲಿ ಯುದ್ಧದಿಂದ ಪರಾಜಿತರಾದ ಕೌರವರೆಲ್ಲರೂ, ದಾರಿಯಲ್ಲಿ ಒಂದಾಗಿ ಸೇರಿ, ಮುಂದೆ ತಮಗೆ ಹಿತವಾದ ಆಲೋಚನೆಯನ್ನು ಮಾಡತೊಡಗಿದರು. ಅಶ್ವತ್ಥಾಮನೂ, ಶಕುನಿಯೂ, ದುರ್ಯೋಧನನೂ, ಕರ್ಣನೂ ಒಂದಾಗಿ ಕಲೆತು, ಧರ್ಮರಾಜನಬಳಿಗೆ ಒಂದು ಸಂದೇಶದೊಡನೆ ಒಬ್ಬ ದೂತನನ್ನು ಕಳುಹಿಸಿಕೊಟ್ಟರು. ಆ ದುರ್ಯೋಧನನ ಕಡೆಯಿಂದ ಬಂದ ಆ ದೂತನು ಧರ್ಮರಾಜನ ಮುಂದೆ ನಿಂತು "ಓ ಪಾರ್ಥಾ! ಈ ಧನಂಜಯನಿಂದ-ತಿರುಗಿ ಹನ್ನೆರಡು ವರ್ಷಗಳವರೆಗೆ ಕಾಡಿಗೆ ಹೋಗಬೇಕಾಗಿ ಬಂದಿತು. ಮಾಡುವುದೇನು ನಿನ್ನ ಪ್ರತಿಜ್ಞೆಗೆ ನೀನು ಬದ್ಧನಾಗಿರು. ಏಕೆಂದರೆ, ನಿನ್ನ ತಮ್ಮನಾದ ಕಿರೀಟಿಯು, ಹದಿಮೂರನೆಯ ವರ್ಷದೊಳಗಾಗಿಯೇ ಕೌರವರ ಕಣ್ಣಿಗೆ ಬಿದ್ದುಬಿಟ್ಟನು" ಎಂದನು. ಈ ಮಾತನ್ನು ಕೇಳಿ ಧರ್ಮರಾಜನು ಘಟ್ಟಿಯಾಗಿ

ನಕ್ಕು, 'ಎಲೈ ದೂತನೆ! ನೀನು ಬೇಗನೆ ಹೋಗಿ ದುರ್ಯೋಧನನಿಗೆ ನನ್ನ ಮಾತಿನಿಂದ ಹೀಗೆಂದು ತಿಳಿಸು. ಶಂತನುಪುತ್ರನೂ, ನಮ್ಮ ಪಿತಾಮಹನೂ ಆದ ಭೀಷ್ಮನು ಇದರ ನಿರ್ಣಯವನ್ನು ಬಲ್ಲನು. ನಮಗೆ ಹದಿಮೂರನೆಯವರ್ಷವು ಮುಗಿದಮೇಲೆಯೇ ಧನಂಜಯನು ಯುದ್ಧಮಧ್ಯದಲ್ಲಿ ತನ್ನ ಧನುಸ್ಸಿನ ಟಂಕಾರಧ್ವನಿಯನ್ನು ತೋರಿಸಿರುವನು. ಅದು ಹೇಗಿದ್ದರೂ, ಹದಿಮೂರನೆಯ ವರ್ಷವು ತುಂಬಿತೋ ಇಲ್ಲವೋ, ಎಂಬುದನ್ನು ಪಿತಾಮಹನು ಹೇಳಲಿ. ಅವನಿಗೆ ಯಾವುದು ನಿಜವೋ, ಅದೇ ನಮಗೂ ಪ್ರಮಾಣವು'' ಎಂದನು. ಒಡನೆಯೇ ದೂತನು ದುರ್ಯೋಧನನ ಬಳಿಗೆ ಬಂದು ನಿಜಾಂಶವನ್ನು ದುರ್ಯೋಧನನಿಗೆ ತಿಳಿಸಿದನು. ಆಗ ದುರ್ಯೋಧನನು ಆ ದೂತನೊಡಗೂಡಿ, ಭೀಷ್ಮ, ದ್ರೋಣ, ಕೃಪ, ಕರ್ಣಾದಿಗಳೊಡನೆಯೂ ಭೂರಿಶ್ರವಸ್ಸಿನೊಡನೆಯೂ, ಇನ್ನೂ ಅನೇಕಮಿತ್ರರೊಡನೆಯೂ ಕಲೆತು, ರಾತ್ರಿಯೆಲ್ಲಾ ಮಂತ್ರಾಲೋಚನೆಯನ್ನು ನಡೆಸಿದನು. ಆಗ ಮಹಾತ್ಮನಾದ ಭೀಷ್ಮನು ದುರ್ಯೋಧನನನ್ನು ಕುರಿತು "ಓ ಕೌರವೇಂದ್ರಾ! ಪಾಂಡವರ ಪ್ರತಿಜ್ಞಾಕಾಲವು ಆಗಲೇ ತೀರಿಹೋಯಿತು. ಆ ಪ್ರತಿಜ್ಞೆಯನ್ನು ಪೂರೈಸಿದಮೇಲೆಯೇ ಅರ್ಜುನನು ಯುದ್ಧದಲ್ಲಿ ತನ್ನ ಗಾಂಡೀವಧ್ವನಿಯನ್ನು ತೋರಿಸಿರುವನು. ಓ ದುರ್ಯೋಧನಾ! ಆ ಪಾಂಡುಕುಮಾರರು ಇಂದ್ರಲೋಕವನ್ನಾದರೂ ಅಸತ್ಯದಿಂದ ಅಪೇಕ್ಷಿಸುವವರಲ್ಲ. ಸತ್ಯಕ್ಕೆ ತಪ್ಪಿ ಬ್ರಹ್ಮಲೋಕವನ್ನೂ ಅವರು ಆಶಿಸುವುದಿಲ್ಲ. ನಿನಗೆ ಹಿತವಾಗಿಯೂ, ಸತ್ಯವಾಗಿಯೂ ಇರುವ ಮಾತನ್ನು ನಾನು ಹೇಳುವೆನು. ನಿನಗೆ ಯಶಸ್ಕರವೂ, ಪರಲೋಕದಲ್ಲಿ ಸದ್ಗತಿಗೂ ಕಾರಣವಾದ ನನ್ನ ಮಾತನ್ನು ಕೇಳು. ಕುಂತೀಪುತ್ರರಾದ ಪಾಂಡವರೊಡನೆ ಈಗಲೂ ಸಂಧಿಯನ್ನು ಮಾಡಿಕೊಂಡು, ಅವರೊಡನೆ ಕಲೆತೇ ನೀನು ರಾಜ್ಯಭೋಗವನ್ನು ಅನುಭವಿಸು. ಹಾಗಿಲ್ಲದೆ, ಸಮಸ್ತರಾಜ್ಯವನ್ನೂ ನೀನೇ ಅನುಭವಿಸಬೇಕೆಂಬ ಆಸೆಯಿದ್ದು, ಯುದ್ಧವನ್ನೇ ಮಾಡಬೇಕೆಂಬ ಹಠವಿದ್ದರೆ, ಯುದ್ಧಕ್ಕಾದರೂ ಸಿದ್ಧನಾಗು. ಮಹಾತ್ಮರೂ, ಬಲಶಾಲಿಗಳೂ ಆದ ಆ ನಿನ್ನ ಶತ್ರುಗಳ ರಾಜ್ಯವನ್ನು ನೀನು ಕೊನೆಯವರೆಗೆ ಇಂತಹ ಕಪಟದಿಂದಲೇ ಅನುಭವಿಸಬೇಕೆಂದರೆ ಎಂದಿಗೂ ನಿನಗೆ ಸಾಧ್ಯವಾಗದು. ನಿನಗೆ ಶಕ್ತಿಯಿದ್ದರೆ ನಿನ್ನ

ಪರಾಕ್ರಮದಿಂದ ಅವರನ್ನು ಜಯಿಸಿ, ಅಖಂಡವಾದ ರಾಜ್ಯವನ್ನನುಭವಿಸು. ಇಲ್ಲವೇ, ಯುದ್ಧದಲ್ಲಿ ನೀನು ಅವರಿಂದ ಹತನಾಗಿ ಸ್ವರ್ಗಸುಖವನ್ನನುಭವಿಸು" ಎಂದನು.

ಓ ಜನಮೇಜಯರಾಜಾ! ಗಂಗಾಪುತ್ರನಾದ ಭೀಷ್ಮನು ಹೇಳಿದ ಈ ಮಾತನ್ನು ಕೇಳಿ ದುರ್ಯೋಧನನು ತನ್ನ ತಾಯಿತಂದೆಗಳಿಗಿದಿರಾಗಿಯೇ ಅವನನ್ನು ಕುರಿತು 'ತಾತಾ! ನಾನು ಆ ಪಾಂಡವರಿಗೆ ರಾಜ್ಯದಲ್ಲಿ ಅಣುಮಾತ್ರವನ್ನಾದರೂ ಕೊಡುವವನಲ್ಲ. ಯುದ್ಧದಲ್ಲಿ ಆ ಪಾಂಡವರೆಲ್ಲರನ್ನೂ ನಾನು ಕೊಲ್ಲುವೆನು. ಇಲ್ಲವೇ, ಅವರಿಂದ ನಾನೇ ಹತನಾಗಿ ಸ್ವರ್ಗಲೋಕವನ್ನು ಸೇರುವೆನು' ಎಂದನು. ಹೀಗೆ ಆ ಧೃತರಾಷ್ಟ್ರಪುತ್ರರೆಲ್ಲರೂ ಅರ್ಜುನನು ತನ್ನ ಪ್ರತಿಜ್ಞೆಯನ್ನು ಪೂರೈಸಿದನೆಂಬುದನ್ನು ತಿಳಿದು, ತನ್ನ ಮಿತ್ರರೊಡನೆ ವಿಧವಿಧವಾದ ಆಲೋಚನೆಗಳನ್ನು ಮಾಡುತಿದ್ದು, ಕೊನೆಗೆ ಎಲ್ಲರೂ ತಮ್ಮತಮ್ಮ ಮನೆಗಳಿಗೆ ಹೋಗಿ ಸೇರಿದರು.

ಇದು ಎಪ್ಪತ್ತೇಳನೆಯ ಅಧ್ಯಾಯವು.



ಅಜ್ಞಾತವಾಸವು ಮುಗಿದಮೇಲೆ ಪಾಂಡವರು ಉಪಪ್ಲಾವ್ಯನಗರಕ್ಕೆ ಬಂದುದು. ಪಾಂಡವರ ಆಹ್ವಾನದಮೇಲೆ ಬಲರಾಮಕೃಷ್ಣರಿಬ್ಬರೂ ಸುಭದ್ರೆಯನ್ನೂ, ಅಭಿಮನ್ಯುವನ್ನೂ ಕರೆದುಕೊಂಡು, ಉಪಪ್ಲಾವ್ಯಕ್ಕೆ ಬಂದುದು. ದ್ರುಪದಾದಿಗಳು ಉಪಪಾಂಡವರೊಡನೆ ಬಂದು ಸೇರಿದುದು. ಅಭಿಮನ್ಯುವಿಗೂ ಉತ್ತರೆಗೂ ವಿವಾಹವು.

ಓ ಜನಮೇಜಯರಾಜಾ! ಕೇಳು! ಆ ಐದುಮಂದಿ ಪಾಂಡವರೂ ಅಜ್ಞಾತವಾಸದಿಂದ ಹದಿಮೂರನೆಯ ವರ್ಷವನ್ನು ಕಳೆದಮೇಲೆ, ಆ ವಿರಾಟನ ರಾಜಧಾನಿಯನ್ನು ಬಿಟ್ಟು, ಆದೇ ರಾಜನಿಗೆ ಸೇರಿದ ಉಪಪ್ಲಾವ್ಯವೆಂಬ ಪುರದಲ್ಲಿ ವಾಸಿಸುತ್ತಿದ್ದರು. ಉತ್ತರೆಗೂ, ಅಭಿಮನ್ಯುವಿಗೂ ವಿವಾಹವು ನಿಶ್ಚಿತವಾದ ಕೂಡಲೆ, ಧರ್ಮರಾಜನು ಬಂಧುಮಿತ್ರರು ಮೊದಲಾಗಿ

ತನ್ನ ಕಡೆಯವರೆಲ್ಲರಿಗೂ ದೂತರ ಮೂಲವಾಗಿ ಆಹ್ವಾನವನ್ನು ಕಳುಹಿಸಿದನು. ವಿರಾಟರಾಜನೂ ತನ್ನ ಬಂಧುಮಿತ್ರವರ್ಗಗಳಿಗೆಲ್ಲ ದೂತರಮೂಲಕವಾಗಿ ಆಹ್ವಾನವನ್ನು ಕಳುಹಿಸಿದನು. ಪಾಂಡವರು ಉಪಪ್ಲಾವ್ಯದಲ್ಲಿದ್ದುಕೊಂಡು, ಅಲ್ಲಲ್ಲಿಗೆ ದೂತರನ್ನು ಕಳುಹಿಸಿದಮೇಲೆ, ವನಮಾಲಿಯಾದ ಶ್ರೀಕೃಷ್ಣನು, ಆ ದೂತವಾಕ್ಯವನ್ನು ಕೇಳಿದಕ್ಷಣವೇ, ಸುಭದ್ರೆಗೆ ಪ್ರಿಯಪುತ್ರನೂ, ತನ್ನ ಸೋದರಳಿಯನೂ ಆದ ಅಭಿಮನ್ಯುವನ್ನೂ, ಅಣ್ಣನಾದ ಬಲರಾಮನನ್ನೂ ಸಂಗಡ ಕರೆದುಕೊಂಡು, ಎಲ್ಲಾ ಯಾದವಪ್ರಧಾನರೊಡಗೂಡಿ, ಶಂಖ, ದುಂದುಭಿ ಮೊದಲಾದ ಮಂಗಳವಾದ್ಯಘೋಷಗಳೊಡನೆ ವಿರಾಟನಗರಕ್ಕೆ ಹೊರಟನು. ಹೃದೀಕಪುತ್ರನಾದ ಕೃತವರ್ಮನು, ಯುಯುಧಾನನು, ಸಾತ್ಯಕಿ, ಅನಾಧೃಷ್ಟಿ, ಅಕ್ರೂರನು, ಸಾಂಬನು, ನಿಶರನು, ಮಹಾಬಾಹುವಾದ ಪ್ರದ್ಯುಮ್ನನು, ಬಲಾಢ್ಯನಾದ ಉಲ್ಮುಕನು, ಈ ಮೊದಲಾದ ಯಾದವರೆಲ್ಲರೂ, ಅಭಿಮನ್ಯುವನ್ನೂ, ಅವನ ತಾಯಿಯಾದ ಸುಭದ್ರೆಯನ್ನೂ ಮುಂದಿಟ್ಟು, ಶ್ರೀಕೃಷ್ಣಬಲರಾಮರೊಡಗೂಡಿ, ಪಾಂಡವರನ್ನು ನೋಡಬೇಕೆಂಬ ಮಹೋತ್ಸಾಹದಿಂದ ಹೊರಟುಬಂದರು. ಬಹುಕಾಲದವರೆಗೆ ಕಾಡಿನಲ್ಲಿ ಪಾಂಡವರೊಡನೆಯೇ ಇದ್ದು, ಕಳೆದ ಒಂದು ವರ್ಷದಿಂದ ಅಜ್ಞಾತವಾಸಕಾಲದಲ್ಲಿ ಅವರನ್ನಗಲಿದ್ದ ಇಂದ್ರಸೇನಾದಿಗಳು, ಒಳ್ಳೇ ಅಲಂಕೃತಗಳಾದ ಅನೇಕ ರಥಸಮೂಹಗಳೊಡನೆ ಹೊರಟುಬಂದರು. ಹತ್ತುಸಾವಿರ ಆನೆಗಳೂ, ಅದಕ್ಕೆ ದ್ವಿಗುಣವಾಗಿ ಕುದುರೆಗಳೂ, ನಿಯುತಸಂಖ್ಯಾಕಗಳಾದ ರಥಗಳೂ, ನಿಖರ್ವಸಂಖ್ಯೆಯುಳ್ಳ ಪದಾತಿಗಳೂ ಅವರೊಡನೆ ಹೊರಟುವು. ಶ್ರೀಕೃಷ್ಣನು ಹೊರಟಾಗ, ವೃಷ್ಣಿಗಳೂ, ಅಂಧಕರೂ, ಭೋಜರೂ ನೂರಾರು ಸಂಖ್ಯೆಯಿಂದ ಅವನನ್ನು ಹಿಂಬಾಲಿಸಿದರು. ಹೀಗೆ ಕೃಷ್ಣನು ಸಮಸ್ತಯಾದವರೊಡನೆ ಹೊರಟುಬರುವ ವೃತ್ತಾಂತವನ್ನು ಕೇಳಿ, ಇತ್ತಲಾಗಿ ಪಾಂಡವರೆಲ್ಲರೂ ಅತ್ಯಂತ ಸಂತೋಷದಿಂದ ವಿರಾಟರಾಜನೊಡಗೂಡಿ, ಶಂಖ, ದುಂದುಭಿ ಮೊದಲಾದ ಮಂಗಳವಾದ್ಯಗಳೊಡನೆ ಕೃಷ್ಣನನ್ನು ಇದಿರುಗೊಳ್ಳುವುದಕ್ಕಾಗಿ ಹೊರಟರು. ಶ್ರೀಕೃಷ್ಣನನ್ನು ಕಂಡೊಡನೆ ಪಾಂಡವರಿಗೆ ಮಿತಿಮೀರಿದ ಸಂತೋಷದಿಂದ ಕಣ್ಣುಗಳಲ್ಲಿ ಆನಂದಬಾಷ್ಪಗಳು ತುಳುಕುತಿದ್ದುವು. ಆಗ ಪಾಂಡವರು

ಶ್ರೀಕೃಷ್ಣನ ಪಾದಗಳನ್ನು ಹಿಡಿದು ನಮಸ್ಕರಿಸಿ “ ಓ ಜನಾರ್ದನಾ! ನಿನ್ನ ಅನುಗ್ರಹದಿಂದ ನಾವು ಕಳೆದ ಹದಿಮೂರುವರ್ಷಗಳನ್ನೂ, ನಿರಪಾಯ ವಾಗಿ ಕಳೆದು, ನಮ್ಮ ಪ್ರತಿಜ್ಞೆಯನ್ನು ನೆರವೇರಿಸಿದೆವು. ಮುಂದೆಯೂ ನೀನೇ ನಮ್ಮನ್ನು ರಕ್ಷಿಸಬೇಕು. ಓ ದೇವದೇವೇಶಾ! ನಿನ್ನಲ್ಲಿ ಮರೆಹೊಕ್ಕಿರುವೆವು” ಎಂದರು.

ಓ ಜನಮೇಜಯರಾಜಾ! ಹೀಗೆಂದು ಹೇಳಿ, ನಮಸ್ಕಾರವಮಾಡಿದ ಆ ಪಾಂಡವರನ್ನು ಕೃಷ್ಣನು ಪ್ರೀತಿಯಿಂದ ಕೈಹಿಡಿದು ಮೇಲಕ್ಕೆತ್ತಿ ಆಲಿಂಗಿಸಿದನು. ಯಾದವರೆಲ್ಲರೂ ಅವರನ್ನು ಯಥೋಚಿತವಾಗಿ ಆದರಿಸಿದರು. ವೃಷ್ಣಿವೀರರೂ ಪಾಂಡವರನ್ನು ಪ್ರೀತಿಯಿಂದ ಸತ್ಕರಿಸಿದರು. ದ್ರೌಪದಿಯು ದೇವಕೀಪುತ್ರನಾದ ಶ್ರೀಕೃಷ್ಣನ ಪಾದಗಳನ್ನು ಹಿಡಿದು ನಮಸ್ಕರಿಸಿದಳು. ದೇವದೇವನಾದ ಕೃಷ್ಣನು ಅವಳನ್ನು ಕೈಹಿಡಿದು ಮೇಲಕ್ಕೆತ್ತಿ, ಅವಳ ಕಣ್ಣುಗಳನ್ನು ತನ್ನ ಸೆರಗಿನಿಂದ ಒರೆಸುತ್ತ, ಸಮಸ್ತರಾದವರ ಮುಂದೆ ಹೀಗೆಂದು ಹೇಳುವನು. “ಎಲೌ ಕಲ್ಯಾಣಿ! ಇನ್ನು ನಿನ್ನ ದುಃಖವನ್ನು ಬಿಡು! ಶೀಘ್ರದಲ್ಲಿಯೇ ನಾನು ಅರ್ಜುನನೊಡನೆ ಸೇರಿ, ಕೌರವರೆಲ್ಲರನ್ನೂ ಕೊಲ್ಲಿಸಿ, ಯುಧಿಷ್ಠಿರನಿಗೆ ರಾಜ್ಯವನ್ನೊಪ್ಪಿಸುವೆನು. ನಿನ್ನ ಮನಸ್ಸಿನ ಚಿಂತೆಯನ್ನು ಬಿಡು! ಇದೋ! ನನ್ನ ಸೋದರಳಿಯನಾದ ಅಭಿಮನ್ಯುವಿನಮೇಲೆಯೂ, ಅರ್ಜುನನಮೇಲೆಯೂ, ನನ್ನ ಮಗನಾದ ಪ್ರದ್ಯುಮ್ನನಮೇಲೆಯೂ ಆಣೆಯಿಟ್ಟು ಹೇಳುವೆನು. ನನ್ನ ಮಾತನ್ನು ಸತ್ಯವೆಂದು ನಂಬು” ಎಂದು ಹೇಳಿ, ಆ ದ್ರೌಪದಿಯನ್ನು ಕಳುಹಿಸಿಕೊಟ್ಟು, ಆಮೇಲೆ ವೃಷ್ಣಿಗಳೊಡನೆಯೂ, ಅಂಧಕರೊಡನೆಯೂ ಸೇರಿ, ಧರ್ಮರಾಜನನ್ನು ಸಂತೋಷಗೊಳಿಸುತ್ತ, ಅವನೊಡನೆ ವಾಸಮಾಡುತಿದ್ದನು. ಇಷ್ಟರಲ್ಲಿಯೇ ಕಾಶೀರಾಜನೂ, ಶೈಬ್ಯನೂ ಒಂದೊಂದು ಅಕ್ಷೋಹಿಣೀ ಸೈನ್ಯಗಳೊಡನೆ ಧರ್ಮರಾಜನಲ್ಲಿಗೆ ಬಂದು ಸೇರಿದರು. ಮಹಾಬಲಾಢ್ಯನಾದ ದ್ರುಪದನು ಮೂರುಅಕ್ಷೋಹಿಣೀ ಸೇನೆಗಳನ್ನು ಸೇರಿಸಿಕೊಂಡು, ದ್ರೌಪದಿಯ ಮಕ್ಕಳಾದ ಉಪಪಾಂಡವರೊಡನೆಯೂ, ತನ್ನ ಮಕ್ಕಳಾದ ಶಿಖಂಡಿ, ಧೃಷ್ಟದ್ಯುಮ್ನರೊಡನೆಯೂ ಉಪಪ್ಲಾವ್ಯಕ್ಕೆ ಬಂದು ಸೇರಿದನು.

[ಇದರ ಮುಂದಿನದು ಉದ್ಯೋಗಪರ್ವವು:—ಆ ಪರ್ವದ ಮೊದಲನೆಯ ಶ್ಲೋಕಾರ್ಥವೇನೆಂದರೆ, ಪಾಂಡವರೆಲ್ಲರೂ ಹೀಗೆ ಅಭಿಮನ್ಯುವಿಗೆ ವಿವಾಹವನ್ನು ಮಾಡಿ, ತಮ್ಮ ಕಡೆಯವರೊಡನೆ ಸಂತೋಷದಿಂದ ಆ ರಾತ್ರಿಯನ್ನು ಕಳೆದು, ಬೆಳಗಾದಮೇಲೆ ವಿರಾಟನ ಸಭೆಗೆ ಬಂದರು.]



ಮದ್ರಾಸು

ಪೀಪಲ್ಸ್ ಪ್ರಿಂಟಿಂಗ್ ಎಂಡ್ ಪಬ್ಲಿಷಿಂಗ್ ಹೌಸ್, ಲಿಮಿಟೆಡ್‌ನಲ್ಲಿ

ಮುದ್ರಿಸಲ್ಪಟ್ಟಿತು.